ಭಾರತ — ದೇಶ ಮತ್ತು ಜನ ಮಾಲೆ

# ಉದ್ಯಾನಗಳು

ಲಯೀಕ್ ಫತೆಅಲಿ

ಅನುವಾದ

ಎಂ.ಆರ್. ಆನಂದರಾಮಯ್ಯ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಛಾಯಾಚಿತ್ರಗಳು: ಅಶ್ವಿನ್ ಮೆಹತ, ಈ. ಹನುಮಂತ ರಾವ್, ಮಿತ್ತರ್ ಬೇಡಿ, ಸುರಯ್ಯ ತ್ಯಾಬ್ಜಿ ಮತ್ತು ಜಫರ್ ಫತೆಅಲಿ ಅವರ ಕೃಪೆ.

ರೇಖಾಚಿತ್ರಗಳು: ಪವನ್ ಸೆಹಗಲ್
ಮುಖಪುಟ: ಕೊಡೈಕೆನಾಲ್ ಗಿರಿಪ್ರದೇಶದಲ್ಲಿನ ಒಂದು ಉದ್ಯಾನ.
(ಫೋಟೋ ಕೃಪೆ: ಕ್ಲೇರ್ ಆರ್ನಿ)

ತಮ್ಮ ತೋಟದ ಚಿತ್ರಗಳನ್ನು ಬಳಸಲು ಅನುಮತಿ ನೀಡಿದ ರ್‍ಯಾಲಿಸ್ ಇಂಡಿಯಾ ಅವರಿಗೆ ನಮ್ಮ ಕೃತಜ್ಞತೆಗಳು.

ISBN 81-237-1389-4

ಮೊದಲ ಮುದ್ರಣ: 1995 (ಶಕ 1916)
ಎರಡನೆಯ ಮುದ್ರಣ: 1998 (ಶಕ 1920)

Gardens *(kannada)*
**ರೂ. 36.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ-110 016, ಇವರಿಂದ ಪ್ರಕಟಿತ.



ಒಂದು ಪೊಟ್ಟಣ ಬೀಜದಿಂದ
ಎಲ್ಲರಿಗಿಂತ ಹೆಚ್ಚಾಗಿ,
ಪಡೆಯುತ್ತಿದ್ದ
ನನ್ನ ತಾಯಿಗೆ

# ಪ್ರಸ್ತಾವನೆ

ಉದ್ಯಾನ ನಿರ್ಮಾಣವನ್ನು ನಾನು ಯಾವಾಗಲೂ ಒಂದು ಕುಶಲಕಲೆಯೆಂದು ಭಾವಿಸಿದ್ದೇನೆ. ವರ್ಣಚಿತ್ರ, ಶಿಲ್ಪಕೃತಿ ಪಾಂಡಿತ್ಯದ ಬಗ್ಗೆ ಎಷ್ಟು ಗಹನವಾಗಿ ಚರ್ಚಿಸುತ್ತೇವೆಯೋ, ಅಷ್ಟಾದರೂ ಅರ್ಹತೆಯನ್ನು ಇದಕ್ಕೂ ಕೊಡಬೇಕು. ಒಂದು ಉದ್ಯಾನ ನಾಲ್ಕು ಪ್ರಮಾಣಗಳುಳ್ಳ ರಸಜ್ಞತೆಯ ಅನುಭವ; ಏಕೆಂದರೆ ರೂಢಿಯಲ್ಲಿರುವ ಮೂರು ಪ್ರಮಾಣಗಳ ಜೊತೆಗೆ 'ಕಾಲ' ಪ್ರಮಾಣವನ್ನೂ ಒಳಗೊಂಡಿದೆ. ಅಲ್ಲದೆ, ಉದ್ಯಾನವು ತನ್ನ ರಸಜ್ಞತೆಯ ಮೌಲ್ಯಗಳಿಗೆ ಭಂಗ ಬರದಂತೆ, ಕಾರ್ಯನ್ವಾನವೂ ಆಗಿರಬೇಕು. ಅಲ್ಲಿ ಜನರು ಓಡಾಡಬಹುದು ಅಥವಾ ಸ್ತಬ್ಧರಾಗಿರಬಹುದು, ಮಕ್ಕಳು ಓಡಾಡಬಹುದು, ಆಟವಾಡಬಹುದು, ಮರ ಹತ್ತಬಹುದು, ಕೊಂಬೆಗಳ ಮೇಲೆ ತೂಗಾಡಬಹುದು. ಇವೆಲ್ಲಕ್ಕಿಂತಲೂ ಹೆಚ್ಚಾಗಿ, ಇಂದಿನ ಆಧುನಿಕ ಕಾಲದಲ್ಲಿ, ವಿಶಿಷ್ಟವಾಗಿ ನೆಮ್ಮದಿ ಮತ್ತು ವಿಶ್ರಾಂತಿಯನ್ನು ತೋರಿಸುವ ಸ್ಥಳವಾಗಿರಬೇಕು.

ವಾಚಕರು ಮುಂದೆ ಕಂಡುಕೊಳ್ಳುವಂತೆ (ನಿಸ್ಸಂದೇಹವಾಗಿಯೂ ಆಶಾಭಂಗಿಗಳಾಗುತ್ತಾರೆ) ಈ ಪುಸ್ತಕವು ತೋಟಗಾರಿಕೆಯ ಒಂದು ಕೈಪಿಡಿಯಲ್ಲ. ಸುಂದರ ಉದ್ಯಾನವನ್ನು ರಚಿಸುವ ಮುನ್ನ ತಿಳಿದುಕೊಳ್ಳಬೇಕಾದ ಮಹತ್ವ ಮತ್ತು ಭಾವಗಳ ಬಗ್ಗೆ ವಿಚಾರಾತ್ಮಕ ಚರ್ಚೆಯೆಂದು ಪರಿಗಣಿಸಿದ್ದೇನೆ. ಅಡಿಯಲ್ಲಿ ಹುದುಗಿರುವ ಪ್ರತ್ಯಕ್ಷ ಆತ್ಮವಿಶ್ವಾಸದ ಜೊತೆಗೆ, ಇದು ನಾನು ನನ್ನ ಸ್ವಂತ ಉದ್ಯಾನವನ್ನು ನಿರ್ಮಿಸುವಾಗ ಮಾಡಿದ ತಪ್ಪುಗಳ ಒಂದು ಕಾಲಾನುಕ್ರಮಣಿಕೆ. ತೋಟಗಾರಿಕೆಯ ವಿಶ್ವಕೋಶದಲ್ಲಿ ತಿಳಿಯಪಡಿಸುವ ಎಲ್ಲಾ ತಪ್ಪುಗಳನ್ನು ನಿರಾಡಂಬರವಾಗಿ ಸಾಧಿಸಿದ್ದೇನೆಂದು ಹೇಳಬಲ್ಲೆ. ಕೆಲವನ್ನು ಎರಡಾವರ್ತಿ ಅಥವಾ ಇನ್ನೂ ಹೆಚ್ಚಾಗಿಯೂ ಮಾಡಿದ್ದೇನೆ. ಇನ್ನೊಂದು ಮಿತಿಯೆಂದರೆ, ನನ್ನ ಉದ್ಯಾನ ಅನುಭವ ಕೇವಲ ಬೊಂಬಾಯಿ ಮತ್ತು ಬೆಂಗಳೂರಿಗೆ ಸೀಮಿತವಾದುದರಿಂದ, ನಾನು ಉಲ್ಲೇಖಿಸಿರುವ ಕೆಲವು ಗಿಡಗಳು ನಮ್ಮ ದೇಶದ ಹಲವು ಭಾಗಗಳಿಗೆ ಸರಿಹೊಂದದಿರಬಹುದು.

ಒಂದು ಪುಸ್ತಕವನ್ನು ಬರೆಯುವಾಗ, ಒಂದು ನಿರ್ದಿಷ್ಟ ಶ್ರೋತೃವೃಂದವನ್ನು

ಸಂಬೋಧಿಸುತ್ತಿರುವಂತೆ, ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬೇಕು. ನಾನು ಯುವಕ ವಾಸ್ತುಶಿಲ್ಪಿ ಮತ್ತು ವಾಸ್ತುಶಿಲ್ಪಜ್ಞರಿಗಾಗಿ ಬರೆಯುತ್ತಿದ್ದೇನೆಂದು ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದೇನೆ. ಹೆಚ್ಚು ಹೆಚ್ಚಾಗಿ ಉದ್ಯಾನ ನಿರ್ಮಾಣ ಮತ್ತು ಸಾರ್ವಜನಿಕ ಕ್ಷೇತ್ರಗಳ ನಿರ್ವಹಣೆಯನ್ನು ಇಂತಹ ಕುಶಲ ತಂತ್ರಜ್ಞರಿಗೆ ವಹಿಸಬೇಕಾಗುತ್ತದೆ. ಅವರಿಗೆ ನಿಸ್ಸಂದೇಹವಾಗಿಯೂ ದಕ್ಷತೆಯಿಂದ ಕೆಲಸ ಮಾಡಲು ಅವಶ್ಯಕ ಜ್ಞಾನವಿರುತ್ತದೆ. ಉದ್ಯಾನ ನಿರ್ಮಾಣ, ಒಂದು ಸ್ವರೂಪ ತೆಗೆದುಕೊಂಡಂತೆಲ್ಲಾ, ಅವರಲ್ಲಿನ ಮನೋವಿಕಾರ ಬೇರು ಬಿಡುವಂತೆ ಈ ಪುಸ್ತಕ ಉದ್ರೇಕಿಸುತ್ತದೆ. ಯಾವುದೇ ಉದ್ಯಾನವನ್ನು ಸಂಪೂರ್ಣವಾಗಿ ಕಾಗದದ ಮೇಲೆ ಯೋಜಿಸಲಾಗುವದಿಲ್ಲವೆಂದು ಹೇಳುತ್ತಾರೆ. ಅದರಲ್ಲಿ ಎಷ್ಟೋ ತಿಳಿಯದ ಮತ್ತು ಮುಂಗಾಣದ ಮೂಲಾಂಶಗಳು ಅಡಗಿರುತ್ತವೆ. ಒಂದು ಉದ್ಯಾನದ ಬಗ್ಗೆ ಕೆಲಸ ಮಾಡುತ್ತಿರುವಾಗ, ಅದು ಮುಗಿಯುವ ಸ್ಥಿತಿಗೆ ಬಂದಾಗಲೂ ಕೂಡ, ಅದರ ರಸಜ್ಞತೆಯ ಸಮಸ್ಯೆಗಳನ್ನು ನಿರಂತರವಾಗಿ ಯೋಚಿಸುತ್ತಿರಬೇಕು. ಈ ವಿಷಯದ ಬಗ್ಗೆ ಓದುತ್ತಿದ್ದರೆ, ನೇರ ಉಪಯುಕ್ತ ಸುದ್ದಿ ದೊರೆಯದಿದ್ದರೂ, ಇನ್ನೂ ಚೆನ್ನಾಗಿ ಯೋಚಿಸಲಿಕ್ಕೆ ಸಹಾಯ ಮಾಡುತ್ತದೆ. ಒಂದು ರೀತಿಯಲ್ಲಿ ಸತ್ಯಾಂಶಗಳಿಗಿಂತ ಹೆಚ್ಚಾಗಿ ಮೌಲ್ಯಗಳ ಬಗ್ಗೆ ನಿವೇದಿಸಲು ಈ ಪುಸ್ತಕದಲ್ಲಿ ಪ್ರಯತ್ನಿಸಿದ್ದೇನೆ.

**ಲಯೀಖ್ ಫತೆಅಲಿ**

# ಪರಿವಿಡಿ



## ಉದ್ಯಾನ ವಿನ್ಯಾಸದ ಮೂಲ ತತ್ವಗಳು

ಪ್ರಥಮ ಪ್ರಸ್ತಾಪ

ಅಖಂಡತೆ

ತೆರಪು

ವರ್ಗಗಳು

ಪ್ರಮಾಣ

ಕಾಲ ಮತ್ತು ಬೆಳಕು

ನೆರಳು

ರಚನೆ

ವರ್ಣ ಸಾಂದ್ರತೆ ಮತ್ತು ವರ್ಣ

ಚಲನೆ

ಶೈಲಿ

# ಉದ್ಯಾನ ವಿನ್ಯಾಸದ ಮೂಲತತ್ವಗಳು

## ಪ್ರಥಮ ಪ್ರಸ್ತಾಪ

ಉದ್ಯಾನಕ್ಕೆ ಆದರ್ಶ ಅಳತೆ ಅಥವಾ ಆಕಾರವಿರುವ ನಿವೇಶನವನ್ನು ಆರಿಸಿಕೊಳ್ಳುವ ಅದೃಷ್ಟ ಕೆಲವರಿಗೇ ಉಂಟು. ಲಭ್ಯವಾದದ್ದನ್ನು ಅತ್ಯಂತ ಉಪಯೋಗಕಾರಿಯಾಗಿ ಮಾಡುವುದೇ ಮುಂದಿನ ಸಮಸ್ಯೆ. ಎಲ್ಲಿ ಕಟ್ಟಡಕ್ಕೆ ಉದ್ಯಾನ ಕೂಡಿಕೊಂಡಿರುವುದೋ, ಅಲ್ಲಿ ತೋಟಗಾರನ ಸ್ವಾತಂತ್ರ್ಯಕ್ಕೆ ಧಕ್ಕೆ ಒದಗುತ್ತದೆ. ಮೊದಲು ಭವನದ ಅವಶ್ಯಕತೆಗಳನ್ನು ಪೂರೈಸಿದ ಮೇಲೆ, ಉಳಿದ ಸ್ಥಳವನ್ನು ಉದ್ಯಾನವಾಗಿ ಅಂದಗೊಳಿಸಬೇಕು.

ಒಂದು ರೀತಿಯಲ್ಲಿ ನಿಕೃಷ್ಟ ನಿವೇಶನಗಳು ಹಲವು ವೇಳೆ ಬಹಳ ಪ್ರತಿಫಲ ಕೊಡಬಲ್ಲವು. ಕಟ್ಟಡಗಳ ಮಧ್ಯೆ ಕೆಲವೇ ಮರಗಳು ಮತ್ತು ಯಾವುದಾದರೂ ನೆಲಹೊದಿಕೆ ಇದ್ದರೆ, ಒಂದು ಅವಲಕ್ಷಣ ಸ್ಥಳವನ್ನು ಕೂಡ ಸುಂದರವಾಗಿ ಇಡಬಲ್ಲವು; ಹಾಗೆಯೇ ಒಂದು ರಮ್ಯ ಸಣ್ಣ ಸ್ಥಳ, ಸುಂದರ ಪರಿಸರಗಳಲ್ಲಿದ್ದರೂ, ಕೆಲವು ವೇಳೆ ಕ್ಲಿಷ್ಟ ಸಮಸ್ಯೆಗಳನ್ನು ಒಡ್ಡಬಲ್ಲದು. ಎಷ್ಟೋ ವೇಳೆ ಅಂತಹ ಪರಿಸರಗಳಲ್ಲಿ, ದುಬಾರಿ ಖರ್ಚು ಮಾಡಿ ನಿರ್ಮಿಸಿದ ಉದ್ಯಾನ, ಹೊರಗಿನ ಭೂಪ್ರದೇಶಕ್ಕಿಂತ ಮನೋಹರವಾಗಿ ಕಾಣುವುದಿಲ್ಲ. ಇದರ ನೀತಿ, ನಿವೇಶನ ಎಷ್ಟೇ ಆಶಾರಹಿತವಾಗಿ ಕಂಡುಬಂದರೂ, ಎಂದಿಗೂ ನಿರಾಶರಾಗಬಾರದು.

*ಎರಡನೇ ನೀತಿ:* ನಿವೇಶನವನ್ನು ಒಂದು ಬಾರಿ ನೋಡಿದಾಕ್ಷಣ, ಉದ್ಯಾನ ನಿರ್ಮಾಣಕ್ಕೆ ಅಗತ್ಯವಾದ ಸುವಿಸ್ತಾರ ಯೋಜನೆಗಳನ್ನು ರೂಪಿಸಲು ಥಟ್ಟನೆ ಧುಮುಕಬಾರದು. ಯಾವಾಗಲೂ ಸ್ಥಳೀಯ ಜೀವನ ರೀತಿ ಮತ್ತು ಸ್ಥಳೀಯ ಭೂ ಸ್ವರೂಪಗಳೊಡನೆ ಹೊಂದಿಕೊಂಡು ಹೋಗುವುದು ಮುಖ್ಯ. ಇವೆರಡಕ್ಕೂ ಅಪಾಯ ತರುವಂಥ ರಚನೆಯನ್ನು ಅದರ ಮೇಲೆ ಹೇರಬಾರದು. ಕೇವಲ ನಿವೇಶನದ ಅಧ್ಯಯನದಿಂದ ಇದನ್ನು ಯಶಸ್ವಿಯಾಗಿ ಮಾಡಲಾರೆವು. ಯೋಜನಾದರ್ಶಕನು, ಸುತ್ತಮುತ್ತಲಿನ ಪ್ರದೇಶಗಳಲ್ಲಿ ಲಕ್ಷ್ಯವಿಟ್ಟು ಓಡಾಡುತ್ತಾ, ಸ್ಥಳೀಯ ಮರಗಳು ಮತ್ತು ಸಸ್ಯವರ್ಗ, ಅವುಗಳ ವಿಶಿಷ್ಟ ಬೆಳವಣಿಗೆಯ ಸ್ವಭಾವಗಳನ್ನು ಗುರುತು ಹಾಕಿಕೊಳ್ಳಬೇಕು. ಅವನ ಇಂದ್ರಿಯಗಳು ಎಚ್ಚರಿಕೆಯಿಂದ ಕೆಲಸ ಮಾಡುತ್ತಿದ್ದರೆ, ನಡೆಯುತ್ತಿರುವಾಗಲೂ, ಉದ್ಯಾನಕ್ಕೆ ಒಂದು ಮೂಲವಸ್ತು

ಅಥವಾ ರಚನೆಯ ಅಂಶವನ್ನು ಪ್ರೇರೇಪಿಸಬಹುದು. ಅದು ಒಂದು ವ್ಯವಸ್ಥಿತ ರಚನೆಯಾಗಿರಬಹುದು ಮತ್ತು ಕೆಲವು ವಿಶಿಷ್ಟ ಸಸ್ಯಕೂಟಗಳ ತೀವ್ರತೆ ಇರಬಹುದು. ಅಥವಾ ಒಂದು ಮುಖ್ಯ ಸ್ಥಳೀಯ ಆಕಾರವನ್ನು ಮಹತ್ತರಗೊಳಿಸುವಂತಹದ್ದಾಗಿರಬಹುದು. ಬೇರೆ ರೀತಿಯಲ್ಲಿ ಹೇಳಬೇಕಾದರೆ, ಉದ್ಯಾನದ ನಕ್ಷೆ ನಿವೇಶನದ ಅಂತರಾಳದಿಂದಲೇ ಬರಬೇಕು ಮತ್ತು ಒಳಹುದುಗಿರುವ ನಿಗೂಢ ಸೌಂದರ್ಯವನ್ನು ಪ್ರಸ್ತುತಪಡಿಸಬೇಕು.

ಕೆಲವು ಒರಟಾದ ದೃಷ್ಟಾಂತರಗಳಿಂದ ವಿವರಿಸುವುದಾದರೆ, ಬೊಂಬಾಯಿಯ ಹೊರಗಡೆ ಇರುವ ಪಶ್ಚಿಮ ಘಟ್ಟಗಳು, ದೊಡ್ಡ ಕಪ್ಪು ಬಂಡೆಗಳಿಂದ ಆವೃತವಾಗಿ, ಇಳಿಜಾರುಗಳನ್ನು, ಹುಲ್ಲು ಬೆಳೆದು ನೆರಳು ನೀಡುವ ಸ್ಥಳೀಯ ಮರಗಳ ಮೆಳೆಗಳನ್ನೊಳಗೊಂಡಿರುವ ಒಂದು ಬಗೆಯ ಉದ್ಯಾನವನ್ನು ಸೂಚಿಸಬಹುದು. ಅಂತಹ ನಿವೇಶನವನ್ನು ಅಂತಸ್ತುಗಳಾಗಿ ಪರಿವರ್ತಿಸುವುದರಿಂದ, ಅದು ಉತ್ತಮಗೊಳ್ಳುವುದಿಲ್ಲ ಮತ್ತು ಬಹಳ ದುಬಾರಿಯಾಗಬಹುದು. ಮಾಂಸಲಗಳಿಂದ ಸಣ್ಣ ಕಲ್ಲೊಡ್ಡುಗಳನ್ನು ನಿರ್ಮಿಸುವುದು ಅಸಮಂಜಸವಾಗುವುದು. ಸಂಪೂರ್ಣ ಗುಡ್ಡಗಾಡು ಒಂದು ವ್ಯಾಪಕವಾದ ಹೋಲಿಸಲಾಗದ ಶಿಲೋದ್ಯಾನ ಮತ್ತು ಚಿಕ್ಕ ಕೃತಕ ವಸ್ತುಗಳನ್ನು ಅದರ ಮೇಲೆ ಹೇರುವುದು ತಿಳಿಗೇಡಿತನ. ಕ್ಯಾಕ್ಟಿಗಳು ಮರುಭೂಮಿಯ ಗಿಡಗಳು, ಮಳೆ ಹೊಯ್ಯುವ ಘಟ್ಟಗಳು ಅವುಗಳಿಗೆ ಸೂಕ್ತವಾದ ಸ್ಥಳವಲ್ಲ.

ಸಮುದ್ರ ತೀರದಲ್ಲಿನ ಉದ್ಯಾನದಲ್ಲಿ, ಮರಳು, ಬಂಡೆ ಮತ್ತು ಕ್ಯಾಸರಿಕೆ ಅಥವಾ ತೆಂಗಿನ ತಾಳೆಗಳ ತಂಡಗಳು ಪರಿಣಾಮಕಾರಿಯಾಗಿರುತ್ತವೆ. ಇವುಗಳಿಗಿಂತಲೂ ಬೇರೆ ಇನ್ನಾವುವೂ ಅಲ್ಲಿ ಮೋಹಕವಾಗಿರುವುದಿಲ್ಲ. ಕೆಮ್ಮಣ್ಣು ಮತ್ತು ವಾರ್ಷಿಕಗಳನ್ನು ಅಲ್ಲಿ ಆಮದು ಮಾಡಲು ಪ್ರಯತ್ನಿಸಿದರೆ, ಅದು ಉತ್ತಮಗೊಳಿಸುವ ಬದಲು ಅಗ್ಗವಾಗಿ ಕಾಣುತ್ತದೆ.

ಮೊಗಲರು ಗುಡ್ಡಗಾಡುಗಳಲ್ಲಿ ಅತ್ಯಂತ ಕೃತಕ ಉದ್ಯಾನಗಳನ್ನು ಮಾಡಿದರು ಮತ್ತು ಅದರಲ್ಲಿ ಯಶಸ್ವಿಯಾಗಿದ್ದರು ಕೂಡಾ. ಪ್ರಾಯಶಃ, ನಾವೂ ಅಷ್ಟೇ ನೀರನ್ನು, ಅಂಥ ಕುಶಲಕರ್ಮಿಗಳನ್ನು, ಅಷ್ಟೇ ಆಳುಗಳನ್ನು ಬಳಸಿದರೆ, ಅಂಥದೇ ಬಹಳ ಕೃತಕ ಜೀವನ ಮತ್ತು ವಿನೋದ ಪ್ರದರ್ಶನಗಳನ್ನು ಮಾಡಿದರೆ, ನಾವು ಕೂಡ ಯಶಸ್ವಿಯಾಗಬಹುದು. ಪ್ರಾಚೀನ ಮೊಗಲರ ಉದ್ಯಾನಗಳನ್ನು ನಾವು ಎಷ್ಟೇ ಹೊಗಳಿದರೂ ಕೂಡ, ನಾನು ಯೋಚಿಸುವಂತೆ, ಉದ್ದೇಶಪೂರ್ವಕವಾಗಿ ಅಂಥದನ್ನು ಅನುಕರಿಸುವ ಪ್ರಶ್ನೆ ಏಳುವುದಿಲ್ಲ. ಏಕೆಂದರೆ ಇಂದಿನ ಪ್ರಾಕೃತಿಕ, ಸಾಮಾಜಿಕ ಪರಿಸ್ಥಿತಿಗಳು ಮತ್ತು ಅಭಿರುಚಿಗಳು ಬಹಳ ಬೇಗ ಬದಲಾವಣೆಗೊಂಡಿವೆ.

ಎಲ್ಲಿ ನಿವೇಶನವು ಕಡಿದಾಗಿಲ್ಲದೆ, ಏರಿಳಿತಗಳಿದ್ದರೆ, ಅಲ್ಲಿ ಅದನ್ನು ಮೇಜುಗೋಲಿ ಚಪ್ಪಟೆಯಂತೆ ಸಮ ಮಾಡುವುದು ಭಾರತದಲ್ಲಿ ಸಾಮಾನ್ಯ ಪದ್ಧತಿ. ಯಾವುದೋ ಅರಿಯದ ಕಾರಣಗಳಿಂದಾಗಿ, ಸೂಕ್ತವಾದ ಹುಲ್ಲು ಹಾಸುಗೆ,

ಬೇರೇನೂ ಇಲ್ಲದಿದ್ದರೂ, ಒಂದೇ ಸಮ ಅಥವಾ ಮಟ್ಟ ಇರಬೇಕೆಂಬುದು ನಮ್ಮ ಕಲ್ಪನೆಯಾಗಿದೆ. ನೀರು ಸರಾಗವಾಗಿ ಬಸಿದುಹೋಗುವುದಾದರೆ, ಬಾಹ್ಯ ಎಲ್ಲೆಕಟ್ಟಿಗೆ ಅನುಗುಣವಾಗಿ ನಿರ್ಮಿಸಿದ ಹುಲ್ಲುಹಾಸು ಬಹಳ ಸುಂದರವಾಗಿಯೂ ಮತ್ತು ಹಿತವಾಗಿಯೂ ಇರುತ್ತದೆ. ಮುಖ್ಯವಾಗಿ ಗಮನಿಸಬೇಕಾದ ವಿಷಯವೆಂದರೆ, ಬೇರೆಡೆಯಲ್ಲಿ ಇರುವಂತೆ ಇಲ್ಲಿ ಕೂಡ ಒಳ್ಳೆ ಡೊಂಕುಗಳು ಮತ್ತು ಕೆಟ್ಟ ಡೊಂಕುಗಳು, ಆಕರ್ಷಕವಾದ ಇಳಿಜಾರುಗಳು ಮತ್ತು ಅವಲಕ್ಷಣದ ಇಳಿಜಾರುಗಳು ಇರುತ್ತವೆ. ನಕ್ಷೆಯಲ್ಲಿ ಬರೆಯುವಂತೆ, ಕರಾರುವಾಕ್ಕಾಗಿ ಬಾಗುಗಳನ್ನು ಮಾಡದಿದ್ದರೆ ಅವು ಆಕಾರವಿಲ್ಲದೆ, ನಿರ್ಣಯಧಾರಕವಾಗಿರುವುದಿಲ್ಲ.

ಇಂದು ಭಾರತದಲ್ಲಿ ನಿವೇಶನದ ಆಕಾರವನ್ನು ಸ್ಪಷ್ಟವಾಗಿ ನಿರ್ಣಯಿಸಿದ ನಂತರ, ಉದ್ಯಾನವನ್ನು ಪ್ರಾರಂಭಿಸುವುದು ಒಳ್ಳೆಯದು. ಹಿಂದಿನ ಕಾಲದಲ್ಲಿ ರಕ್ಷಣೆಗೋಸ್ಕರ ಇದು ಅವಶ್ಯವೆಂದು ಪರಿಗಣಿಸಿದ್ದರು. ತರುವಾಯ 18 ಮತ್ತು 19ನೇ ಶತಮಾನಗಳಲ್ಲಿ ಆಂಗ್ಲೇಯರು ಉದ್ಯಾನಗಳು ಅನಿರ್ಬಂಧವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಹೊಕ್ಕುವಂತೆ ಮತ್ತು ಇವೆರಡರ ಮಧ್ಯೆ ಯಾವ ತಡೆಗಟ್ಟೂ ಇಲ್ಲದಿರುವಂತಿರುವ ಭಾವನೆಯನ್ನು ಕಲ್ಪಿಸಿಕೊಂಡರು. ಇದರಿಂದಾಗಿ ಉದ್ಯಾನ ಹಳ್ಳಿಗಾಡಿನಲ್ಲಿ ಲೀನವಾಯಿತು. ಉದ್ಯಾನದ ಕೃತಕ ಭಾಗಗಳು ಮನೆಗೆ ಸಮೀಪದಲ್ಲಿದ್ದು ಅದರ ಹೊರಗಿನ ಅಂಚುಗಳು ಸುಧಾರಿಸಿದ ಭೂದೃಶ್ಯದಂತೆ ಕಾಣುವ ಹಾಗೆ ಮಾಡಿದರು.

ಭಾರತದಲ್ಲಿ ಗಟ್ಟಿಮುಟ್ಟಾದ ಬೇಲಿ ಮತ್ತು ಗೋಡೆಗಳ ಅವಶ್ಯಕತೆ ಇತ್ತು ಮತ್ತು ಈಗಲೂ ಇದೆ. ವಿಧ್ವಂಸ ಕೃತ್ಯಗಳು, ಆಸ್ತಿಪಾಸ್ತಿ ಹಕ್ಕುಗಳಿಗೆ ಲಕ್ಷ್ಯ ಕೊಡದಿರುವುದು, ಸಾಮಾನ್ಯ ಪುಂಡಾಟಿಕೆ, ಅಲೆದಾಡುವ ದನಗಳು, ಗೊತ್ತು ಗುರಿಯಿಲ್ಲದೆ ತಿರುಗಾಡುವ ಜನ ಬಹಳ ಹೆಚ್ಚಾಗಿರುವುದರಿಂದ, ಉದ್ಯಾನಕ್ಕೆ ಮಜಬೂತಾದ ಬೇಲಿಯಿಲ್ಲದಿದ್ದರೆ ಅದನ್ನು ಕಾಪಾಡುವುದು ಸಾಧ್ಯವೇ ಇಲ್ಲ. ಯಾವುದೇ ತೆರನಾದ ಬೇಲಿ ಅತ್ಯಗತ್ಯ. ನನ್ನ ಪ್ರಕಾರ, ಉದ್ಯಾನ ನಿರ್ಮಾಣಕ್ಕೆ, ಅಭಿನ್ನವಾದ ಹೊರಎಲ್ಲೆಯ ಗೋಡೆ ಬಹಳ ಅನಾನುಕೂಲ, ಆದರೆ ಬೇರೆ ಯಾವ ಪರಿಣಾಮಕಾರಿ ವಿಧಿಯಿಲ್ಲ. ಇದಕ್ಕೆ ಭಾಗಶಃ ಪರಿಹಾರವೆಂದರೆ, ಗೋಡೆಯನ್ನು ಒಂದು ಸವಾಲಿನಂತೆ ಸ್ವೀಕರಿಸಿ, ಗಿಡನೆಡುವಿಕೆಯಿಂದ ಅದರ ಪರಿಣಾಮಗಳನ್ನು ನಿಕೃಷ್ಟಗೊಳಿಸುವುದು. ಒತ್ತಾಗಿ ಮತ್ತು ಭಾವಾತ್ಮಕವಾಗಿ, ಅವಲಕ್ಷಣದ ಮೂಲೆಗಳನ್ನು ಮುಚ್ಚುವುದರಿಂದ ಅದರ ರೂಪ ಬದಲಾಯಿಸಿ ಅಥವಾ ಅರೆಮರೆಯಾಗಿ ಮುಚ್ಚಿ, ಎಲ್ಲಿ ಅವಶ್ಯಕವೋ ಅಲ್ಲಿ ಅದರ ರೇಖೆಯನ್ನು ಮುರಿಯುವಂತೆ, ಎರಡನೆ ಒಳಎಲ್ಲೆಯನ್ನು ಕುತೂಹಲ ಜನಕವಾಗಿ ಕಲ್ಪಿಸುವುದು. ಇಂತಹ ಕೆಲವು ಸಾಮಾನ್ಯ ಕೃತಿಮೆಗಳನ್ನು ಮಾಡುವ ಬಗ್ಗೆ, ಮುಂದಿನ ಅಧ್ಯಾಯದಲ್ಲಿ, ಅಂದರೆ ಮರ ಮತ್ತು ಹೊದರುಗಳ ಉಪಯೋಗಗಳನ್ನು ಹೇಳುವಾಗ ಚರ್ಚಿಸಲಾಗುವುದು.

ಗೋಡೆ ಅವಶ್ಯಕವಾಗಿರುವುದರಿಂದ, ಮೊದಲನೆ ಸಮಸ್ಯೆ ಅದನ್ನು ಸಾಧ್ಯವಾದ ಮಟ್ಟಿಗೂ ಕಾಣದಂತೆ ಮಾಡುವುದು. ಸ್ಥೂಲವಾಗಿ, ಬೇರೆ ಅವಕಾಶಗಳೆಂದರೆ

ಹಸಿಬೇಲಿ, ಕಟಕಟೆ ಮತ್ತು ಘನವಾದ ಗೋಡೆ ಹಾಕುವುದು. ಹಸಿಬೇಲಿಯನ್ನು ದುರಸ್ತಿಯಲ್ಲಿಡುವುದು ಕಷ್ಟ, ಆದರೆ ಒಂದು ಚಿಕ್ಕ ನಿವೇಶನಕ್ಕೆ ಅದು ಒಳ್ಳೆ ಪರಿಹಾರ. ಅಥವಾ ಆತ್ಮೀಯ ನೆರೆಹೊರೆಯುವರ ಮಧ್ಯೆ ಒಂದು ತರಹ ತೆರೆಯ ಹಾಗೆ ಕೆಲಸ ಮಾಡುತ್ತದೆ. ನನಗೆ ಕಂಡಂತೆ, ಹುಷಾರಾಗಿ, ನಿರ್ದಿಷ್ಟ ಪ್ರಮಾಣದಲ್ಲಿ, ಮರದ ಅಥವಾ ಬೊಂಬಿನ ಪಟ್ಟಿಗಳಿಂದ ತಯಾರಿಸಿದ ರಚನೆ, ಒಂದು ಒಳ್ಳೆ ಬೇಲಿಯಾಗುತ್ತದೆ. ಉದ್ಯಾನದಲ್ಲಿ ಸಮತಲ ರೇಖೆಗಳನ್ನು ಕೂಡಿಸುವುದು ಯಾವಾಗಲೂ ಕಷ್ಟ. ಈ ರೇಖೆಗಳು ಸ್ಥೂಲ ಆದರೆ ಅವಿಚ್ಛಿನ್ನ; ಭಾಗಶಃ ಹುದುಗಿರುತ್ತವೆ. ಅಡ್ಡಪಟ್ಟಿಗಳಿಂದ ಸುತ್ತುವರಿಯಲ್ಪಟ್ಟ ಉದ್ಯಾನ, ಸ್ಥಿಮಿತ ಅಥವಾ ಶಾಂತತೆಯನ್ನು ಸೂಚಿಸುತ್ತದೆ. ಇನ್ನೊಂದೆಡೆ, ಮೊನೆದಸಿ ಬೇಲಿಯ ನಿಂತಿರುವ ಪಟ್ಟಿಗಳು ಅತಿ ಸೂಕ್ಷ್ಮವಾಗಿ ಶಾಂತಿಯನ್ನು ಭಂಗ ಮಾಡುತ್ತವೆ. ಏಕೆಂದರೆ ನೆಟ್ಟಗೆ ಬೆಳೆಯುವ ಕ್ರೋಟನ್ ಮತ್ತು ಇತರೆ ಸುಲಭವಾಗಿ ಬೆಳೆಯುವ ಹೊದರುಗಳ ಎತ್ತರ ಮತ್ತು ಮಾದರಿಯನ್ನು ಇದು ಅನುಕರಿಸುತ್ತದೆ.

ಇವೆಲ್ಲಕ್ಕಿಂತಲೂ ಹೆಚ್ಚಾಗಿ ಕ್ಷಮಿಸಲಾಗದ ದುಷ್ಕಾರ್ಯವೆಂದರೆ ತನ್ನಡೆಗೆ ಗಮನವನ್ನು ಸೆಳೆಯುವ ಗೋಡೆಯನ್ನು ಕಟ್ಟುವುದು. ಬಣ್ಣಬಣ್ಣದ ಕಲ್ಲುಗಳನ್ನು ಆರಿಸಿ ಕಟ್ಟಿದ ವಿಚಿತ್ರ ಮಾದರಿಯ ಗೋಡೆಗಳು ಎಲ್ಲ ಉದ್ಯಾನಗಳಿಗೂ ಅಶ್ಲೀಲ, ಮತ್ತು ಒಳ್ಳೆಯ ಕೆಲಸವನ್ನು ಮಾಡಲಿಕ್ಕೆ ಬೇಕಾಗುವ ಕ್ಷೇತ್ರವನ್ನು ಹೊಂದುವ ಬಯುಕೆಯನ್ನು ಮೊದಲಿನಲ್ಲಿಯೆ ಹಾಳು ಮಾಡುತ್ತದೆ. ಒಂದು ತರಹ ಗಿಡಗಳಿಗೆ, ಸರಳವಾದ ಬಿಳಿ ಗೋಡೆ ಯಶಸ್ವಿ ಹಿನ್ನೆಲೆ. ವರ್ಷದ ಬಹುಭಾಗ ಸೂರ್ಯತಾಪವನ್ನು ಹೊಂದುವ ಒಣಪ್ರದೇಶಗಳಲ್ಲಿ, ಇದು ವಿಶೇಷ ಸೌಂದರ್ಯವನ್ನು ನೀಡುತ್ತದೆ ಮತ್ತು ವಿಶಿಷ್ಟವಾಗಿ ಎದುರಿಗೆ ನೆಟ್ಟ ಅಲಂಕಾರಿಕ ಎಲೆಗಿಡಗಳ ಛಾಯೆ, ಮೊದಲೆ ಇರುವ ಅನೇಕ ರಚನೆಗಳ ಜೊತೆಗೆ, ಇನ್ನೊಂದು ತರಹ ರಚನೆಯನ್ನು ಒದಗಿಸುತ್ತದೆ. ಆದರೂ ಕೂಡ ಬಹುತೇಕ ಪರಿಸ್ಥಿತಿಗಳಲ್ಲಿ, ಸುರಕ್ಷಿತ ಮತ್ತು ಕನಿಷ್ಟ ಆಕ್ಷೇಪಣೀಯುವಾದ ಮಾದರಿಯೆಂದರೆ ಗಾರೆ ಮಾಡದ ಕಚ್ಚಾ ಕಲ್ಲು ಅಥವಾ ಇಟ್ಟಿಗೆ ಗೋಡೆ.

ಗೋಡೆ ಅಥವಾ ಬೇಲಿ, ಕಟ್ಟಡದೊಂದಿಗೆ ನಿಕಟ ಸಂಬಂಧವನ್ನು ಹೊಂದಿರುತ್ತೆಂಬುದು ಸಾಮಾನ್ಯ ಭಾವನೆ. ಒಂದು ಪ್ರಭಾವ ಬೀರುವ ಕಟ್ಟಡ, ಒರಟಾದ ಅಪರಿಷ್ಕೃತ ಬೇಲಿಯಿಂದ ಸುತ್ತುಗಟ್ಟಲ್ಪಟ್ಟಿದ್ದರೆ, ಅದು ಅಸಂಬದ್ಧವಾಗಿ ಕಾಣುತ್ತದೆ; ತದ್ವಿರುದ್ಧವಾಗಿ ಒಂದು ಚಿಕ್ಕ ಒಡ್ಡಾದ ಬಂಗಲೆ ಎತ್ತರವಾದ ದಪ್ಪನೆಯ ಕಲ್ಲು ಗೋಡೆಯಿಂದ ಸುತ್ತುವರೆದಿದ್ದರೆ, ಹಾಸ್ಯಾಸ್ಪದವಾಗಿರುತ್ತದೆ. ಸಾರ್ವಜನಿಕ ವಿಹಾರ ಪ್ರದೇಶಗಳಲ್ಲಿ ಮತ್ತು ಉದ್ಯಾನಗಳಲ್ಲಿ ದನ ಮತ್ತು ದುಷ್ಟರನ್ನು ಹೊರಗಿಡಲು ಒಂದು ವ್ಯವಸ್ಥೆ ಇರಬೇಕು ಮತ್ತು ದಾರಿಹೋಕರಿಗೆ ಹಸಿರು ಮತ್ತು ಶಾಂತ ಆವರಣದ ಲಾಭ ದೊರೆಯುವಂತಿರಬೇಕು. ಬಲವಾದ ತಂತಿಯ ಜಾಲರ ಅಥವಾ ಕೊಂಡಿ ಸರಪಣಿ ಜಾಲರಿ ಬಹಳ ಸೂಕ್ತವಾದದ್ದು. ಮಸುಕಾದ ಬಣ್ಣಗಳಿಂದ, ಅದರಲ್ಲೂ ಕಪ್ಪು ಬಣ್ಣದಿಂದ ಬಳೆದರೆ, ಜಾಲರಿ ಬಹುಮಟ್ಟಿಗೆ ಕಾಣದಂತಿರುವುದು.

ಈ ಎಲ್ಲ ಕಟ್ಟಿನೊಳಗೆ, ಉದ್ಯಾನದ ಯಥಾರ್ಥ ರಚನೆ, ಸ್ವಲ್ಪ ಮಟ್ಟಿಗೆ ಕಟ್ಟಡದ ಶೈಲಿ ಮತ್ತು ಅದರ ಕಾರ್ಯವನ್ನು ಅವಲಂಬಿಸಿದೆ ಮತ್ತು ಬಹುಮಟ್ಟಿಗೆ ಉದ್ಯಾನ ಯಾವ ಗುರಿ ಅಥವಾ ಗುರಿಗಳನ್ನು ನಿರ್ವಹಿಸಬೇಕೆಂಬುದರ ಮೇಲೆ ಅವಲಂಬಿಸಿದೆ.

ಆದರೂ ಒಂದು ಉದ್ಯಾನ ಎಲ್ಲರಿಗೂ ಎಲ್ಲ ವಿಷಯಗಳನ್ನು ಹೇಳುವಂಥದ್ದಾಗಿರಬೇಕು; ಪ್ರತಿಯೊಂದು ಉದ್ಯಾನವೂ ಯಾವುದಾದರೂ ಒಂದು ನಿರ್ದಿಷ್ಟ ಗುರಿಗೆ ಪ್ರಾಮುಖ್ಯತೆಯನ್ನು ಕೊಡಬೇಕು. ಉದಾಹರಣೆಗೆ, ಒಂದು ಕಾರ್ಖಾನೆಯ ಸುತ್ತಲಿರುವ ಸ್ಥಳ, ಕೆಲಸಗಾರರು ತಮ್ಮ ವಿರಾಮ ವೇಳೆಯಲ್ಲಿ ವಿಶ್ರಮಿಸಿಕೊಳ್ಳುವ ಗುರಿಯಿಂದ ವ್ಯವಸ್ಥಿತಗೊಳಿಸಬೇಕು. ವಾಸಿಸುವ ಕ್ಷೇತ್ರಗಳಲ್ಲಿನ ಸಾರ್ವಜನಿಕ ವಿಹಾರ ಪ್ರದೇಶಗಳನ್ನು ನಿರ್ಮಿಸುವಾಗ, ಜನರು ಮನೋಹರ ಪರಿಸರಗಳಲ್ಲಿ ಓಡಾಡಲು, ಅಥವಾ ಸಣ್ಣ ಮಕ್ಕಳ ವಿಹಾರಕ್ಕೆ ಸೂಕ್ತವಾಗಿರುವಂತಿರಬೇಕು. ಒಂದು ಚಿಕ್ಕ ಮನೆಯ ಸುತ್ತ ಉದ್ಯಾನವನ್ನು ನಿರ್ಮಿಸುವಾಗ, ಮುಖ್ಯವಾಗಿ ಅದು ಅತಿಥಿಗಳು ಕುಳಿತುಕೊಳ್ಳಲು, ಊಟ ಮಾಡಲು, ಆದರಿಸಲು ಸೂಕ್ತವಾಗಿರುವಂತೆ ರಚಿಸಬೇಕು. ಅಥವಾ ಒಬ್ಬ ತೋಟಗಾರನಿಗೆ, ತೋಟಗಾರಿಕೆಯ ವಿಜ್ಞಾನದಲ್ಲಿ ಆಸಕ್ತಿ ಇದ್ದರೆ, ಅಂಥವನು ಸಸ್ಯಶಾಸ್ತ್ರ ಮತ್ತು ತೋಟಗಾರಿಕೆಯ ಪ್ರಯೋಗಗಳನ್ನು ಮಾಡಲು, ತನ್ನ ತೋಟವನ್ನು ಪ್ರಯೋಗಶಾಲೆಯನ್ನಾಗಿ ಉಪಯೋಗಿಸುವಂತಿರಬೇಕು. ಅನೇಕ ವೇಳೆ ಉದ್ಯಾನ ವಿವಿಧ ಧ್ಯೇಯಗಳಿಗಾಗಿ ಉಪಯೋಗಿಸುವಂತಿರಬೇಕು. ಆದಾಗ್ಯೂ ಯಾವಾಗಲೂ ಒಂದೆರಡು ಪ್ರಧಾನ ಕ್ರಿಯೆಗಳು ಮಿಕ್ಕೆಲ್ಲವನ್ನೂ ಅಪ್ರಧಾನತೆಗೆ ಗುರಿಪಡಿಸುವಂತಿರಬೇಕು. ಆದುದರಿಂದ ಪ್ರಯೋಗಶಾಲೆಯ ಆದರ್ಶವನ್ನು ಮನಸ್ಸಿನಲ್ಲಿಟ್ಟುಕೊಂಡಿರುವವನು, ತನ್ನ ಮಕ್ಕಳ ಆಟಗಳಿಗೆ ಸ್ಥಳವಿಲ್ಲವಂತೆ, ನಿವೇಶನವನ್ನು ಮಾದರಿ ಗಿಡಗಳಿಂದ ತುಂಬಬಾರದು ಮತ್ತು ವಿನೋದ ಪ್ರದರ್ಶನಕ್ಕೆ ಬೇಕಾಗುವ ಹೊರಾಂಗಣದ ಪೀಠೋಪಕರಣಗಳನ್ನು, ಇತರೆ ತೋಟಗಾರಿಕೆಯ ಸಂತೋಷಗಳಿಗೆ ಸ್ಥಳವಿಲ್ಲದಂತೆ ತುಂಬಬಾರದು.

ಉದ್ಯಾನದ ಪ್ರತಿಯೊಂದು ಪ್ರಧಾನ ಲಕ್ಷಣವನ್ನು ಬಹಳವಾಗಿ ಉಪಯೋಗಿಸುವಂತಿರಬೇಕು. ಒಂದು ವೇಳೆ ಸಸ್ಯಶಾಸ್ತ್ರಜ್ಞ ಒಂದು ಪರದೇಶಿ ಗಿಡ ಅಥವಾ ಕುತೂಹಲಕಾರಿ ಮಾದರಿ ಗಿಡ ನೆಟ್ಟರೆ, ನೆಡುವ ಸ್ಥಳ ಮುಖ್ಯ. ಅದರ ನೆರಳು ಯಾವುದಕ್ಕಾದರೂ ಪ್ರಯೋಜನವಾಗುವಂತೆ, ಅಥವಾ ಅದು ಒಂದು ತೆರೆಯಾಗಿರುವಂತೆ ಅಥವಾ ಇನ್ನಾವುದಕ್ಕಾದರೂ ಪ್ರಯೋಜನವಾಗುವಂತೆ ಇರಬೇಕು. ಬೆಡಗಿಗಾಗಿ ಮಾಡಲ್ಪಟ್ಟ ಹುಲ್ಲುಹಾಸು, ಮಕ್ಕಳ ಕ್ರೀಡೆಗಳಿಂದ ಹಾಳಾಗದಂತೆ ಒರಟಾಗಿರಬೇಕು. ಬೇರೆ ಮಾತಿನಲ್ಲಿ ಹೇಳುವುದಾದರೆ, ಪ್ರತಿಯೊಂದು ಅಂಶ, ಪ್ರತಿಯೊಂದು ಹೊದರು ಮತ್ತು ಮರ, ಎರಡು ಅಥವಾ ಮೂರು ಗುರಿಗಳನ್ನು ಸಾಧಿಸುವಂತಿರಬೇಕು.

ಉದ್ಯಾನವನ್ನು ನಿರ್ಮಿಸುವಾಗ ಕೆಲವು ವೇಳೆ ಒಂದು ಅತಿ ಮುಖ್ಯ ಪ್ರಧಾನ ಲಕ್ಷಣವಾದ ಭವ್ಯ ದೃಶ್ಯದ ಬಗ್ಗೆ ಯೋಚಿಸಬೇಕಾಗುತ್ತದೆ. ಒಂದು ವಿಶೇಷ

ಗುಡ್ಡಗಾಡಿನ ನಿವೇಶನ ಒಂದು ಭವ್ಯ ದೃಶ್ಯವನ್ನು ಹೊಂದಿರಬಹುದು. ಅಂಥದು ಮರೆಯಾಗದಂತೆ ಮತ್ತು ಇನ್ನೂ ಉತ್ತಮಗೊಳ್ಳುವಂತೆ ಮಾಡಬೇಕು. ಉದ್ಯಾನದ ಸಂಪೂರ್ಣ ರಚನೆ, ಆ ಭವ್ಯದೃಶ್ಯಕ್ಕೆ ಪ್ರಾಶಸ್ತ್ಯ ನೀಡುವಂತೆ, ಅದು ರಚನೆಯಲ್ಲಿ ಅಡಕಗೊಳ್ಳುವಂತೆ ಮತ್ತು ಉದ್ಯಾನದ ಮುಖ್ಯ ಅಂಗವಾಗಿರುವಂತೆ ಮಾಡಬೇಕು. ಉದ್ಯಾನದ ಎಲ್ಲಾ ಭಾಗಗಳಿಂದಲೂ ಅದರ ಕಡೆಗೆ ದೃಷ್ಟಿ ಬೀರುವಂತಿರಬೇಕು. ಮರಗಳನ್ನು ನೆಟ್ಟು ಅದಕ್ಕೆ ಚೌಕಟ್ಟು ಹಾಕಿದಂತಿರಬೇಕು.

ದುರಾದೃಷ್ಟವಶಾತ್ ಸಾಧಾರಣ ಪರಿಸ್ಥಿತಿಗಳಲ್ಲಿ, ಅದರಲ್ಲೂ ನಗರಗಳಲ್ಲಿ ಇದರ ಸ್ಥಿತಿ ವ್ಯತಿರಿಕ್ತವಾಗಿದೆ. ಅವಲಕ್ಷಣದ ಪರಿಸರಗಳನ್ನು ಮರೆಮಾಚಲು ವಿಶೇಷ ಪ್ರಯತ್ನಗಳನ್ನು ಮಾಡಬೇಕಾಗಿದೆ. ಇಂಥ ಕೆಲಸಕ್ಕೆ ಬಹಳ ಕಲ್ಪನಾ ಚಾತುರ್ಯ ಬೇಕು. ಆದರೂ ಕೂಡ ಬೇರೆಯವುಗಳಿಗಿಂತ ಕಡಿಮೆ ಉತ್ಸಾಹದಾಯಕ, ಒಂದು ಜಾಗ್ರತ ಸಾಧ್ಯವಾದ ಪರಿಹಾರವೆಂದರೆ, ಮರಗಳ, ಲತೆಗಳ ಮತ್ತು ಗುಲ್ಮಗಳ ವಿವೇಚನೆಯ ಸಮ್ಮಿಳನ. ಈ ಕೆಡುಕನ್ನು ಮರೆಮಾಚಲು ಬೇಕಾಗುವ ಎಲೆ ಜಾತಿಗಳ ಪ್ರಭಾವ ಮತ್ತು ಸಾಂಧ್ರತೆಗಳನ್ನು ಗಮನಿಸಿ, ನೆಟ್ಟಗೆ ಬೆಳೆಯುವ ಅಥವಾ ಹರಡುವ ಮರಗಳನ್ನು ಆಯ್ದುಕೊಳ್ಳಬೇಕು, ಅವು ಎಷ್ಟು ಎತ್ತರಕ್ಕೆ ಇರಬೇಕು ಇತ್ಯಾದಿ ವಿಷಯಗಳ ಬಗ್ಗೆ ಸ್ವಲ್ಪ ವೈಜ್ಞಾನಿಕ ಸಂಶೋಧನೆ ಅವಶ್ಯಕ. ಅನಾಕರ್ಷಕ ಎಲೆಗಳ ಎದುರಿಗೆ ಬೆಳಗುವ ಪುಷ್ಪಗಳು, ನಿತ್ಯಹಸುರಿನ ಎದುರಿಗೆ ಅಸ್ಥಿರಗಳು, ಮಸುಕಾದ ಹಸುರಿನ ಎದುರಿಗೆ ಪ್ರಬಲವಾದ ಎಲೆಗಳ ಮಾದರಿ - ಇವುಗಳ ಅನುಕೂಲಗಳನ್ನು ತೂಗಿ ನೋಡಬೇಕಾಗಿದೆ. ನಿವೇಶನದಲ್ಲಿ ಕೆಲವು ಹಳೆ ಮರಗಳಿದ್ದರೆ, ನಿಸ್ಸಂಶಯವಾಗಿ, ಈ ಎಲ್ಲಾ ಸಮಸ್ಯೆಗಳು ಇನ್ನೂ ಹೆಚ್ಚಾಗಿ ಪೀಡಿಸುತ್ತವೆ. ಅವು ಸೂಕ್ತವಾದ ಸ್ಥಳಗಳಲ್ಲಿ ಇಲ್ಲದಿರುವುದರಿಂದ ಮತ್ತು ಕಡಿಯುವುದಕ್ಕೆ ಆಗದಷ್ಟು ಬೆಲೆ ಬಾಳುವುದರಿಂದ, ಇನ್ನೂ ಗೊಂದಲವನ್ನು ಹೆಚ್ಚಿಸುತ್ತವೆ.

ಸಜೀವ, ಬೆಳೆಯುತ್ತಿರುವ ವಸ್ತುಗಳೊಡನೆ ಕೆಲಸ ಮಾಡುವಾಗ, ನಿರ್ಜೀವ ವಸ್ತುಗಳಲ್ಲಿರದ, ಎರಡು ಪ್ರತಿಕೂಲಗಳು ಕಾಣಬರುತ್ತವೆ. ಪ್ರಥಮ ಪ್ರತಿಕೂಲ – ಅಂತಿಮ ದರ್ಶನ ಅಥವಾ ತೋರ್ಕೆ. ಇದನ್ನು ಸರಿಯಾಗಿ ಮುಂಗಾಣುವುದು ಬಹುಮಟ್ಟಿಗೆ ಅಸಾಧ್ಯ. ಉದ್ಯಾನ ರಚನೆಯಲ್ಲಿ ಎಂದೂ ಅಂತಿಮತೆ ಇಲ್ಲದಿರುವುದರಿಂದ, ನಿರ್ಮಾಣ ಪೂರ್ತಿಯಾದ ಮೇಲೆ, ಯಾವ ವಿನ್ಯಾಸ ಹೇಗೆ ಕಾಣುತ್ತದೆ ಎಂಬುದರ ಬಗ್ಗೆ ಹೇಳುವುದು ಆಗದ ಕೆಲಸ. ಬಹಳಷ್ಟು ಕಾಣಲಾಗದ ಅಂಶಗಳು ಎಂತಹ ಅನುಭವೀ ತೋಟಗಾರನಿಂದಲೂ ನುಣುಚಿಕೊಳ್ಳುತ್ತವೆ. ಸಾಧಾರಣವಾಗಿ ಮುವತ್ತು ಅಡಿ ಎತ್ತರ ಬೆಳೆಯುವ ಮರ, ಯಾವುದೋ ಕಾರಣದಿಂದ ಕುಂಠಿತವಾಗುತ್ತದೆ; ಹದಿನೈದು ಅಡಿಗಳಿಗಿಂತ ಹೆಚ್ಚಾಗಿ ಬೆಳೆಯದೆ, ಎಲ್ಲಾ ಲೆಕ್ಕಾಚಾರಗಳನ್ನೂ ಅವ್ಯವಸ್ಥಿತಗೊಳಿಸುತ್ತದೆ. ಹೇರಳವಾಗಿ ಮರಗಳಿರುವ ಒಂದು ದೊಡ್ಡ ಉದ್ಯಾನ ವಿಶಿಷ್ಟವಾಗಿಯೂ ಎಣಿಸಲಾರದಷ್ಟು ಉತ್ತಮ. ಎಲ್ಲಾ ಬೆಳವಣಿಗೆ, ಬೆಳಕು ಮತ್ತು ಸೂರ್ಯರಶ್ಮಿಗಾಗಿ, ಒಂದು ಹೋರಾಟವಾಗಿದೆ. ಮರ ಮತ್ತು ಹೊದರುಗಳನ್ನು ಸಮೀಪದಲ್ಲಿ ನೆಡುವಾಗ, ಯಾವ ಗಿಡ ಇತರ ಗಿಡಗಳನ್ನು

ಬೆಳವಣಿಗೆಯಲ್ಲಿ ಗೆದ್ದು, ತನ್ನ ಪ್ರಾಧಾನ್ಯತೆಯನ್ನು ಸ್ಥಾಪಿಸಿಕೊಳ್ಳುತ್ತದೆ ಎಂಬುದರ ಬಗ್ಗೆ ಭವಿಷ್ಯ ನುಡಿಯುವುದು ಅಸಾಧ್ಯ.

ನನ್ನ ಸ್ವಂತ ಅನುಭವದಲ್ಲಿ ಬಹುತೇಕ ತಪ್ಪು ಲೆಕ್ಕಗಳನ್ನು, ಸೋಲುಗಳನ್ನು ಕಂಡಿದ್ದೇನೆ. ಅವುಗಳ ವಿವರಣೆ ಇನ್ನೂ ರಹಸ್ಯವಾಗಿಯೆ ಇದೆ. ಉದಾಹರಣೆಗೆ ಒಂದು ದೊಡ್ಡ ಪಾತಿಯಲ್ಲಿ, ಒಂದು ನಿರ್ದಿಷ್ಟ ಬಗೆಯ ಗುಲ್ಮಗಳನ್ನು ತುಂಬಲು ಯೋಜನೆ ಮಾಡಲಾಗಿದೆ. ಅವು ಪಕ್ಕದ ತೋಟದಲ್ಲಿ ಚೆನ್ನಾಗಿ ಬೆಳೆಯುತ್ತಿವೆ. ಪ್ರಾಯಶಃ ತದ್ವಾತ್ತಾದ ಸ್ಥಿತಿಗಳಲ್ಲಿ, ಕೆಲವು ವಿವರಿಸಲಾಗದ ಕಾರಣಗಳಿಂದ ಇಲ್ಲಿ ಚೆನ್ನಾಗಿ ಬೆಳೆಯಲು ನಿರಾಕರಿಸುತ್ತವೆ. ಅವು ಬೆಳೆಯಲು ಪುಸಲಾಯಿಸಿದ ಪ್ರಯತ್ನಗಳೆಲ್ಲಾ ವ್ಯರ್ಥವಾಗಿವೆ. ನಿಸ್ಸಂದೇಹವಾಗಿಯೂ, ಸೋಲಿಗೆ ಕಾರಣಗಳನ್ನು ಕಂಡುಹಿಡಿಯಲು ಹೊರಟ ತಜ್ಞನು ಯಶಸ್ವಿಯಾಗಬಹುದು. ಆದರೆ ಅನೇಕ ತೋಟಗಾರರು ತಜ್ಞರಲ್ಲದ್ದರಿಂದ ಮತ್ತು ತಮ್ಮ ಹವ್ಯಾಸಿ ಅನುಭವ ಮತ್ತು ತಿಳುವಳಿಕೆಯ ಮೇಲೆ ಆಧಾರ ಪಟ್ಟಿರುವುದರಿಂದ, ಅಂತಹ ಅಪಜಯಗಳನ್ನು ನಿರೀಕ್ಷಿಸಲೇಬೇಕು.

ಉದ್ಯಾನದ ನಕ್ಷೆ, ಕಾಂಕ್ರೀಟ್ ಕಟ್ಟಡದ ನಕ್ಷೆಯಂತಲ್ಲ. ಅನೇಕ ಬದಲಾವಣೆಗಳಿಗೆ ಮತ್ತು ಅಲ್ಪಸ್ವಲ್ಪ ವ್ಯತ್ಯಾಸಗಳಿಗೆ ಹೊಂದಿಕೊಳ್ಳುವಂತಿರಬೇಕು. ನಕ್ಷೆ ಯಾವಾಗಲೂ ಅಸ್ಥಿಪಂಜರದಂತೆ ಇದ್ದು, ವಿವರಗಳನ್ನು ಹಂಗಾಮಿ ರೀತಿಯಲ್ಲಿ ಭರ್ತಿ ಮಾಡುವಂತಿರಬೇಕು. ಬಹಳಷ್ಟನ್ನು ನಿವೇಶನದಲ್ಲಿರುವವನ ಪ್ರೇರಣೆಗೆ ಬಿಡಬೇಕು. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ, ಒಂದು ಕಟ್ಟಡ ಅಥವಾ ಯಂತ್ರವನ್ನು, ಲೆಕ್ಕಾಚಾರಗಳ ಆಧಾರದ ಮೇಲೆ ಮತ್ತು ಯಾಂತ್ರಿಕ ಸಾಧನಗಳಿಂದ, ಬರೀ ಕಾಗದದ ಮೇಲೆ ರಚಿಸಬಹುದು. ಒಂದೇ ದೋಷವೆಂದರೆ ರಚನಕಾರನಲ್ಲಿ ಅಭಿರುಚಿ ಮತ್ತು ವಿವೇಚನಾಶಕ್ತಿ, ಉದ್ಯಾನ ನಿರ್ಮಿಸುವಾಗ ಇಲ್ಲದಿರುವುದನ್ನು ಕಡೆಗಣಿಸಲಾಗದು.

ಉದ್ಯಾನ ರಚನಕಾರನಿಗೆ, ನಿಜವಾದ ಮತ್ತು ಕರಾರುವಾಕ್ಕಾದ ದೃಷ್ಟಿಗೆ ಬದಲು ಬೇರೆ ಇನ್ನಾವುದೂ ಇಲ್ಲ. ಅಂತಿಮದಲ್ಲಿ ಕೆಲವೆಡೆ ಒಂದು ನಿರ್ದಿಷ್ಟ ಗುಂಪಿನ ಆಕಾರ ಮತ್ತು ಅಳತೆಬೇಕೆ, ಒಂದು ನಿರ್ಧಾರವಾದ ರಚನೆಗೆ ಬೇರೇನಾದರೂ ಬೇಕೆ ಅಥವಾ ಒಂದು ರೆಂಬೆಯನ್ನು ರಚನೆಗೆ ಧಕ್ಕೆ ತರದಂತೆ ಕತ್ತರಿಸಬೇಕೆ, ಎಂಬೆಲ್ಲಾ ವಿಷಯಗಳನ್ನು ದೃಷ್ಟಿಕೋನದಿಂದಲೇ ತಿಳಿಯಬಹುದು.

ಎಷ್ಟೋ ಉದ್ಯಾನಗಳು ನಿಕೃಷ್ಟವಾಗಿ ರಚಿತವಾಗಿದ್ದರೂ ಕೂಡ, ಅಂದವಾಗಿಯೇ ಕಾಣುತ್ತವೆ. ಏಕೆಂದರೆ ಉದ್ಯಾನದ ಕಚ್ಚಾವಸ್ತುಗಳಾದ ಜೀವಂತ ಗಿಡಗಳು, ಸ್ವಾಭಾವಿಕವಾಗಿಯೆ ಚೆಂದ. ಎಷ್ಟೇ ತಪ್ಪಾಗಿ ಇಟ್ಟಿದ್ದರೂ, ಅವು ಅವಲಕ್ಷಣವಾಗಿ ಕಾಣುವುದಿಲ್ಲ. ಆದರೆ, ನಮ್ಮ ಪಟ್ಟಣಗಳಲ್ಲಿ ಅನೇಕ ಸಾರ್ವಜನಿಕ ಅಧಿಕಾರಿಗಳು, ಈ ಅನುಕೂಲವನ್ನು ಬದಿಗೊತ್ತಿ, ನೈಸರ್ಗಿಕ ವಸ್ತುಗಳಿಗೆ ಬದಲಾಗಿ, ಕಾಂಕ್ರೀಟ್ ವಸ್ತುಗಳನ್ನು ತುಂಬಿ, ಉದ್ಯಾನಗಳನ್ನು ಅವಲಕ್ಷಣಗೊಳಿಸಿದ್ದಾರೆ.

ರಚನೆ ಮತ್ತು ಗಿಡ ನೆಡುವಿಕೆಯಲ್ಲಿ, ಪ್ರಥಮದಲ್ಲಿ ಮಾಡುವ ತಪ್ಪುಗಳನ್ನು ಸರಿಪಡಿಸುವುದು ಬಹಳ ಕಷ್ಟ. ಒಂದು ಗೋಡೆಯನ್ನು ದಬ್ಬಿ, ಅದರ ಸ್ಥಳದಲ್ಲಿ

ಇನ್ನೊಂದನ್ನು ಕಟ್ಟುವುದು ಬಹುಮಟ್ಟಿಗೆ ಸುಲಭ. ಮರಗಳು ಪ್ರಾಯಕ್ಕೆ ಬರಲು 15 ವರ್ಷ ಅಥವಾ ಇನ್ನು ಹೆಚ್ಚು ಕಾಲ ತೆಗೆದುಕೊಳ್ಳುತ್ತವೆ. ತಪ್ಪನ್ನು ತಿದ್ದಲು ಪ್ರಯತ್ನಪಟ್ಟರೆ ಅದಕ್ಕೆ ಇನ್ನು ಹತ್ತು ವರ್ಷಕಾಲ ಬೇಕು. ಬುದ್ಧಿವಂತನಾದ ತೋಟಗಾರನು, ತಪ್ಪಾದುದನ್ನು ಹಾಳು ಮಾಡಿ, ಹೊಸದಾಗಿ ಪ್ರಾರಂಭಿಸುವ ಬದಲು, ತನ್ನ ಜಾಣತನದಿಂದ ತಪ್ಪನ್ನು ಪ್ರಯೋಜನಕಾರಿಯಾಗಿ ಮಾಡಲು ಬಯಸುತ್ತಾನೆ. ಸ್ವಾಭಾವಿಕವಾಗಿ ಇದು ದೊಡ್ಡ ಮರಗಳಿಗೆ ಅನ್ವಯಿಸುತ್ತದೆ. ಅಂತಹುವುಗಳ ಮೌಲ್ಯ, ವ್ಯಯಮಾಡಿದ ಕಾಲ ಮತ್ತು ಪಟ್ಟ ಕಷ್ಟಗಳ ಆಧಾರದ ಮೇಲೆ ಲೆಕ್ಕ ಮಾಡಲಾಗುತ್ತದೆ. ಚಿಕ್ಕ ಹೊದರುಗಳು ಮತ್ತು ಗಿಡಗಳು ಕೆಲವೇ ಸಮಸ್ಯೆಗಳನ್ನು ತಂದೊಡ್ಡುತ್ತವೆ. ಆದರೆ ಕೆಲವು ವೇಳೆ, ಸರಿಯಾಗಿ ಯೋಚಿಸದೆ ನೆಟ್ಟ ಕೆಲವು ಮರಗಳು, ಉದ್ಯಾನದ ಉಳಿದೆಲ್ಲಾ ಲೆಕ್ಕಾಚಾರಗಳನ್ನು ಬದಿಗೊತ್ತುತ್ತವೆ. ಅಂಥ ವೇಳೆಯಲ್ಲಿ, ಉದ್ಯಾನವನ್ನು ನಿಧಾನವಾಗಿ, ಮರಗಳ ಹರಡುವಿಕೆ ಮತ್ತು ನೆರಳಿಗನುಸಾರವಾಗಿ, ಪುನರ್ ನಿರ್ಧರಿಸಬೇಕಾಗುತ್ತದೆ. ಕಾರಣ, ಆದಿಯಲ್ಲಿ ಅಂತಹುದಕ್ಕೆ ಅವಕಾಶ ಮಾಡಿರಲಿಲ್ಲ. ಈಗ ಪ್ರಾಧಾನ್ಯಗಳು ಬದಲಾಗುತ್ತವೆ, ನಾಭಿ ಬಿಂದುಗಳು ಸ್ಥಳಾಂತರಗೊಳ್ಳುತ್ತವೆ ಮತ್ತು ಇತರ ವ್ಯವಸ್ಥೆಗಳೊಡನೆ ಮೊದಲೇ ಭಾವಿಸಿಕೊಂಡ ರೂಪದಿಂದ, ಹೊಸ ರೂಪವನ್ನು ಉದ್ಯಾನ ತಾಳುತ್ತದೆ.

ಒಂದೇ ಒಂದು ಬಗೆಯ ಉದ್ಯಾನ, ನೇರವಾಗಿ ನಕ್ಷೆಯಿಂದ, ಯಥಾರ್ಥಕ್ಕೆ ಪರಿವರ್ತಿಸಬಲ್ಲದೆಂದರೆ, ಹುಲ್ಲುಹಾಸು ಮತ್ತು ಮರಗಳು ಇಲ್ಲದೆ ರಚಿತವಾಗುವ ಕೃತಕ ಬಗೆ. ಉದ್ಯಾನ ಮರಗಳಿಲ್ಲದೆ ಅಂದವಾಗಿರಬಹುದು. ಆದರೆ ಸ್ವಲ್ಪ ಕಾಲಾನಂತರ ನೀರಸವಾಗುತ್ತದೆ. ನಮ್ಮ ವಾತಾವರಣದಲ್ಲಿ ನೆರಳು ಬಹು ಮುಖ್ಯ; ತಂಪು ಮತ್ತು ನೆರಳು ಇಲ್ಲದಿದ್ದಲ್ಲಿ, ಉದ್ಯಾನ ನೆಡುವಿಕೆಯಲ್ಲಿನ ಕೇಂದ್ರೀಯ ವಸ್ತು ಕಳೆದುಕೊಂಡಂತೆ. ನೆರಳು ಎಂದರೆ ಮರಗಳು; ಆದುದರಿಂದ ಉದ್ಯಾನ ಯೋಜನೆಯನ್ನು ರಚಿಸುವಾಗ, ಯಾವಾಗಲೂ ಸವಿಸ್ತಾರವಾದ ವಿಷಯಗಳ ಬಗ್ಗೆ ಯೋಚಿಸಬೇಕೆ ವಿನಹ ನಕ್ಷೆಗಳ ಬಗ್ಗೆ ಅಲ್ಲ.

ಯಾರು ಉದ್ಯಾನವನ್ನು ರಚಿಸಬೇಕೆಂದಿರುವನೋ, ಅವನು ಉದ್ಯಾನದ ಖಚಿತ ಕಾರ್ಯ, ಅದರಿಂದ ಆಗಬೇಕಾದುದೇನು ಎಂಬುದರ ಬಗ್ಗೆ ಸ್ಪಷ್ಟ ತಿಳುವಳಿಕೆ ಹೊಂದಿದ್ದಾನೆಂದು ಭಾವಿಸಿಕೊಳ್ಳಬೇಕು. ಎಷ್ಟು ಮೋಟಾರು ಬಂಡಿಗಳು ಒಳಗೆ ಬರುತ್ತವೆ, ಎಲ್ಲಿ ನಿಲ್ಲುತ್ತವೆ, ಸ್ಥೂಲವಾಗಿ ಎಂತಹ ಜನ, ಎಷ್ಟು ಜನ ಓಡಾಡುತ್ತಾರೆ ಹೇಗೆ ಅವರು ನಡೆದುಕೊಳ್ಳುತ್ತಾರೆ, ಅವರಿಗೆ ಏನು ಬೇಕಾಗಿದೆ (ಸಾರ್ವಜನಿಕ ತೋಟಗಳಲ್ಲಿ) ಎಂಬುದರ ಬಗ್ಗೆ ಅರಿವಿರಬೇಕು. ಅಗತ್ಯ ವಸ್ತುಗಳಿಂದ ರಸ್ತೆ, ಕಾಲುದಾರಿ, ಮೆಟ್ಟಲು ಮತ್ತು ಇತರ ನಿರ್ಮಾಣಗಳನ್ನು ಮೊದಲಿನಲ್ಲಿಯೇ ಮಾಡಿ, ಆಮೇಲೆ ಅದಕ್ಕೆ ಸಂಬಂಧಿಸಿದಂತೆ ಮರಗಳನ್ನು ನೆಡುವುದು ಒಂದು ಒಳ್ಳೆ ಧ್ಯೇಯ. ಒಂದೊಂದು ವೇಳೆ, ಸಾರ್ವಜನಿಕ ಉದ್ಯಾನಗಳಲ್ಲಿ ಬೆಂಚನ್ನು ಮಧ್ಯದಲ್ಲಿ ಎಲ್ಲಿಯೂ ಅನುಕೂಲ ಇಲ್ಲದಂತೆ ಇಡುವ ಆಭಾಸ ಆಗುವುದುಂಟು. ಬೆಂಚು ಇಟ್ಟಿದ್ದ ಮರ

ಸತ್ತಿರಬಹುದು ಅಥವಾ ಕಡಿದಿದ್ದರೆ, ಬೇರೆ ನೆಡದಿರುವುದನ್ನು ಯಾರಾದರೂ ಗಮನಿಸಬಹುದು. ತರುವಾಯ ಆ ಆಸನ ಉಪಯೋಗವಿಲ್ಲದೆ ಮತ್ತು ಉಪಯೋಗಿಸಲಾಗದೆ, ಇನ್ನಿತರ ಸಂಬಂಧಗಳೊಡನೆ ಪರಿಗಣಿಸಿದಾಗ, ತಪ್ಪಾದ ಸ್ಥಳದಲ್ಲಿರುತ್ತದೆ. ಆದುದರಿಂದ, ಹುಷಾರಾಗಿ, ಮುಂದೆ ಸಂಭವಿಸಬಹುದಾದ ಅನಾಹುತಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಪ್ರತಿಯೊಂದು ಸೌಲಭ್ಯವನ್ನೂ ನಿಖರವಾದ ಸ್ಥಳಗಳಲ್ಲಿ ಇರಿಸಬೇಕು.

ವಾಸ್ತವವಾಗಿ ಸಾರ್ವಜನಿಕ ಉದ್ಯಾನಗಳಲ್ಲಿ, ಖಾಸಗಿ ಉದ್ಯಾನಗಳಿಗಿಂತ ಆರಂಭ ಭಿನ್ನವಾಗಿರುತ್ತದೆ. ರಚನಾಕರ್ತನು ಉದ್ಯಾನದಲ್ಲಿ ಬರುವ ಜನರ ಮೇಲೆ ತನ್ನ ಅಭೀಷ್ಟಗಳನ್ನು ಹೇರುವ ಕೆಲಸವನ್ನು ಕಲಿಯಬೇಕು. ಜನತೆ, ಅವನು ಬಯಸಿದ ರಸ್ತೆಗಳಲ್ಲಿಯೆ ಹೋಗುವಂತೆ, ಬಯಸದ ಸ್ಥಳಗಳಲ್ಲಿ ಹೋಗದಂತೆ ನೋಡುವುದು ಅವನ ಕರ್ತವ್ಯ. ಹುಲ್ಲುಹಾಸು ಮತ್ತು ಹೂ ಪಾತಿಗಳಲ್ಲಿ, ಅಡ್ಡಹಾದಿ ಹಿಡಿಯದಂತೆ, ಚಿಕ್ಕ ಮಕ್ಕಳಿಗೆ ಹೂಗಳು ಎಟುಕದಂತೆ, ಇತರೆ ವಿಷಯಗಳ ಬಗ್ಗೆ ಅವನು ನಿಶ್ಚಿತನಾಗಿರಬೇಕು. ಇಷ್ಟೆಲ್ಲಾ ಎಚ್ಚರಿಕೆ ಕ್ರಮಗಳನ್ನು ತೆಗೆದುಕೊಂಡರೂ, ಭಾರತದಲ್ಲಿ ಸಾರ್ವಜನಿಕ ಉದ್ಯಾನಗಳನ್ನು ದುರಸ್ತಿಯಲ್ಲಿಟ್ಟುಕೊಳ್ಳುವುದು ಬಹಳ ಕಷ್ಟಕರವಾದ ಕೆಲಸವೆಂದು ಒಪ್ಪಿಕೊಳ್ಳಬೇಕು. ಸಾರ್ವಜನಿಕ ಆಸ್ತಿಗಳಿಗೆ ಮರ್ಯಾದೆ ಇಲ್ಲದಿರುವುದು, ಬೆಳೆಯುವ ವಸ್ತುಗಳ ಮೌಲ್ಯ ಗೊತ್ತಿಲ್ಲದಿರುವುದರಿಂದ, ಸಾರ್ವಜನಿಕ ತೋಟಗಳನ್ನು ಯಾವ ಜನರ ಆನಂದಕ್ಕೋಸ್ಕರ ಮಾಡಲ್ಪಟ್ಟಿದಿಯೋ, ಅಂಥ ಜನರಿಂದಲೇ ಸಂರಕ್ಷಿಸುವುದು ಕಷ್ಟವಾಗುವುದು.

## ಅಖಂಡತೆ

ಒಂದು ಯಶಸ್ವಿ ವಿನ್ಯಾಸದ ಗುರುತು, ಅದು ನೀಡುವ ಒಟ್ಟಿನ ಪರಿಣಾಮ. ವಿನ್ಯಾಸ ಎಷ್ಟೇ ಪರಿಣಾಮಕಾರಿಯಾಗಿದ್ದರೂ, ಒತ್ತಡ, ವಿಶಿಷ್ಟ ಆಕಾರಗಳಿಗಿಂತ ಹೆಚ್ಚಾಗಿ ವಿವಿಧ ಘಟಕಗಳ ಮೇಲೆ ಇರಬೇಕು. ಇದು ಉದ್ಯಾನ ವಿನ್ಯಾಸ ವಿನಹ ಬೇರೆ ಎಲ್ಲಾ ವಿನ್ಯಾಸಗಳಲ್ಲೂ ಒಪ್ಪಿಕೊಂಡಿರುವ ನಿಜಸ್ಥಿತಿ. ಯಾರೇ ಆಗಲಿ, ಉದಾಹರಣೆಗೆ, ದಿವಾನಖಾನೆಯಲ್ಲಿ, ಅಸ್ತಿತ್ವದಲ್ಲಿರುವ ಎಲ್ಲಾ ಮಾದರಿಯ ಕುರ್ಚಿ, ಮೇಜುಗಳ ಪೈಕಿ, ಒಂದೊಂದನ್ನು ಹವಣಿಸುವುದಿಲ್ಲ ಮತ್ತು ದೊರೆಯುವ ಎಲ್ಲ ಬಣ್ಣಗಳ ಮಾದರಿಗಳನ್ನು ಕಲೆ ಹಾಕುವುದಿಲ್ಲ. ದಿವಾನಖಾನೆಯಲ್ಲಿ ಪ್ರತಿಯೊಂದೂ ಹೊಂದಿಕೊಳ್ಳುವಂತೆ, ಸಾಮರಸ್ಯವಿರುವಂತೆ, ಪೀಠೋಪಕರಣಗಳಲ್ಲಿ ಸಮತೂಕವಿರುವಂತೆ, ಜಮಖಾನೆಗಳಲ್ಲಿ, ರಚನೆಗಳಲ್ಲಿ ಮತ್ತು ಆಭರಣಗಳಲ್ಲಿ ಒಂದು ಸ್ಥಿರತೆ ಅಥವಾ ಸಮತೂಕವಿರುವಂತೆ ಎಲ್ಲ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕು. ಉದ್ಯಾನಗಳಲ್ಲಿ ನೆಡುವಾಗ ಬಹಳ ಜನರಿಗೆ ಆದಷ್ಟು ಬಣ್ಣ ಮತ್ತು ಆಕಾರಗಳುಳ್ಳ ವಸ್ತುಗಳನ್ನು ಹೊಂದುವ ಆಸೆ.

'ಎಂತಹ ಸೊಗಸಾದ ಸ್ಥಳ' – ಇಂಥ ಪ್ರತಿಕ್ರಿಯೆ ಒಳ್ಳೆ ಉದ್ಯಾನದ ಒರೆಗಲ್ಲು.

ಪ್ರತಿಕ್ರಿಯೆಯ ಕೂಗಾಟಗಳು ಒಂದು ಸರಣಿಯಲ್ಲಿದ್ದರೆ ಅಂದರೆ 'ಎಂತಹ ಅಸಮಾನ್ಯ ಪುಷ್ಪ', 'ಎಂತಹ ಉಜ್ವಲ ಬಣ್ಣಗಳು', 'ಎಷ್ಟು ಆಕರ್ಷಕ', 'ಎಷ್ಟು ವಿಸ್ಮಯಕಾರಿ' ಎಂದಿದ್ದರೆ, ಆಗ ಉದ್ಯಾನ ಕಟ್ಟುನಿಟ್ಟಾದ ಪ್ರಮಾಣಗಳ ಅನುಸಾರವಾಗಿದ್ದೂ, ಅಪಜಯಕ್ಕೀಡಾಗುತ್ತದೆ. ಪರದೇಶದ ಗಿಡಗಳು ಮತ್ತು ವಿಚಿತ್ರ ಪುಷ್ಪಗಳ ಬಗ್ಗೆ ಮಾಲೀಕನಿಗೆ ಮನೋವಿಕಾರವಿದ್ದರೂ, ಉದ್ಯಾನದ ಪೂರ್ಣ ಲಕ್ಷಣದೊಡನೆ ಅವುಗಳ ವ್ಯಕ್ತಿತ್ವ ಲೀನವಾಗುವಂತೆ ಮಾಡಬೇಕು.

ನಾವು ಹೇಳುತ್ತಿರುವ ಏಕತೆ ಅಥವಾ ಅಖಂಡತೆಯನ್ನು ಅನೇಕ ಮಟ್ಟಗಳಲ್ಲಿ ಸಾಧಿಸಬೇಕಾಗಿದೆ. ಮೊದಲನೆಯದಾಗಿ ಶೈಲಿಯಲ್ಲಿ ಏಕತೆ, ಮನೆ ಅಥವಾ ಕಟ್ಟಡ ಮತ್ತು ಉದ್ಯಾನದ ನಡುವಿನಲ್ಲಿರುವ ಭಾವ ಮತ್ತು ಕ್ರಿಯೆ; ಆಮೇಲೆ ಉದ್ಯಾನದ ವಿವಿಧ ಭಾಗಗಳಲ್ಲಿ ಅಖಂಡತೆ ಮತ್ತು ಮೂರನೆಯದಾಗಿ ಹೊರಗಿನ ಭೂ ದೃಶ್ಯ ಮತ್ತು ಉದ್ಯಾನದ ನಡುವೆ ಹೊಂದಾಣಿಕೆ. ಒಂದು ಉದ್ಯಾನವನ್ನು ನಿರ್ಮಿಸುವಾಗ ಸ್ಥಳೀಯ ಪರಿಸ್ಥಿತಿಗಳನ್ನು ಉಲ್ಲಂಘಿಸಿದರೆ, ಅದು ಎಂದಿಗೂ ಯಶಸ್ವಿಯಾಗಲಾರದು.

ಒಂದು ಚಿಕ್ಕ ಉದ್ಯಾನದಲ್ಲಿ ಅಥವಾ ಒಂದು ಕಟ್ಟಡದ ಮುಂದಿರುವ ಸಣ್ಣ ಸ್ಥಳದಲ್ಲಿ ಸಾಮರಸ್ಯವನ್ನು ಕಲ್ಪಿಸುವುದು ಸುಲಭ. ಎಷ್ಟೋ ವೇಳೆ ಸಾಮರಸ್ಯವನ್ನು ಸೃಜಿಸುವಾಗ, ಆ ಸ್ಥಳದ ನೈಜಿಕ ಏಕತೆಯನ್ನು ನಾಶಪಡಿಸುತ್ತೇವೆ. ಸಾಮಾನ್ಯವಾಗಿ ವೈವಿಧ್ಯತೆಗೆ ಅಲ್ಲಿ ಸಾಕಷ್ಟು ಸ್ಥಳವಿಲ್ಲ. ಒಂದು ದೊಡ್ಡ ಮರ, ಉನ್ನತ ಸ್ಥಳದಲ್ಲಿದ್ದರೆ, ಉಳಿದೆಲ್ಲಾ ಜಾಗ ಹೊಂದಿಕೊಂಡು ಮರ ಚೆನ್ನಾಗಿ ಕಾಣುವಂತೆ ಹಿನ್ನೆಲೆಯಾಗಬೇಕು ಅಥವಾ ಪ್ರಾಯಶಃ ಆರಾಮವಾಗಿ ಕುಳಿತುಕೊಳ್ಳುವುದಕ್ಕೆ ಸ್ವಲ್ಪ ಸ್ಥಳವಿರಬಹುದು. ಅಂತಹ ಸಂದರ್ಭಗಳಲ್ಲಿ, ಕುಳಿತುಕೊಳ್ಳುವ ಸ್ಥಳ ಮನೋಹರವಾಗಿರುವಂತೆ, ಎಲ್ಲಾ ನೆಡುವಿಕೆಯನ್ನು, ಆ ಒಂದೇ ಧ್ಯೇಯದಿಂದ ಮಾಡಬೇಕು. ಆಗ ಅದು ಆ ಸ್ಥಳದಲ್ಲಿ ಅಡಕಗೊಳ್ಳುತ್ತದೆ.

ದೊಡ್ಡ ಉದ್ಯಾನಗಳಲ್ಲಿ, ವಿಶಾಲವಾದ ಬಹಿರಂಗ ಸ್ಥಳಗಳಿರುವ ಕಡೆ, ಅನೇಕ ವಿವಿಧ ವೈಶಿಷ್ಟ್ಯಗಳಾದ, ಹಾದಿ, ಮೆಟ್ಟಲು, ಕೊಳಗಳು, ತರಕಾರಿ ತೋಟಗಳು, ಹೂವಿನ ಪಾತಿಗಳು, ಮರಗಳು, ಹೊದರುಗಳು ಅಡಕಗೊಂಡು, ಸರಾಗ ಮತ್ತು ಸಾಮರಸ್ಯದ ಯೋಜನೆಯನ್ನು ಸೃಜಿಸುವಾಗ ಸಮಸ್ಯೆಗಳು ಉದ್ಭವಿಸುತ್ತವೆ. ಪ್ರತಿಯೊಂದು ವೈಶಿಷ್ಟ್ಯವೂ ಎದ್ದು ಕಾಣುವಂತಿರಲು, ಒಂದು ಖಚಿತ ಸ್ಥಳವನ್ನು ಬಯಸುತ್ತವೆ. ಹೂವಿನ ಪಾತಿಗಳು ಮತ್ತು ತರಕಾರಿಗಳು ಉಜ್ವಲ ಸೂರ್ಯ ಪ್ರಕಾಶವನ್ನು ಬಯಸುತ್ತವೆ; ಆದರೆ ಮರಗಳು ಭೂ ದೃಶ್ಯಕ್ಕೆ ಒಂದು ಗಾಢತೆಯನ್ನು ಕೊಡುವುದರಿಂದ, ನೆರಳು ಮೂಡುತ್ತದೆ. ಕೊಳದ ಪಕ್ಕದಲ್ಲಿ ಒಂದು ಜೋಲಾಡುವ ಮರವಿದ್ದರೆ ಸುಂದರವಾಗಿ ಕಾಣುತ್ತದೆ. ಆದರೆ ಉದುರುವ ಎಲೆಗಳು ಅದನ್ನು ಗಲೀಜು ಮತ್ತು ಹೊಲಸು ಮಾಡುತ್ತವೆ. ಸಂಪೂರ್ಣ ನೋಟ ಕಲ್ಪಿತ ಮತ್ತು ಕೃತಕವಾಗಿರದಂತೆ ಮಾಡಲು, ಇವೆಲ್ಲವನ್ನೂ ಒಪ್ಪಿಕೊಳ್ಳುವುದು ಹೇಗೆ? ಒಂದು ನಿಜವಾದ ಯಶಸ್ವಿಯ ಚಿಹ್ನೆ, ಇವೆಲ್ಲವೂ ನಿಷ್ಪ್ರಯತ್ನದಿಂದ ಆಗಿದೆ

ಎನ್ನುವುದು. ನಿಜವಾಗಿ ಯಶಸ್ವಿ ಉದ್ಯಾನವೆಂದರೆ, ಅದು ತನ್ನಷ್ಟಕ್ಕೆ ತಾನೆ ಆ ಸ್ಥಳದಲ್ಲಿ ಬಿದ್ದಂತೆ ಕಾಣುವ, ವೀಕ್ಷಕನಿಗೆ ಅಲ್ಲಿ ಬೇರೆ ಇನ್ಯಾವುದು ಅಸಾಧ್ಯವೆಂದು ತೋರುವ ಮತ್ತು ಇನ್ನೇನು ಬದಲಾವಣೆಗಳನ್ನು ಸೂಚಿಸಲಾಗದಂತಿರುವುದು.

ಒಂದು ಒಳ್ಳೆಯ ಚಿತ್ರವನ್ನು ಸೃಷ್ಟಿಸಲು ಎಷ್ಟು ಕಷ್ಟವೋ, ಹಾಗೆಯೇ ಸಾಮರಸ್ಯತೆ ಮತ್ತು ಶಾಶ್ವತ ದೃಶ್ಯವನ್ನು ಸೃಜಿಸಲು, ಕಾಯಿದೆಗಳನ್ನು ಹೇರುವುದೂ ಕಷ್ಟ. ಆದರೆ, ಸಾಮಾನ್ಯ ರೀತಿಯಲ್ಲಿ ಕೆಲವು ವಿಷಯಗಳನ್ನು ನಾನು ತಿಳಿದಂತೆ ಮುಖ್ಯವೆಂದು ಚರ್ಚಿಸಬಹುದು.

ಮೊದಲಿನ ಎರಡು ವಿಷಯಗಳೆಂದರೆ, ನೆಲದ ರೂಪ ಮತ್ತು ನೆಲದ ಹೊದಿಕೆಗಳು. ನಾನು ಕಂಡಂತೆ, ಹಠಾತ್ ಮತ್ತು ಕಡಿದಾದ ಬದಲಾವಣೆಗಳು, ಎತ್ತರದ ಆಸರೆ ಗೋಡೆಗಳು ಮತ್ತು ಬಂಡೆಗಳ ಉಬ್ಬು ಸಾಲುಗಳ ರೂಪದಲ್ಲಿ, ಅವುಗಳ ಏಕತೆಯನ್ನು ಹಾಳು ಮಾಡುತ್ತವೆ. ಇವು ಭೂಮಿಯನ್ನು ಕೃತಕ ಆಕಾರ ಮತ್ತು ವಿವಿಧ ಮಟ್ಟಗಳಲ್ಲಿ ಕತ್ತರಿಸುತ್ತವೆ. ಎಲ್ಲಿ ನಿವೇಶನವು ಕಡಿದಾಗಿ ಜಾರುತ್ತದೆಯೋ ಅಲ್ಲಿ ಆಸರೆ ಗೋಡೆಗಳಿಲ್ಲದೆ ಬೇರೆ ಏನೂ ಮಾಡಲಿಕ್ಕೆ ಆಗುವುದಿಲ್ಲ. ಆದರೆ ಗುಡ್ಡದ ಇಳಿಜಾರಿನ ಪ್ರಮಾಣದಂತೆಯೇ ಆಸರೆ ಗೋಡೆಯ ಇಳಿಜಾರಿನ ಪ್ರಮಾಣ ಇರುವಂತೆ ಮಾಡಬೇಕು. ಇದರಿಂದ ರಚಿತವಾದ ಅಂತಸ್ತುಗಳು, ನೈಜಿಕ ಹುಲ್ಲಿನ ಇಳಿಜಾರುಗಳೊಡನೆ ಪರ್ಯಾಯದಲ್ಲಿರುವಂತೆ ಇರಬೇಕು. ನಿವೇಶನವು ಬಹುಮಟ್ಟಿಗೆ ಚಪ್ಪಟೆಯಾಗಿದ್ದರೆ, ಅಂಥ ಸಮಸ್ಯೆಗಳು ಉದ್ಭವಿಸುವುದಿಲ್ಲ.

ವಿವಿಧ ಅಂಗಗಳನ್ನು ಮತ್ತು ಪ್ರಭಾವಯುತ ಲಕ್ಷಣಗಳನ್ನು ಒಗ್ಗೂಡಿಸುವುದಕ್ಕೆ ಸುಮಾರಾಗಿ ಒಂದೇ ಸಮನಾದ ನೆಲಹೊದಿಗೆ (ಹುಲ್ಲು ಹಾಸಿನಂತೆ) ಒಂದು ಮಹತ್ತರ ಸಾಧನ. ಮುಖ್ಯ ವಿಷಯವೆಂದರೆ ಉದ್ಯಾನದ ಉದ್ದಕ್ಕೂ, ನೆಲಹೊದಿಕೆ ಏಕರೀತಿಯಾಗಿ ವೈವಿಧ್ಯವಿಲ್ಲದೆ ಇರುವುದಿಲ್ಲ. ಆದರೆ ಅದು ಒಂದು ನಿರ್ದಿಷ್ಟ ಮತ್ತು ಸುಬದ್ಧ ರಚನೆಯನ್ನು ನೀಡಬೇಕು. ನೆಲ ಹೊದಿಕೆಯಲ್ಲಿನ ಬದಲಾವಣೆಗಳು, ಹಾಸಿನ ಎತ್ತರದ ಮಟ್ಟ, ರಸ್ತೆ, ಹಾದಿ, ಪಾತಿ, ಬಂಡೆ ಅಥವಾ ಮೆಟ್ಟಲುಗಳನ್ನು ಒಳಗೊಂಡಿರಬಹುದು. ಈ ಬದಲಾವಣೆಗಳು ಉದ್ದೇಶಪೂರ್ವಕವಾಗಿಯೆ ಇದ್ದು, ಅವೆಲ್ಲವೂ ಯೋಜನೆಯ ಅಂಗಗಳಾಗಿದ್ದು, ಅಂತ್ಯದಲ್ಲಿ ಒಟ್ಟಿಗೆ ಉದ್ಯಾನದ ಪೂರ್ಣ ಆಕೃತಿಯ ಒಂದು ಭಾಗವಾಗಿರಬೇಕು. ಗೊತ್ತುಗುರಿಯಿಲ್ಲದ ನೆಲದ ರೂಪ ಮತ್ತು ನೆಲ ಹೊದಿಕೆಗಳು ಉದ್ಯಾನದ ಸಾಮರಸ್ಯವನ್ನು ಹಾಳು ಮಾಡಬಲ್ಲವು. ತೋಟದ ಒಳಗಡೆ, ಹಸಿಬೇಲಿ ಮತ್ತು ಕಟಕಟೆಗಳು, ಇದರ ವಿಶಾಲತೆಯನ್ನು ಕತ್ತರಿಸುತ್ತವೆ. ಅವುಗಳನ್ನು ಬಹಳವಾಗಿ, ಎಲ್ಲಿ ಬೇಕೋ ಅಂತಹ ಕಡೆ, ವಿಶಿಷ್ಟವಾಗಿ ದೊಡ್ಡ ಉದ್ಯಾನಗಳಲ್ಲಿ, ಅಂಕಣಗಳಿಂದ ಕೆಡಕಾಗದಿರುವ ಕಡೆ ಉಪಯೋಗಿಸಬೇಕು.

ಉದ್ಯಾನಕ್ಕೆ ಶಾಂತತೆ ಮತ್ತು ಏಕತೆಯ ನೋಟವನ್ನು ಕೊಡಲು, ಒಂದು ಸಾಧಾರಣ ತಂತ್ರವೆಂದರೆ, ಯಾವುದಾದರೂ ಒಂದು ಪ್ರಬಲವಾದ ಸ್ವರೂಪವನ್ನು ಅನುಕರಿಸುವುದು. ಬೋಗನ್‌ವಿಲ್ಲಾಗಳ ದೊಡ್ಡ ಮೆಳೆ ಒಂದು ಉನ್ನತ

ಪ್ರದೇಶದಲ್ಲಿದೆ ಎಂದು ಭಾವಿಸಿಕೊಳ್ಳಿ. ಅಂಥದೇ ಮೆಳೆಯನ್ನು ಚಿಕ್ಕ ಪ್ರಮಾಣದಲ್ಲಿ, ಅಷ್ಟು ಉನ್ನತವಲ್ಲದ ಪ್ರದೇಶದಲ್ಲಿ ನೆಟ್ಟರೆ, ಆಗ ಆ ಎರಡು ಸ್ಥಳಗಳನ್ನು ಒಟ್ಟಿಗೆ ಕೂಡಿಸಿದಂತಾಗುತ್ತದೆ. ಇದರಿಂದ ಒಂದು ಮತ್ತೊಂದರಿಂದ ಲಾಭ ಪಡೆಯುವುದಲ್ಲದೆ, ಉದ್ಯಾನದಲ್ಲಿ ಒಂದು ತರಹ ಸ್ಥಿಮಿತ ಸ್ಥಿತಿ ಮತ್ತು ಸಾಮರಸ್ಯವನ್ನು ಉಂಟು ಮಾಡಿದಂತೆ ಆಗುತ್ತದೆ. ಮೊಗಲರು, ಸಮರೂಪದಲ್ಲಿ ನೆಟ್ಟು, ಈ ತತ್ತ್ವವನ್ನು ತರ್ಕಶುದ್ಧವಾಗಿ ಪಾಲಿಸಿದರು. ಇದು ಸಹಜವಾಗಿಯೆ ಅವರ ತೋಟಗಳಲ್ಲಿ ಅಖಂಡತೆಯನ್ನು ತಂದಿತು. ನನ್ನ ಸೂಚನೆಯಂತೆ, ಅದೇ ಮೂಲ ತತ್ತ್ವವನ್ನು ಊಹಾತ್ಮಕವಾಗಿಯೂ, ಸೂಕ್ಷ್ಮವಾಗಿಯೂ ಉಪಯೋಗಿಸಬೇಕು. ಯಾವ ತೋಟಗಾರನು ತಾನು ನೋಡಿದ ಗಿಡಗಳ ಮಾದರಿಗಳನ್ನು ಸಂಗ್ರಹಿಸುವುದರಲ್ಲಿ ನಂಬಿಕೆ ಇಟ್ಟಿರುತ್ತಾನೊ, ಅಂಥವನು ತನ್ನ ತೋಟಕ್ಕೆ ಎಂದೂ ಸಾಮರಸ್ಯ ಅಥವಾ ಏಕತೆಯನ್ನು ಕೊಡಲಾರನೆಂಬುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಒಂದು ಸುಸಂಗತ ಉದ್ಯಾನವೆಂದರೆ, ಒಂದು ಸಾಮಾನ್ಯ ನಿವೇಶನದಲ್ಲಿ ಹುಲ್ಲುಹಾಸು, ಒಂದೇ ಜಾತಿಯ ಗಿಡ–ಗುಲಾಬಿ ಸುತ್ತಲೂ ಬೆಳೆದಿರುವುದು ಎಂದಿಟ್ಟುಕೊಳ್ಳಿ – ಆದರೆ ಅಂಥದೂ ಕೂಡ ಬಹಳ ನೀರಸವಾಗಿರುತ್ತದೆ. ಎಷ್ಟರಮಟ್ಟಿಗೆ ಒಬ್ಬನು ಈ ಯೋಜನೆಯಿಂದ ದೂರ ಸರಿಯುತ್ತಾನೆಯೋ, ಅಷ್ಟರಮಟ್ಟಿಗೆ ಆತನು, ಏಕತೆ ಮತ್ತು ವೈವಿಧ್ಯತೆಗಳ ನಡುವೆ ಇರುವ ಸಮತೂಕವನ್ನು ಹುಡುಕುವ ಸವಾಲನ್ನು ಸ್ವೀಕರಿಸದಂತಾಗುತ್ತದೆ.

ಕಟ್ಟಡ ಮತ್ತು ನಿವೇಶನ ನೈಜಿಕವಾಗಿ ಒಗ್ಗೂಡಿರುವಂತೆ ಕಾಣಲು ಸಾಮಾನ್ಯವಾಗಿ ಮನಃಪೂರ್ವಕ ಸಾಧನೆ ಬೇಕು. ಕಟ್ಟಡದ ಅತಿ ಸಮೀಪದಲ್ಲಿಯೆ ನೆಡಲು ಹೆಚ್ಚಿನ ಗಮನ ಮತ್ತು ಯೋಜನೆ ಬೇಕು. ಇಲ್ಲಿ ತೋಟಗಾರನ ಕಲ್ಪನಾ ಶಕ್ತಿಗೆ ರಸ್ತೆ, ಗ್ಯಾರೇಜು, ಮುಖಮಂಟಪ ಮುಂತಾದ ಅನೇಕ ಅವಶ್ಯಕತೆಗಳು ತಡೆಯೊಡ್ಡಬಹುದು. ಇವುಗಳ ಹಕ್ಕುಗಳು ಮತ್ತು ಸೌಕರ್ಯಗಳು, ಸಹಜವಾಗಿಯೇ ಸರ್ವಶ್ರೇಷ್ಠ. ಗಿಡ ನೆಡುವಿಕೆ ಅವುಗಳನ್ನು ಹೊಂದಿಕೊಂಡು ಹೋಗಬೇಕು ಮತ್ತು ಮಣ್ಣಿನಲ್ಲಿ ದೃಢವಾಗಿ ನಿಂತು, ಉದ್ಯಾನದ ಸೂಕ್ತವಾದ ಅಂಗಗಳಂತಾಗಬೇಕು. ಮುಖ್ಯವಾಗಿ ತಿಳಿಯಬೇಕಾದ ವಿಷಯವೆಂದರೆ, ರೇಖೆಗಳು ಸರಳವಾಗಿರಬೇಕು ಮತ್ತು ಗೊಂದಲಮಯವಾದ ವಿವರಗಳಿಲ್ಲದಂತೆ ನೋಡಿಕೊಳ್ಳಬೇಕು. ಇಂಥ ಸ್ಥಳಗಳು ಹೊಂದಾಣಿಕೆ ಇಲ್ಲದೆ, ಯಾವ ಗುರಿಯನ್ನೂ ಸಾಧಿಸದ ಗುಲ್ಮಾಲಯಗಳಿಂದ ಅಸ್ತವ್ಯಸ್ತವಾಗಬಹುದು. ಕರ್ತವ್ಯ ಪರಿಪಾಲನಾ ಗಿಡಗಳ ಒಂದು ಉದಾಹರಣೆ: ಲತೆಗಳಿಗೆ ಸಾಂಪ್ರದಾಯಕವಾಗಿ ಪ್ರವೇಶ ದ್ವಾರ ಮತ್ತು ಮುಖಮಂಟಪಗಳ ಮೇಲೆ ಸ್ಥಳ ಕೊಡಬೇಕು. ಇದರಿಂದ ಅವುಗಳು ಕಲ್ಲುಕಟ್ಟಡ ಮತ್ತು ಸಿಮೆಂಟಿನ ಗಾಢತೆಯನ್ನು ಮೃದುಗೊಳಿಸುವುದಲ್ಲದೆ, ನೈಸರ್ಗಿಕ ಪ್ರಪಂಚದ ಸಂಪರ್ಕ ಕಲ್ಪಿಸುತ್ತವೆ. ಹೀಗೆ ದ್ವಿಗುಣ ಕ್ರಿಯೆಗಳನ್ನು ಸಾಧಿಸಿದಂತಾಗುತ್ತದೆ.

ಉದ್ಯಾನದ ಪ್ರತಿಯೊಂದು ಘಟಕವೂ, ಪ್ರಥಮವಾಗಿ, ತನ್ನ ಸುತ್ತಲೂ ಇರುವ ಪರಿಸರಗಳೊಡನೆ ಗಾಢ ಬಾಂಧವ್ಯ ಹೊಂದಿರುವಂತಿರಬೇಕು. ಆಮೇಲೆ, ಇತರ

ರೂಪಗಳನ್ನು ಹೊಂದಿರುವ ದೊಡ್ಡ ವಿನ್ಯಾಸದ ಸಮಗ್ರ ಭಾಗವಾಗಬೇಕು; ಕೊನೆಯದಾಗಿ ಈ ರಚನೆಯೂ ಕೂಡ, ಉದ್ಯಾನದ ಸಂಪೂರ್ಣ ರಚನೆಯಲ್ಲಿ ಹೊಂದಿಕೊಂಡಿರಬೇಕು. ಉದ್ಯಾನದ ಯಾವ ರೂಪವೆ ಆಗಲಿ, ಗಿಡವೇ ಆಗಲಿ, ಉಳಿದ ಭಾಗಗಳಿಂದ ಪ್ರತ್ಯೇಕವಾಗಿರಬಾರದು. ಪ್ರತಿಯೊಂದು ಘಟಕಾಂಶ ಎಷ್ಟೇ ಚಿಕ್ಕದಾಗಿರಲಿ ಅದು ವಿಶಾಲ ವಿನ್ಯಾಸದ ಭಾಗವಾಗಿರಲೇಬೇಕು.

ಉದಾಹರಣೆಗೆ, ನೀವು ಒಂದು ಹೊಸ ದಾಸವಾಳದ ಜಾತಿ–ಹಳದಿ ದಾಸವಾಳ ಎಂದಿಟ್ಟುಕೊಳ್ಳಿ–ಪಡೆಯಬೇಕೆಂದು ಇಚ್ಛಿಸುವಿರಿ. ಯಾವುದಕ್ಕೂ ಸಂಬಂಧವಿಲ್ಲದೆ ಒಂದೇ ದಾಸವಾಳವನ್ನು ನೆಡುವುದು ತಪ್ಪು. ಆದುದರಿಂದ, ಅದು ಒಂದು ಗುಂಪಿಗೆ ಸೇರಿದಂತೆ ಮತ್ತು ಪೂರ್ಣ ವಿನ್ಯಾಸದ ಭಾಗವಾಗಿರುವಂತೆ ನೆಡಬೇಕು. ನಿಮ್ಮ ಒಂದು ಹಳದಿ ದಾಸವಾಳಕ್ಕೆ ಸ್ಥಳ ಕಲ್ಪಿಸಲು, ಮೂರು ನಾಲ್ಕು ದಾಸವಾಳಗಳನ್ನು ಒಂದು ತಂಡವಾಗಿ ನೆಡಬೇಕು. ಅಂತಹ ತಂಡವನ್ನು ಎಲ್ಲಿ ಪ್ರಾಧಾನ್ಯಬೇಕೋ, ಅಲ್ಲಿ ನೆಡಬೇಕು; ಉದಾ: ಒಂದು ಕೊಳವನ್ನು ಪ್ರಭಾವಯುತವನ್ನಾಗಿ ಮಾಡಲು, ಅದರ ಅಂಚಿನ ನೆಲಗಟ್ಟನ್ನು ದಾಸವಾಳದ ತಂಡದವರೆವಿಗೂ ಕೊಂಡೊಯ್ಯುವುದರಿಂದ, ಅವರೆಡರಲ್ಲಿ ಬಾಂಧವ್ಯ ಉಂಟಾಗುತ್ತದೆ. ಈ ರೀತಿಯಲ್ಲಿ ಪ್ರತಿಯೊಂದು ಗಿಡ ಮತ್ತು ರೂಪ, ಇತರೆ ರೂಪಗಳನ್ನು ಕೂಡಿಸುವ ಒಂದು ಕೊಂಡಿ ಎಂದು ಯೋಚಿಸಬೇಕು. ಮತ್ತೊಂದು ಉದಾಹರಣೆ: ಒಂದು ದೊಡ್ಡ ಮಾವಿನ ಮರವಿದೆ. ಅದರ ಅಡಿಯ ಸುತ್ತಲೂ ವಿಶಾಲವಾಗಿ ಜೇಡರ ಲಿಲ್ಲಿಗಳನ್ನು (ಸ್ಪೈಡರ್ ಲಿಲ್ಲಿ) ನೆಡಲಾಗಿದೆ. ಇದರ ಸುತ್ತಲೂ ಹುಲ್ಲಿನ ಹಾಸು, ಹುಲ್ಲು ಮತ್ತು ಮಾವಿನ ಮರದ ಕಾಂಡದ ಮಧ್ಯೆ ಕೊಂಡಿಯಂತೆ ಲಿಲ್ಲಿಗಳು ವಿರಾಜಿಸುತ್ತವೆ. ಎಲೆಗಳ ಬಣ್ಣ ಮತ್ತು ಬಿಳಿ ಹೂಗಳು, ಒರಟಾದ ಮತ್ತು ಮಂಕಾದ ತೊಗಟೆಯ ಎದುರಿಗೆ ಅತ್ಯಂತ ವೈಭವದಿಂದ ಕಾಣುತ್ತದೆ. ಅದೇ ಕಾಲದಲ್ಲಿ ಎಲೆಗಳ ಸೊಬಗಿನ ವಕ್ರಗಳು, ಹುಲ್ಲಿಗೆ ಒಳ್ಳೆ ಅಂಚಾಗಿರುತ್ತವೆ.

### ತೆರವು

ತಾನಿರುವುದಕ್ಕಿಂತಲೂ ಇನ್ನೂ ಹೆಚ್ಚಾಗಿ ದೊಡ್ಡದಾಗಿ ಕಾಣಬೇಕೆಂಬ ಬಯಕೆ ಪ್ರಪಂಚದ ಪ್ರತಿಯೊಂದು ಭಾರಿ ಉದ್ಯಾನಕ್ಕೂ ಇರುವ ಬಯಕೆ. ವಿಶಾಲವಾದ ನ್ಯಾಷನಲ್ ಪಾರ್ಕ್ ಕೂಡ ಇನ್ನೂ ಹಲವಾರು ಅಧಿಕ ಚದರ ಮೈಲಿಗಳನ್ನು ಒಳಗೊಂಡಂತೆ ಕಾಣಲು ಬಯಸುತ್ತದೆ. ಇನ್ನೊಂದೆಡೆ, ಬಹಳ ಚಿಕ್ಕದಾದ ಅಂಗಳವೂ ಕೂಡ ತನ್ನ ಅಂಗುಲ ಅಂಗುಲ ಜಾಗವನ್ನು ಪ್ರದರ್ಶಿಸಲು ಇಚ್ಛಿಸುತ್ತದೆ. ತಾನಿರುವುದಕ್ಕಿಂತ ದೊಡ್ಡದೆಂದು ಜನರನ್ನು ಮೋಸಗೊಳಿಸಲು ಪ್ರಯತ್ನಿಸಿದರೂ ಕೊನೆಗೆ ತಾನಿರುವುದಕ್ಕಿಂತಲೂ ಸಣ್ಣದೆಂದು ಭಾವಿಸದಿದ್ದರೆ ಸಾಕು. ಉದ್ಯಾನಗಳ ಸ್ಥಳದ ಸಮಸ್ಯೆ ಆಗ ಸರಳವಾಗುತ್ತದೆ. ಸ್ಥಳವು ಆದಷ್ಟು ದೊಡ್ಡದಾಗಿ ಕಾಣುವಂತೆ, ಎಂದಿಗೂ, ಯಾವ ಸ್ಥಿತಿಯಲ್ಲಿಯೂ, ತನ್ನ ವಾಸ್ತವಿಕ ಅಳತೆಗಿಂತ ಕಡಿಮೆ ಇರದಂತೆ, ಎಲ್ಲ ಪ್ರಯತ್ನಗಳನ್ನೂ ಪ್ರಚೋದಿಸಬೇಕು. ಮೊದಲನೆಯದಾಗಿ ಮಧ್ಯ ಭಾಗದಲ್ಲಿ

ತಡೆ ಇಲ್ಲದಂತೆ ಇಡಿ. ನೆಡುವಿಕೆಯನ್ನು ಪಾರ್ಶ್ವಗಳಿಗೆ ಅಥವಾ ಅಂಚುಗಳಿಗೆ ಮೀಸಲಿಡಿ. ಎರಡನೆಯದಾಗಿ ರೇಖೆಗಳು ಸರಳವಾಗಿ, ವಕ್ರಗಳು ಇಲ್ಲದಂತಿರಲಿ; ಅಸ್ತವ್ಯಸ್ತ ರೇಖೆಗಳನ್ನು ತೊರೆಯಿರಿ. ಎಲ್ಲಿ ದೊಡ್ಡ ಮರಗಳಿವೆಯೋ, ದೃಷ್ಟಿ ಮರಗಳಿಂದಾಚೆ ಹೋಗುವಂತೆ, ಕೆಳಗಿನ ಟೊಂಗೆಗಳನ್ನು ಸವರುತ್ತಾ ಇರಿ ಮತ್ತು ಅಂತಿಮವಾಗಿ ಸರಹದ್ದಿನ ಅಂಚಿನವರೆಗೂ ಉದ್ಯಾನವನ್ನು ರಚಿಸಿ. ಸರಹದ್ದಿನ ಗಡಿ ಸೇರುವ ಮುಂಚೆಯೆ, ಯಾವ ರೀತಿಯಲ್ಲೂ ತೊಡಕುಗಳು ಇಲ್ಲದಂತಿರಬೇಕು. ಒಂದು ದೊಡ್ಡ ಉದ್ಯಾನದಲ್ಲಿ, ದೂರ ದೂರದಲ್ಲಿರುವ ಎಲ್ಲಾ ಮೂಲೆಗಳನ್ನು, ಉಳಿದ ಉದ್ಯಾನದಂತೆ ದುರಸ್ತಿಯಿಂದಿಡಲು ಸಾಧ್ಯವಿಲ್ಲ. ಆದರೆ ಯೋಚಿಸಿ ಆಯ್ಕೆ ಮಾಡಿದ ದೊಡ್ಡ ಮರಗಳನ್ನು ದೂರದ ಎಲ್ಲೆಗಳಲ್ಲಿ ನೆಟ್ಟಿದ್ದರೆ, ಆಗ ಮೂಲೆಗಳು ಉದ್ಯಾನದಲ್ಲಿ ತಂದೊಡ್ಡಿದಂತಿರುತ್ತವೆ; ಇಲ್ಲದಿದ್ದಲ್ಲಿ ದೃಷ್ಟಿಗೆ ಬೀಳದೆ ನುಣುಚಿಕೊಳ್ಳುತ್ತಿದ್ದಿತು.

ಮರಗಳನ್ನು ಎಲ್ಲೆಗಳಲ್ಲಿ ದಕ್ಷತೆಯಿಂದ ನೆಟ್ಟರೆ, ಮಸುಕು ಮಸಕು ತೋಪಿನ ಪರಿಣಾಮವನ್ನು ಹೊಂದಲು ಸಾಧ್ಯ. ಅತ್ಯಂತ ದೂರದ ಮೂಲೆಗಳಲ್ಲಿ ನೆಡಲು ಆದರ್ಶಪ್ರಾಯವಾದ ಮರಗಳೆಂದರೆ, ದೊಡ್ಡ ಮರಗಳಂತೆ ಸಾಮಾನ್ಯವಾಗಿ ಕಾಣುವ ಆದರೆ ನಿಜಸ್ಥಿತಿಯಲ್ಲಿ ಅಷ್ಟು ದೊಡ್ಡದಾಗಿ ಬೆಳೆಯಲಾರದ ಮರಗಳು. ರಾಣಿ ಹೂ ಅಥವಾ ಕ್ವೀನ್ಸ್ ಫ್ಲವರ್ ಇದಕ್ಕೆ ಸೂಕ್ತವಾದ ಉದಾಹರಣೆ.

ಒಂದು ಸಂದರ್ಭದಲ್ಲಿ, ದೊಡ್ಡ ಅಂತರವನ್ನು ಸೃಷ್ಟಿಸಲು, ರೇಖಾದೃಷ್ಟಿ ಕಟ್ಟಳೆಗಳೊಡನೆ ಆಡುವುದು ಸಂಪ್ರದಾಯವಾಗಿತ್ತು. ಇದರಿಂದ, ಭೂ ದೃಶ್ಯದಲ್ಲಿ ವಾಸ್ತವಿಕವಾಗಿ ಇರುವುದಕ್ಕಿಂತ ಹೆಚ್ಚು ಸ್ಥಳ ಕಾಣುತ್ತಿತ್ತು. ಉದಾಹರಣೆಗೆ, ಓಣಿಗಳು, ಹಾದಿಗಳು ಕ್ರಮೇಣ ಕಿರಿದಾದವು. ದೂರದಲ್ಲಿನ ಮರಗಳ ಗಾತ್ರ, ದೂರದ ಭ್ರಮೆಯನ್ನು ಸೃಜಿಸಲು, ಕುಗ್ಗಿತು. ಅಂತಹ ತಂತ್ರಗಳು, ನನಗೆ ಕಂಡಂತೆ ತುಂಬಾ ಅತಿಯಾಗಿ ಅನವಶ್ಯಕವೆಂದು ತೋರುತ್ತದೆ. ಆದರೂ ಒಂದು ನಿವೇಶನ ಸಾಧ್ಯವಾದಷ್ಟೂ ವಿಶಾಲವಾಗಿ ಕಾಣಬೇಕೆಂಬುದಕ್ಕೆ, ಎಷ್ಟು ಪ್ರಾಮುಖ್ಯತೆ ಕೊಡುತ್ತಿದ್ದರು ಎನ್ನುವುದನ್ನು ಉದಾಹರಿಸುತ್ತದೆ.

ಹದಿನೆಂಟನೆಯ ಶತಮಾನದ ಮೇಧಾವೀ ಆಂಗ್ಲೇಯ ತೋಟಗಾರರು ತಮ್ಮ ಉದ್ಯಾನದ ವಿಶಾಲತೆಯನ್ನು ಹೆಚ್ಚಿಸಲು ಅನುಸರಿಸಿದ ಪರಮ ಶ್ರೇಷ್ಠ ಮಾರ್ಗವೆಂದರೆ, ಉದ್ಯಾನಕ್ಕೆ ಗೋಡೆಯೇ ಇರಬಾರದೆಂಬುದನ್ನು ಕಂಡು ಕೊಂಡಿದ್ದು. ಅವರ ಉದ್ಯಾನಗಳು ಸುತ್ತಮುತ್ತಲಿನ ಗ್ರಾಮೀಣ ಪ್ರದೇಶಗಳಲ್ಲಿ ಸರಳವಾಗಿ ಹರಿಯಿತು. ದೂರದಿಂದ ಕಾಣದಂತಿರುವ, ಹುಷಾರಾಗಿ ತೋಡಿದ ಹಳ್ಳ, ಎಲ್ಲೆಯಂತೆ ಕೆಲಸ ಮಾಡತೊಡಗಿ ದನಗಳು ಉದ್ಯಾನದಲ್ಲಿ ಬರದಂತೆ ಮಾಡಿತು. ಕಂದಕ ಅಥವಾ ಹಳ್ಳ ನಿಸ್ಸಂದೇಹವಾಗಿಯೂ ಉದ್ಯಾನಕ್ಕೆ ಆದರ್ಶ ಗಡಿ. ಇದಕ್ಕೆ ಎರಡು ಜವಾಬ್ದಾರಿಗಳಿವೆ. ಮೊದಲನೆಯದಾಗಿ, ಸೊಗಸಾದ ಗ್ರಾಮೀಣ ಹೊರಾಂಗಣ ಮತ್ತು ಎರಡನೆಯದಾಗಿ ಕಾನೂನು ಮತ್ತು ಶಾಸನದ ರಕ್ಷಣೆ. ಇದರಿಂದಾಗಿ ಬೇಲಿ ಅನಾವಶ್ಯಕ. ಈ ಎರಡು ಸ್ಥಿತಿಗಳು ಯಾವಾಗಲೂ ಭಾರತದಲ್ಲಿ

ಇಲ್ಲ. ಆದುದರಿಂದ ನಾವು ಒಳ್ಳೆ ಮಜಬೂತಾದ ಆಧಾರವನ್ನು ನೆಚ್ಚಬೇಕು.

ಕೇಪಬಿಲಿಟಿ ಬ್ರೌನ್ ಮತ್ತು ಲೆ ನೋತ್ರೆಯುವರ ಉದ್ಯಾನಗಳು, ಸ್ಥಳದ ಬಗ್ಗೆ ನಮಗೆ ಬಹಳಷ್ಟು ಶಿಕ್ಷಣ ಕೊಡುತ್ತವೆ. ಲೆ ನೋತ್ರೆಯುವರ ಉದ್ಯಾನಗಳು ಅತ್ಯಂತ ಕೃತಕ; ಅದೇ ಕೇಪಬಲಿಟಿ ಬ್ರೌನ್‌ರವರದು ನೈಜಿಕ, ಅನಿಶ್ಚಿತ ಭೂ ದೃಶ್ಯ ಉದ್ಯಾನಗಳ ಶೈಲಿ. ಆದರೆ ಮೂಲತಃ ಇಬ್ಬರೂ ಒಂದೇ ಶಾಸ್ತ್ರೀಯ ತಂತ್ರವನ್ನು ಉಪಯೋಗಿಸಿದರು; ಅದೆಂದರೆ ವೈಶಾಲ್ಯತೆಯನ್ನು ಉಂಟುಮಾಡುವ ಭ್ರಾಂತಿ. ದೊಡ್ಡ ವಿಶಾಲ ಕ್ಷೇತ್ರಗಳಾದ ಹುಲ್ಲು ಹಾಸುಗಳು ಮತ್ತು ಗಾಢವಾದ ಮರದ ಮೆಳೆಗಳನ್ನು ಒಂದಾದ ಮೇಲೊಂದರಂತೆ ಉಪಯೋಗಿಸಿದರು. ವಿಶಾಲ ಕ್ಷೇತ್ರ ಮತ್ತು ಮರಗಳ ಮೆಳೆಗಳು ಎರಡೂ ಖಚಿತ ಮತ್ತು ಉದ್ದೇಶ ಸಾಧಕವಾಗಿರಬೇಕು. ಒಂದು ದೊಡ್ಡ ಹುಲ್ಲುಹಾಸಿನಲ್ಲಿ, ಆಸಕ್ತಿ ಇಲ್ಲದೆ, ಅಸಂಬಂಧಿತ ಮರಗಳನ್ನು ಅಲ್ಲಲ್ಲಿ ನೆಟ್ಟರೆ, ಅದು ಅದರ ವಿಶಾಲತೆಯ ದೃಷ್ಟಿಯನ್ನು ಕಳೆದುಕೊಳ್ಳುತ್ತದೆ. ಕೆಲವು ಸಂದರ್ಭಗಳಲ್ಲಿ, ನೂರಾರು ಜನ ನೆರಳಿನಲ್ಲಿ ಕೂಡಲು ಸಾರ್ವಜನಿಕ ಪಾರ್ಕುಗಳಿಗೆ ಬರುತ್ತಾರೆ. ಅಂತಹ ಕಡೆ, ಹುಲ್ಲುಹಾಸುಗಳ ಮೇಲೆ ಮರಗಳನ್ನು ಅಲ್ಲಲ್ಲಿ ನೆಡುವುದು ಸಾಧ್ಯವಾಗಬಹುದು ಮತ್ತು ಅವಶ್ಯಕ. ಆದರೆ ಭೂ ದೃಶ್ಯವನ್ನು ಸೃಜಿಸುವ ಪ್ರಯೋಗದಲ್ಲಿ, ಬೇರೆ ತರಹದ ವ್ಯೂಹ ರಚನೆ ಹೆಚ್ಚು ಯಶಸ್ವಿಯಾಗುವ ಸಂಭವ ಉಂಟು.

ಉದ್ಯಾನದ ವಿಶಾಲತೆಯನ್ನು, ವಿಶ್ರಾಂತಿ, ನಿಶ್ಯಬ್ದತೆ ಶಾಂತತೆಯ ಸಮಾನಗಳೆಂದು ಪರಿಗಣಿಸಬೇಕು ಮತ್ತು ಶಾಂತತೆಯ ದೊಡ್ಡ ಶತೃವೆಂದರೆ ಬಹಳ ಹೆಚ್ಚಾದ ಅಶಾಂತಿಯ ವಿವರಗಳ ಗೊಂದಲ. ಎಲ್ಲಿಯವರೆಗೆ ಲಂಬಿತ ರೇಖೆಗಳು, ವಿಶಾಲವಾದ ಬಹಿರಂಗ ಸ್ಥಳಗಳು, ಬಹಳ ದೊಡ್ಡದಾದ ಉದ್ದೇಶ ಪೂರಕ ಗುಂಪುಗಳೊಡನೆ ಸಮತೂಕ ಹೊಂದಿರುತ್ತವೆಯೋ, ಅದು ಸ್ಥಿರತೆ ಮತ್ತು ಶಾಂತತೆಯನ್ನು ಸೃಷ್ಟಿಸುತ್ತವೆ. ನಿವೇಶನದ ಮಧ್ಯದಲ್ಲಿ ಇಟ್ಟಿಗೆ ಅಂಚಿನ ವಿವಿಧ ಜಾತಿಯ ಗಿಡಗಳ ಸಂಗ್ರಹಗಳನ್ನುಳ್ಳ ಹೂಪಾತಿಗಳು ರೂಢಿಯಲ್ಲಿವೆ. ಇಂತಹವು ಉದ್ಯಾನದ ಅಳತೆಯ ಪ್ರಮಾಣವನ್ನು ಕುಗ್ಗಿಸುವುದಲ್ಲದೆ, ಕೆರಳಿದ, ಅನಿರ್ಧಾರಿತ ಮತ್ತು ನಿರ್ಧಾರವಾಗದಿರುವ ದೃಷ್ಟಿಯನ್ನು ಬೀರುತ್ತವೆ. ಮೊದಲೆ ಹೇಳಿದಂತೆ ಸಾಂಪ್ರದಾಯಿಕ ಇಂಗ್ಲಿಷ್ ಉದ್ಯಾನಗಳಲ್ಲಿ, ಮಧ್ಯದಲ್ಲಿ ಹುಲ್ಲುಹಾಸು ನಿರಂತರವಾಗಿದ್ದು, ಗಿಡಗಳು ಎಲ್ಲೆಗಳಲ್ಲಿ ಒಂದು ಸುವ್ಯವಸ್ಥಿತ ರೀತಿಯಲ್ಲಿ ಇರುವುದಿಲ್ಲ. ಅಂತಹದು ವಿಶಾಲತೆಯ ದೃಷ್ಟಿಯನ್ನು ಸುರಕ್ಷಿತವಾಗಿ ಹೊಂದುವ ರೀತಿ.

ವಿಶಾಲತೆಯ ಮನೋಭಾವವನ್ನುಂಟು ಮಾಡಲು ಜಪಾನೀಯರ ರೀತಿ ಬಹಳ ಆಧುನಿಕವೆನಿಸಿದೆ. ಮತ್ತು ಅದಕ್ಕೆ ಅಧಿಕಸೂಕ್ಷ್ಮತೆ ಮತ್ತು ದಿಟ ದೃಷ್ಟಿಬೇಕು. ಇಲ್ಲಿ ನಾವು ಜಪಾನೀಯರಿಂದ ಬಹಳ ಉಪಯೋಗಕರವಾದ ಪಾಠವನ್ನು ಕಲಿಯಬಹುದು. ಅದೆಂದರೆ ಯಾವುದು ತನ್ನಷ್ಟಕ್ಕೆ ತಾನು ಪ್ರತಿಫಲ ಕೊಡುವುದಿಲ್ಲವೋ, ಅದನ್ನು ವರ್ಜಿಸುವುದು. ಅಂದರೆ, ಯಾವ ಗಿಡವು, ಒಂದೆಡೆ

ಇದೆ ಎಂದು ಸುಮ್ಮನೆ ಬಿಡಬಾರದು. ಪ್ರತಿಯೊಂದು ಗಿಡವೂ ಒಂದು ನಿರ್ದಿಷ್ಟ ಧ್ಯೇಯವನ್ನು ಹೊಂದಿರಬೇಕು. ಅದು ತನ್ನಷ್ಟಕ್ಕೆ ತಾನೆ ಇರಲಿ ಅಥವಾ ಒಂದು ತಂಡದ ಅಂಗವಾಗಿರಲಿ, ಪುಷ್ಪ, ಫಲ, ಎಲೆ, ತೊಗಟೆ ನೆರಳನ್ನು ನೀಡಲಿ ಅಥವಾ ಅದರ ಸಂಪೂರ್ಣ ರೂಪದ ಹೊರರೇಖೆಯಾಗಿದ್ದರೂ ಇರಲಿ, ಪ್ರತಿಯೊಂದು ಒಂದು ನಿರ್ದಿಷ್ಟ ಧ್ಯೇಯವನ್ನು ಹೊಂದಿರಬೇಕು.

## ವಿಭಾಗಗಳು

ಎಲ್ಲಿ ಅವಶ್ಯಕತೆ ಇದೆಯೋ ಅಲ್ಲಿ ಹಲವು ವೇಳೆ ಉದ್ಯಾನದ ವಿವಿಧ ಭಾಗಗಳನ್ನು ಸಂಶಯವಿಲ್ಲದೆ ವಿಭಜಿಸಬೇಕಾಗುತ್ತದೆ. ಉದಾಹರಣೆಗೆ ತರಕಾರಿ ತೋಟವನ್ನು ಮರೆ ಮಾಚಲು ಹಸಿಬೇಲಿ ಅಥವಾ ಬೇಲಿಯ ಅವಶ್ಯಕತೆ ಕಂಡು ಬರುವುದು. ಇದು ತುಲನಾತ್ಮಕವಾಗಿ ಸುಲಭ. ಸಜೀವ ಮತ್ತು ನಿರ್ಜೀವ ವಸ್ತುಗಳ ಪರಸ್ಪರ ಅನುಕೂಲ ಪ್ರತಿಕೂಲಗಳು ಸ್ವತಃಸಿದ್ಧ. ಆದರೆ ಅಂತಿಮವಾಗಿ ಯಾವುದನ್ನು ಇಷ್ಟಪಟ್ಟರೂ, ಆಯ್ದುಕೊಳ್ಳುವಾಗ ಬಹುಮಟ್ಟಿಗೆ ಮಿತಿ ಇಲ್ಲದಷ್ಟು ಮಾದರಿ ಮತ್ತು ಸಾಮಗ್ರಿಗಳಿವೆ. ಇವೆರೆಡರ ಸಂಯೋಗವೂ ಕೂಡ ಸೂಕ್ತವಾಗಬಹುದು. ಉದಾಹರಣೆಗೆ, ಹಗುರವಾದ ಜಾಳಂದರಿಯನ್ನು ಪುಷ್ಪೀಯ ಬಳ್ಳಿಗಳಿಂದ ಮುಚ್ಚುವುದು. ಶುಷ್ಕ ಮತ್ತು ಶಿಲಾಭರಿತ ಪ್ರದೇಶದಲ್ಲಿ, ಮಾಂಸಲಗಳ ಹಸಿಬೇಲಿ – ಇದು ಜಮೀನು ಕಾಪಾಡಲು ಭ್ರಾಂತಿಯ ಪರಿವರ್ತನೆ – ಸುಲಭವಾಗಿ ಬೆಳಸಬಹುದು ಮತ್ತು ಆರೈಕೆ ಮಾಡುವುದಕ್ಕೆ ಅಷ್ಟು ತೊಂದರೆಗಳಿಲ್ಲ. ಕ್ರೋಟನ್ನುಗಳನ್ನು ಕೂಡ, ಅನ್ಯತಾ ತಕ್ಕಮಟ್ಟಿಗೆ ಉಪೇಕ್ಷಿಸಿದರೂ, ಉದ್ದೇಶಪೂರ್ವಕವಾಗಿ ಒಂದು ಸಾಲಿನಲ್ಲಿ ಒತ್ತಾಗಿ ನೆಟ್ಟರೆ, ನೋಡುವುದಕ್ಕೆ ಅಂದವಾಗಿರುತ್ತದೆ. ಸ್ವೀಟ್ ವಿಲಿಯಂ, ಹಳದಿ ಟೆಕೋಮ ಮತ್ತು ದಾಸವಾಳಗಳಂತಹ ಹೊದರುಗಳು, ನಿಖರವಾದ ಸಾಲನ್ನು ಅಪೇಕ್ಷಿಸದಿದ್ದರೆ, ಸಾಮಾನ್ಯವಾಗಿ ತೃಪ್ತಿದಾಯಕ ಹಸಿಬೇಲಿಯಾಗುತ್ತದೆ.

ಅತಿ ಸೂಕ್ಷ್ಮ ಸ್ಥಳ ವಿಭಾಜಕಗಳು, ಭೌತಿಕ ಅಡಚಣೆಗಳಲ್ಲದಿದ್ದರೂ, ನಿಶ್ಚಯವಾಗಿ ಉದ್ಯಾನದ ಒಂದು ಭಾಗವನ್ನು ಇನ್ನೊಂದು ಭಾಗದಿಂದ ಎತ್ತಿಕೊಡುವಂತಹವನ್ನು ರಚಿಸುವುದು ಸುಲಭ. ಉದ್ಯಾನದ ಪ್ರತಿಯೊಂದು ಭಾಗವೂ, ಪ್ರತಿಯೊಂದು ರೂಪವೂ ಮತ್ತು ಪ್ರತಿಯೊಂದು ಅಂಶವೂ ಒಂದು ರೀತಿಯಲ್ಲಿ ತನ್ನ ಪರಿಸರಗಳಿಂದ ಪ್ರತ್ಯೇಕಿಸಲ್ಪಟ್ಟಿದೆ. ಹೂ ಪಾತಿ ತನ್ನ ಹೊರಗಿನ ಹೂಪಾತಿಯಲ್ಲದ ಕ್ಷೇತ್ರದಿಂದ ಪ್ರತ್ಯೇಕಿಸಲ್ಪಟ್ಟಿದೆ. ಪ್ರತ್ಯೇಕಿಸುವ ಗೆರೆ, ಹುಲ್ಲುಹಾಸಿನ ಹರಿತವಾದ ಅಂಚಾಗಿರಬಹುದು. ಅಥವಾ ಇಟ್ಟಿಗೆಗಳ ಸಾಲಾಗಿರಬಹುದು ಅಥವಾ ಕಲ್ಲಾಗಿರಬಹುದು. ಪ್ರಭಾವ ಬೀರುವ ಏಕೈಕ ಮರವೂ ಕೂಡ ಸೂಕ್ಷ್ಮವಾಗಿ ಒಂದು ಕ್ಷೇತ್ರವನ್ನು ಮತ್ತೊಂದರಿಂದ ಪ್ರತ್ಯೇಕಿಸುತ್ತದೆ.

ಹಸಿಬೇಲಿ ಅಥವಾ ಬೇಲಿ, ನಿವೇಶನವನ್ನು ಕಣ್ಣುಮಟ್ಟದಲ್ಲಿ ಪ್ರತ್ಯೇಕಿಸಿದರೆ, ಆಗ ಇತರೆ ಮೃದು ವಿಭಾಜಕಗಳು ನೆಲಮಟ್ಟಕ್ಕೆ ಅಥವಾ ನೆತ್ತಿಯ ಮೇಲ್ಗಡೆ ಇರುತ್ತವೆ.

ಈ ವಿಭಾಜಕಗಳು ಸೂಕ್ಷ್ಮವಾಗಿ ಉದ್ಯಾನದ ಒಂದು ಭಾಗವನ್ನು ಮತ್ತೊಂದರಿಂದ ಪ್ರತ್ಯೇಕಿಸುತ್ತವೆ. ಜನರು ಉದ್ಯಾನದ ನೆಲದ ರಚನೆಯ ಪ್ರಬಲ ಘನತೆಯನ್ನು ಅರಿತಿರುವುದು ಅಪರೂಪ. ವಿವಿಧ ನೆಲ ಹೊದಿಕೆಗಳ ರಚನೆ ಮತ್ತು ಪ್ರತಿಯೊಂದರ ಮೇಲೂ, ಹೊದಿಕೆಗಳು ಮಾಡುವ ವಿವಿಧ ಆಕಾರಗಳ ಮಾದರಿಗಳು, ಹಲವು ವೇಳೆ ಉದ್ಯಾನದ ಸಂಪೂರ್ಣ ಆಕೃತಿಯ ಸ್ವರೂಪವನ್ನು ನಿರೂಪಿಸುತ್ತವೆ.



ಚಿತ್ರ 1. ಚಿಕ್ಕ ಉದ್ಯಾನದ ಮಧ್ಯದಲ್ಲಿರುವ ಹೂಪಾತಿ, ಉದ್ಯಾನವನ್ನು ಇನ್ನೂ ಚಿಕ್ಕದಾಗಿ ಕಾಣುವಂತೆ ಮಾಡುತ್ತದೆ.



ಚಿತ್ರ 2. ನೆಡುವಿಕೆಯನ್ನು ಮೂಲೆ ಮತ್ತು ಪಾರ್ಶ್ವಗಳಿಗೆ ಮೀಸಲಿಟ್ಟರೆ, ಕ್ಷೇತ್ರ ದೊಡ್ಡದಾಗಿರುವಂತೆ ಕಾಣುವುದು.

ಪ್ರತಿಯೊಂದು ಉದ್ಯಾನದಲ್ಲಿಯೂ ಸಾಮಾನ್ಯವಾಗಿ ಎರಡು ಮೂರು ವಿಧದ ನೆಲಹೊದಿಕೆಗಳಿರುತ್ತವೆ. ಹುಲ್ಲುಹಾಸಿನ ಕ್ಷೇತ್ರಗಳು, ಸಿಮೆಂಟು ಅಥವಾ ಕಾಂಕ್ರೀಟಿನ ನಿವೇಶನಗಳು, ಒರಟು ಕಲ್ಲುಹಾಸಿನ ಕ್ಷೇತ್ರಗಳು, ಗ್ರಾವೆಲ್ಲಿನ ಮತ್ತು ಇತರೆ ಕ್ಷೇತ್ರಗಳಿರಬಹುದು. ಅಂತಹ ಪ್ರತಿಯೊಂದು ಕ್ಷೇತ್ರವೂ, ತನ್ನ ಪಕ್ಕದ ಕ್ಷೇತ್ರದಿಂದ ತಡೆಯಿಲ್ಲದಂತೆ ಪ್ರತ್ಯೇಕಿಸಲ್ಪಟ್ಟಿದೆ ಮತ್ತು ಅವೆರಡರ ಮಧ್ಯೆ ಇರುವ ಗೆರೆ ವಿಭಾಜಕ. ಕ್ಷೇತ್ರದ ಆಕಾರ ತನಗೆ ತಾನೆ ಸಂಪೂರ್ಣ ಮತ್ತು ತೃಪ್ತಿದಾಯಕವಾಗಿರಬೇಕು. ಅದೇ ಕಾಲದಲ್ಲಿ ನೆರೆಹೊರೆಯ ಕ್ಷೇತ್ರಗಳಿಗೂ ಪೂರಕವಾಗಿಯೂ ಮತ್ತು ಹೊಂದಿಕೊಂಡಿರುವಂತೆಯೂ ಇರಬೇಕು.

ಇಂಗ್ಲೆಂಡಿನ ಹಲವು ಹೆಸರುವಾಸಿಯಾದ ಉದ್ಯಾನಗಳು, ಒಳ್ಳೆಯ ಪರಿಣಾಮಕೋಸ್ಕರ, ಎಕರೆಗಟ್ಟಲೆ ಉಬ್ಬುವ ಮತ್ತು ತಗ್ಗುವ ಅಂದವಾದ ಶಿಸ್ತಿನ ಡೊಂಕುಗಳನ್ನೇ ನೆಚ್ಚಿಕೊಂಡಿವೆ. ಈ ಕ್ಷೇತ್ರಗಳು ಮರಗಳ ದೊಡ್ಡ ತಂಡಗಳಿಂದ ಪ್ರತ್ಯೇಕಿಸಲ್ಪಟ್ಟಿವೆ. ಇದರಿಂದಾಗಿ ನಿರ್ಗಳ ಬಹಿರಂಗ ಹುಲ್ಲಿನ ವ್ಯಾಪಕಗಳ ಅವಿಚ್ಛಿನ್ನತೆಯನ್ನು ಸಾಂದ್ರ ಮೆಳೆಗಳು ಮುರಿಯುತ್ತವೆ. ಪ್ರತಿಯೊಂದೂ ಇನ್ನೊಂದರಿಂದ ಲಾಭ ಪಡೆಯುವಂತೆ ಮುರಿಯುತ್ತವೆ.

ಒಂದು ಚಿಕ್ಕ ಉದ್ಯಾನದಲ್ಲಿ, ಹೂಪಾತಿಗಳು, ಕಲ್ಲೊಡ್ಡುಗಳು ಇತ್ಯಾದಿ ನೆಲಮಟ್ಟದಲ್ಲಿ ರಚನೆಯ ಧ್ಯೇಯಗಳನ್ನು ವಿವರಿಸುತ್ತವೆ. ಭಾಗಶಃ ಈ ಅಂಶ ಉದ್ಯಾನ ವಿನ್ಯಾಸದ ಸಮಸ್ಯೆಯನ್ನು ತೊಡಕಿಗೆ ಈಡುಮಾಡುತ್ತದೆ. ಹೂಪಾತಿಗಳನ್ನು ಬೆಳಕು, ಮಣ್ಣು ಮತ್ತು ಬಸಿಯುವಿಕೆಯ ಆಧಾರಗಳ ಮೇಲೆ ಆದರ್ಶನೀಯ ಸ್ಥಳಗಳಲ್ಲಿ ಇಡಲಾಗುವುದಿಲ್ಲ. ಸಂಪೂರ್ಣ ತೋಟದ ರೇಖಾಕಾರಕ್ಕೆ ಅವುಗಳ ಆಕಾರ ಒದಗುವಂತೆ ನಿರ್ಮಿಸಬೇಕು.

ಮಟ್ಟದಲ್ಲಿನ ವ್ಯತ್ಯಾಸಗಳನ್ನು ಸ್ಥೂಲವಾಗಿ ಎರಡು ವಿಧಗಳಲ್ಲಿ ಉಪಯೋಗಿಸಬಹುದು. ಒಂದು ಕಡೆ ಉದ್ದೇಶ ಪೂರಕವಾಗಿಯೆ, ಎರಡು ಮಟ್ಟಗಳನ್ನು ಒಂದನ್ನಾಗಿ ಇಳಿಜಾರುವ ಹುಲ್ಲುಹಾಸಿನಲ್ಲಿ ಕೂಡಿಸಬಹುದು. ಇನ್ನೊಂದು ವಿಧವೆಂದರೆ, ಆಸರೆ ಗೋಡೆಯ ನೆರವಿನಿಂದ ಪ್ರತ್ಯೇಕತೆಯನ್ನು ಸೃಜಿಸಲು ಇಳಿಜಾರನ್ನು ಮಾಡುವುದು. ಈ ರೀತಿಯಲ್ಲಿ ಉದ್ಯಾನವನ್ನು, ಮಧ್ಯದಲ್ಲಿ ಘನೀಭೂತವಾದ ತಡೆಗಳಿಲ್ಲದೆ, ನಿರ್ದಿಷ್ಟ ಪ್ರತ್ಯೇಕ ಕ್ಷೇತ್ರಗಳನ್ನಾಗಿ ವಿಂಗಡಿಸಬಹುದು.

## ಪ್ರಮಾಣ

ಉದ್ಯಾನದಲ್ಲಿ ಪ್ರಮಾಣ ಪ್ರಶ್ನೆ, ಮುಖ್ಯವಾಗಿ ಮಾನವ ನಿರ್ಮಿತವಸ್ತುಗಳಿಗೆ ಸಂಬಂಧಿಸಿದ್ದು. ಎಲ್ಲ ಗಿಡ ಸಾಮಗ್ರಿಗಳು ಯಥಾರ್ಥವಾದ ಪ್ರಮಾಣದಲ್ಲಿರುತ್ತವೆ ಮತ್ತು ರೂಢಿಬಿಟ್ಟು, ಹುಚ್ಚುಚ್ಚಾಗಿ ನೆಟ್ಟಾಗ ಮಾತ್ರ ಪ್ರಮಾಣಮೀರಿ ಕಾಣುವಂತಿರುತ್ತವೆ. ಉದ್ಯಾನ ವಿನ್ಯಾಸದಲ್ಲಿ ಇತರೆ ಅಧೀನ ವಸ್ತುಗಳಾದ ಹಾದಿಗಳು, ಅಂತಸ್ತುಗಳು, ಕಮಾನುಗಳು, ಮೆಟ್ಟಲುಗಳು, ಕೊಳಗಳು,

ಗ್ಗೋಡೆಗಳು, ಹೂಪಾತಿಗಳು ಮತ್ತು ಪೀಠೋಪಕರಣಗಳಿಗೆ ಕೂಡ ಪ್ರಮಾಣದ ಪ್ರಶ್ನೆ ಪ್ರಾಮುಖ್ಯವಾಗುತ್ತದೆ.

ಇವುಗಳ ಅಳತೆಯನ್ನು ನಿರ್ಧರಿಸುವಾಗ, ಎರಡು ಮುಖ್ಯ ಮಾರ್ಗದರ್ಶಕ ತತ್ವಗಳು ಯಾವುದೆಂದರೆ, ಅವುಗಳಿಂದ ನಿಯಮಿತ ಕಾರ್ಯವಿದೆ ಎಂದು ನಿಶ್ಚಿತಗೊಳಿಸುವುದು ಮತ್ತು ಆಕಾಶವೆ ಛಾವಣಿಯಾಗಿರುವ ಹೊರಾಂಗಣಗಳಲ್ಲಿ, ಪ್ರತಿಯೊಂದು ವಸ್ತುವೂ ಒಳಾಂಗಣದಲ್ಲಿರುವುದಕ್ಕಿಂತ ದೊಡ್ಡದಾಗಿ ಕಾಣುವಂತೆ ಮಾಡುವುದು. ಹಾದಿಯು ಇಬ್ಬರು ಅಥವಾ ಮೂವರು ಆರಾಮವಾಗಿ ನಡೆಯುವಷ್ಟು ಅಗಲವಾಗಿರಬೇಕು; ಮೆಟ್ಟಲುಗಳು ಸಾಕಷ್ಟು ಅಗಲವಾಗಿ ಹಿತಕರವಾಗಿದ್ದು ಓಡಾಡುವುದಕ್ಕೆ ಉತ್ತೇಜನ ಕೊಡುವಂತಿರಬೇಕು. ಪ್ರತಿಯೊಂದು ಮೆಟ್ಟಲು ಕಟ್ಟಡದ ಒಳಗಿರುವುದಕ್ಕಿಂತ ಅಗಲವಾಗಿಯೂ, ತಗ್ಗಾಗಿಯೂ ಇರಬೇಕು. ಈ ಮೆಟ್ಟಲುಗಳು ಆಕರ್ಷಕವಾಗಿರಬೇಕು ಮತ್ತು ಬಳಸಲು ಯೋಗ್ಯವಾಗಿರಬೇಕು. ಪ್ರತಿಯೊಬ್ಬರೂ ಉದ್ಯಾನದಲ್ಲಿ ಸುಲಭವಾಗಿ ಓಡಾಡುವುದನ್ನು ಬಯಸುತ್ತಾರೆಯೆ ವಿನಹ, ಕಷ್ಟಕರವಾದ ಓಡಾಟವನ್ನಲ್ಲ. ಪ್ರಾಯಶಃ ಮೆಟ್ಟಲುಗಳು ಇನ್ನೊಂದು ಪಾರ್ಶ್ವದ ಉದ್ಯಾನಕ್ಕೆ ಕೊಂಡಯ್ಯಬೇಕೆಂಬುದನ್ನು ಗಮನದಲ್ಲಿಡಿ. ಅವು



ಚಿತ್ರ 3. ನೀವು ಕಲ್ಲೊಡ್ಡನ್ನು ಮರದ ಅಡಿಯಲ್ಲಿ ಮಾಡಬೇಕೆಂದಿದ್ದರೆ ಅದನ್ನು ತಗ್ಗಾಗಿ ಮತ್ತು ಹರಡಿರುವಂತೆ ಮಾಡಿ.

ಸರಳವಾಗಿಲ್ಲದಿದ್ದರೆ, ಜನರು ಅದನ್ನು ಉಪಯೋಗಿಸದೆ ಇರಬಹುದು. ಇದರಿಂದಾಗಿ ಉದ್ಯಾನದ ಒಂದು ದೊಡ್ಡ ಸ್ಥಳವು ಅವರಿಗೆ ದೊರಕದಂತಾಗಬಹುದು. ಹಾಗೆಯೆ, ಹಾದಿ ಮತ್ತು ಮೆಟ್ಟಲುಗಳನ್ನು ಬಹಳ ಕಡಿಮೆಗೊಳಿಸುವುದು ಮತ್ತು ಕಡಿದಾಗಿ ಮಾಡುವುದು ಸಾಮಾನ್ಯವಾಗಿ ಕಂಡುಬರುವ ಒಂದು ತಪ್ಪು. ಆದರೆ ಇದರ ವ್ಯತಿರಿಕ್ತತೆ ಸಾರ್ವಜನಿಕ ಉದ್ಯಾನಗಳಲ್ಲಿ ಕಂಡಿರುವ ವಿಷಯ. ಅದೆಂದರೆ ಅನಾವಶ್ಯಕವಾದ ಅನೇಕ ಹಾದಿಗಳು (ರಸ್ತೆಗಳು ಎನ್ನಬಹುದು), ಆಗಿಂದಾಗ್ಗೆ

ಒಂದಕ್ಕೊಂದು ಅಡ್ಡ ಸೀಳುವುದು. ಇದು ಉದ್ಯಾನದಲ್ಲಿ ಇದ್ದೇವೆ ಎಂಬ ಜನರ ಭಾವನೆಯನ್ನೇ ನಾಶಮಾಡಬಹುದು.

ಪ್ರಮಾಣಗಳ ಬಗ್ಗೆ ಮಾತನಾಡುವಾಗ, ಮಾಡಬೇಕಾಗುವುದಕ್ಕಿಂತ ಮಾಡಬಾರದುದರ ಬಗ್ಗೆ ಒತ್ತಿ ಹೇಳುವುದು ಸುಲಭ. ಭಾರತದಲ್ಲಿ ಈಗ ರೂಢಿಯಲ್ಲಿರುವ ಉದ್ಯಾನದ ಆಭಾಸಗಳು 'ಏನು ಮಾಡಬಾರದು' ಎಂಬುದರ ಬಗ್ಗೆ ನಮಗೆ ಅನೇಕ ಉದಾಹರಣೆಗಳನ್ನು ಒದಗಿಸುತ್ತವೆ. ಒಂದು ಮರವನ್ನು ಅಂದಗೊಳಿಸಲು ಬಳಸುವ ಸರ್ವಸಾಮಾನ್ಯ ವಿಧವೆಂದರೆ ಅದರ ಅಡಿಯಲ್ಲಿ ಒಂದು ಕಲ್ಲೊಡ್ಡನ್ನು ಮಾಡುವುದು. ಅಲ್ಲಲ್ಲಿಯೆ ಮಧ್ಯದಲ್ಲಿ, ಕಲ್ಲುಗಳಿಂದ ಹರಡಿದ, ಮುಳ್ಳುಗಿಡಗಳಿಂದ ನೆಡಲ್ಪಟ್ಟ, ಅಂತಹ ಕಲ್ಲೊಡ್ಡುಗಳು ಸ್ವಭಾವತಹ ಅವಲಕ್ಷಣ. ಅವುಗಳ ಅಪಯಶಸ್ಸಿಗೆ ಕಾರಣವೆಂದರೆ ಮರದ ಎತ್ತರ ಮತ್ತು ಹರವಿಗೆ ಯಾವ ಪ್ರಮಾಣವೂ ಇಲ್ಲದೆ ಇರುವುದು. ಒಂದು ದೊಡ್ಡ ಹರಡಿರುವ ಮರ, ಅದರ ಅಡಿಯಲ್ಲಿ ಶಂಕುವಿನಾಕಾರದ ಒಂದು ಚಿಕ್ಕ ಗುಡ್ಡೆ, ಸಹಜವಾಗಿಯೇ ಯಾವ ಪ್ರಮಾಣವಿಲ್ಲದೆ ವಿರೂಪವಾಗಿರುತ್ತದೆ. ಹಾಗೆಯೆ, ಒಂದು ಎತ್ತರವಾದ ಕಲ್ಲಿನ ಗೋಡೆ, ಅದರ ಅಡಿಯಲ್ಲಿ ಕಿರಿದಾದ ಹೂವಿನ ಪಾತಿ ಪ್ರಮಾಣಕ್ಕನುಸಾರವಾಗಿ ಇರುವುದಿಲ್ಲ ಮತ್ತು ಅಸಂಬದ್ಧವಾಗಿರುತ್ತದೆ. ಸಾಮಾನ್ಯವಾಗಿ ಉದ್ಯಾನದ ಕುಂಡಗಳು ಚಿಕ್ಕವು. ಈ ಕಾರಣದಿಂದಾಗಿ ಬಹಳ ಸಣ್ಣ ಜಾಗವಲ್ಲದೆ ಇತರೆಡೆಗಳಲ್ಲಿ ಒಂದೇ ಒಂದು ಕುಂಡವನ್ನು ಇಟ್ಟರೆ ಅದು ಅಸಹ್ಯವಾಗಿ ಕಾಣಬಲ್ಲದು.

ಉದ್ಯಾನಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಹಾಗೆಯೇ ಪ್ರಮಾಣದ ಬಗ್ಗೆಯೂ ಸಹ ಸರಿತಪ್ಪು ಎಂದು ತಿಳಿಸುವ ಯಾವ ಕಟ್ಟಳೆಗಳೂ ಇಲ್ಲವಾಗಿವೆ. ಇದಕ್ಕೆ ಒಂದೇ ದಾರಿಯೆಂದರೆ ಯುಕ್ತ ಕಣ್ಣದೃಷ್ಟಿಯನ್ನು ವೃದ್ಧಿಪಡಿಸಿಕೊಳ್ಳುವುದು. ಪ್ರಾರಂಭದಲ್ಲಿ ಅನೇಕ ಪರ್ಯಾಯಗಳನ್ನು ಪರೀಕ್ಷಿಸಿ, ಯಾವುದು ಚೆನ್ನಾಗಿ ಕಾಣುತ್ತದೆಯೋ ಅದನ್ನು ಆಯ್ಕೆ ಮಾಡಬೇಕು. ಹೂವಿನ ಪಾತಿಯ ಬಾಹ್ಯ ರೇಖೆ ಮತ್ತು ಅಳತೆಯನ್ನು ನಿರ್ಧರಿಸಲು, ಒದ್ದೆಯಾದ ಹಗ್ಗವನ್ನು ಬಳಸುವುದು ಒಳ್ಳೆಯ ಉಪಾಯ. ನೆಲದ ಮೇಲೆ ಹರಡಿ ವಿವಿಧ ರೀತಿಗಳಲ್ಲಿ ಅದನ್ನು ವ್ಯವಸ್ಥಿಸಿ, ಬಹಳ ಸಾಧುವಾದುದನ್ನು ನಿಶ್ಚಯಿಸಕೊಳ್ಳಬಹುದು. ಒಂದು ಕಮಾನಿನ ಅಥವಾ ಲತಾಗೃಹದ ಕರಾರುವಾಕ್ಕಾದ ಎತ್ತರವನ್ನು ನಿಶ್ಚಯಿಸಲು ವಿವಿಧ ಎತ್ತರದ ಬೊಂಬುಗಳನ್ನು ನೆಟ್ಟು, ಕಚ್ಚಾ ಲತಾಗೃಹವನ್ನು ನಿರ್ಮಿಸಿ ನೋಡುವುದು. ಒಂದು ಮರದ ಅಳತೆ ಮತ್ತು ಸ್ಥಳವನ್ನು ಗುರುತು ಮಾಡಲು ಕಂಬದಂತಿರುವ ಬೊಂಬನ್ನು ಕೂಡ ಉಪಯೋಗಿಸಬಹುದು.

ಉದ್ಯಾನದ ಅಳತೆ ತನ್ನಷ್ಟಕ್ಕೆ ತಾನೆ ಅದರ ಸ್ವರೂಪಗಳ ಪ್ರಮಾಣವನ್ನು ಸ್ವಲ್ಪಮಟ್ಟಿಗೆ ನಿರ್ಧರಿಸುತ್ತದೆ. ಇಪ್ಪತ್ತು ಮೂವತ್ತು ಎಕರೆಯ ಸಾರ್ವಜನಿಕ ತೋಟದಲ್ಲಿ ಪ್ರತಿಯೊಂದರ ಅಳತೆಯು ಉದ್ಯಾನದ ಅಳತೆಯ ಪರಿಮಿತಿಯಲ್ಲಿರಬೇಕು. ಹುಲ್ಲುಹಾಸಿನ ಅಳತೆಯನ್ನು ಚದರ ಗಜಗಳ ಬದಲಾಗಿ ಎಕರೆಗಳಲ್ಲಿ ಲೆಕ್ಕಹಾಕಬೇಕು. ಹೂಪಾತಿಗಳು ನೂರಡಿ ಉದ್ದವಾಗಿರಬೇಕು. ಚಿಕ್ಕ



1 ತೆಳು ಮತ್ತು ಉದ್ದವಾದ ಇಂಥ ಮರಗಳನ್ನು ಒಟ್ಟೊಟ್ಟಿಗೆ ಬೆಳೆಸುವುದರಿಂದ ಸೌಂದರ್ಯವನ್ನು ಹೆಚ್ಚಿಸಬಹುದು.
(ಫೋಟೋ ಕೃಪೆ: ಎಂ. ಶಹೀರ್)





2. ಮತ್ತು 3. ಮುಕ್ತ ಹುಲ್ಲು ಬಯಲಿನ ನಡು ನಡುವೆ ಮರಗಳ ಸಮೂಹಗಳಿದ್ದರೆ ಉದ್ಯಾನ ಮತ್ತಷ್ಟು ವಿಶಾಲವಾಗಿ ಕಾಣುತ್ತದೆ. (ಫೋಟೋ ಕೃಪೆ: ಎಂ. ಶಹೀರ್)



4. ಯಾವುದೇ ಭೂದೃಶ್ಯ ಇಲ್ಲವೇ ಉದ್ಯಾನಕ್ಕೆ ಆಕಾಶವು ಸೌಂದರ್ಯವನ್ನು ನೀಡುತ್ತದೆ. (ಫೋಟೋ ಕೃಪೆ: ಎಂ. ಶಹೀರ್)



5. ದೆಹಲಿಯಲ್ಲಿನ ಒಂದು ಭೂದೃಶ್ಯ -ನೈಸರ್ಗಿಕ ಕಲ್ಲುಹಾಸಿನ ಮೇಲೆ ನಿರ್ಮಿಸಲಾಗಿದೆ. (ಫೋಟೋ ಕೃಪೆ: ಸುರಿಂದರ್ ಸುನೇಜಾ)



6. ಕೊಡೈಕೆನಾಲ್‌ನ ಗಿರಿಪ್ರದೇಶದಲ್ಲಿನ ಒಂದು ಉದ್ಯಾನ. (ಫೋಟೋ ಕೃಪೆ: ಕ್ಲೇರ್ ಆರ್ನಿ)



7. ಹುಲ್ಲುಹಾಸು ಯಾವುದೇ ಭೂಭಾಗವನ್ನು ಸಹ ಉದ್ಯಾನವನ್ನಾಗಿ ಮಾರ್ಪಡಿಸುತ್ತದೆ. (ಫೋಟೋ ಕೃಪೆ: ಎಂ. ಶಹೀರ್)



8. ಒಂದೇ ಬಣ್ಣದ ಹೂಗಳ ಸಮೂಹವು ಹಲವು ಬಣ್ಣಗಳ ಹೂಗಳ ಸಮೂಹಕ್ಕಿಂತ ಹೆಚ್ಚು ಸುಂದರವಾಗಿ ಕಾಣುತ್ತದೆ. (ಫೋಟೋ ಕೃಪೆ: ಸುರಿಂದರ್ ಸುನೇಜಾ)



9. ಎಲೆಗುಂಪಿನ ವಿಭಿನ್ನ ವಿನ್ಯಾಸಗಳು ಒಂದು ಆಕರ್ಷಕ ಸಂಯೋಜನೆಯನ್ನು ನಿರ್ಮಿಸುತ್ತವೆ. (ಫೋಟೋ ಕೃಪೆ:



10. ಮರಗಳಿಂದಾದ ನೈಸರ್ಗಿಕ ಗೋಡೆ. (ಫೋಟೋ ಕೃಪೆ: ಸುರಿಂದರ್ ಸುನೇಜಾ)



11. ಸ್ವಲ್ಪವೇ ಪ್ರಯತ್ನದಿಂದ ಹಾದಿಯನ್ನು ಸುಂದರವಾಗಿ ವಿನ್ಯಾಸಗೊಳಿಸಲಾಗಿದೆ. (ಫೋಟೋ ಕೃಪೆ: ಎಂ. ಶಹೀರ್)



12. ನೈಸರ್ಗಿಕ ಕಲ್ಲು ಎಲೆಗುಂಪನ್ನು ಸುಂದರವಾಗಿ ರೂಪಿಸಿದೆ. (ಫೋಟೋ ಕೃಪೆ: ಎಂ. ಶಹೀರ್)

ತೋಟಗಳಲ್ಲಿರುವಂತೆ, ಸದೃಢ ಪ್ರಮಾಣದಲ್ಲಿ ಒತ್ತಾಗಿ ನೆಡಬೇಕು. ಬಹಿರಂಗ ಸ್ಥಳಗಳು ಮರೆಯಾಗದಂತೆ ಇನ್ನೂ ವಿಶಾಲವಾಗಿರಬೇಕು. ದೊಡ್ಡ ಉದ್ಯಾನದ ಪ್ರತಿಯೊಂದು ಅಂಗವೂ ದೊಡ್ಡದಾಗಿದ್ದು, ಗಾಂಭೀರ್ಯ ಪ್ರಮಾಣವನ್ನು ತೋರಬೇಕು. ಇಲ್ಲದಿದ್ದರೆ ಸಂಪೂರ್ಣ ಉದ್ಯಾನವು ವಿಶಾಲವಾಗಿ ಅಥವಾ ಗಂಭೀರವಾಗಿ ಇರುವುದಿಲ್ಲ. ವಿಶಾಲವಾದ ವಿಹಾರಕ್ಷೇತ್ರಗಳಿಂತಿರುವ ನಿವೇಶನಗಳಲ್ಲಿ ಚಿಕ್ಕ, ಆಡಂಬರದ ಜಲಪಾತ ಮತ್ತು ಕಲ್ಲೊಡ್ಡುಗಳನ್ನು ಕುಶಲವಾಗಿ ಮೂಲೆಗಳಲ್ಲಿ ಸೇರಿಸಿರುವುದನ್ನು ನಾನು ಅಲ್ಲಲ್ಲಿ ನೋಡಿದ್ದೇನೆ. ಇದಕ್ಕಿಂತಲೂ ಹೆಚ್ಚಾಗಿ ಯಾವುದೂ ಅಸಮಂಜಸವಾಗಿಯೂ ಮತ್ತು ಅಪ್ರಮಾಣಿಕವಾಗಿಯೂ ಇರಲಾರದು. ಈ ಸೂಕ್ಷ್ಮ ಪ್ರತಿರೂಪ ಆಕಾರಗಳು ಬಹಳ ಕೃತಕ. ಸಣ್ಣ ಉದ್ಯಾನಗಳಿಗೆ ಸಂಬಂಧಿಸಿದ್ದು; ಪ್ರಾಯಶಃ ಮಾಳಿಗೆ ತೋಟಗಳಿಗೆ ಕೂಡ.

ಅಳತೆ ಅಥವಾ ಪ್ರಮಾಣದ ಪ್ರಶ್ನೆ, ಮನೆಯ ಅಥವಾ ಕಟ್ಟಡದ ಅತಿ ಸಮೀಪ ಪರಿಸರಗಳಿಗೆ ಎಚ್ಚರಿಕೆಯ ಗಮನವನ್ನು ಸೆಳೆಯುತ್ತವೆ. ಏಕೆಂದರೆ ಇಲ್ಲಿ ಅನೇಕ ಮಾನವ ನಿರ್ಮಿತ ವಸ್ತುಗಳಿರುತ್ತವೆ. ಈ ಅಂಶಗಳನ್ನು ಒಂದೊಂದಾಗಿ ಗಣನೆ ತೆಗೆದುಕೊಂಡರೆ: ನಾವು ಪ್ರವೇಶ ಮತ್ತು ರಸ್ತೆಯಿಂದ ಪ್ರಾರಂಭಿಸೋಣ. ಪ್ರವೇಶ ದ್ವಾರದ ಅಳತೆ ಮತ್ತು ಶೈಲಿ, ಕಟ್ಟಡದ ಅಳತೆ ಮತ್ತು ಶೈಲಿಯನ್ನು ಅವಲಂಬಿಸಿದೆ. ರಸ್ತೆಯ ಅಳತೆ ಮತ್ತು ಆಕಾರ, ಎಷ್ಟು ಕಾರುಗಳು ಒಳಗೆ ಬರಬಹುದು, ಅವು ಅಲ್ಲಿ ಬಹಳಕಾಲ ನಿಲ್ಲುತ್ತವೆಯೋ ಎಂಬ ವಿಷಯಗಳನ್ನು ಅನುಸರಿಸಿದೆ.

ಸಾಧ್ಯವಾದಷ್ಟು ಹೆಚ್ಚಿನ ಪ್ರದೇಶವನ್ನು ಗಾರೆ ಸಿಮೆಂಟಿನ ಜಾಗವನ್ನಾಗಿ ಮಾಡುವ ಅಭ್ಯಾಸ ಹೆಚ್ಚುತ್ತಿದೆ. ಇದು ದುರಸ್ತಿಯನ್ನು ಕಡಿಮೆ ಮಾಡುತ್ತದೆ ಮತ್ತು ಚಾಲಕರು ತಮ್ಮ ಕಾರುಗಳನ್ನು ಸುಲಭವಾಗಿ ತಿರುಗಿಸುವುದಕ್ಕೆ ಅನುಕೂಲಗೊಳಿಸುತ್ತದೆ. ಇನ್ನೂ ಒಂದು ಪ್ರಯೋಜನವೆಂದರೆ ದೇವರು ಪಾಲಿಸಿದ ಮಣ್ಣನ್ನು ಮುಚ್ಚುತ್ತದೆ.

ವಾಸ್ತವವಾಗಿ ಸೂಕ್ತವಾಗಿ ರಚಿಸಿದ ದಾರಿ, ಕಟ್ಟಡದ ಸ್ವರೂಪವನ್ನು ಮತ್ತಷ್ಟು ಹೆಚ್ಚಿಸುತ್ತದೆ. ಅಲ್ಲದೆ ನಿಕೃಷ್ಟವಾಗಿ ರಚಿಸಿದ ಒಂದು ಕಟ್ಟಡಕ್ಕೆ, ಸೂಕ್ತವಾಗಿ ರಚಿಸಿದ ದಾರಿ, ಅದಕ್ಕೆ ಗಾಂಭೀರ್ಯ ಮತ್ತು ಒಳ್ಳೆಯ ನೋಟವನ್ನು ಕೂಡ ಕೊಡಬಲ್ಲದು. ಹಾಗೆಯೇ ಕೆಡಿಸಲೂಬಹುದು. ಒಂದು ಚಿಕ್ಕ ಹಾದಿಯನ್ನು ಕೂಡ, ಗಿಡನೆಡುವುವರಿಂದ, ಸಾಲುಮರದ ದಾರಿಯಂತೆ ಕಾಣುವ ಹಾಗೆ ಮಾಡಬಹುದು. ಅನೇಕ ಸ್ಥಳಗಳಲ್ಲಿ ಅಸಮಂಜಸವಾಗಿ ಕಾಣುವ ಪುತ್ರಜೀವಿ ಕಾಡುಮರವನ್ನು ಒಂದು ಚಿಕ್ಕ ಹಾದಿಯ ಉದ್ದಕ್ಕೂ ನೆಟ್ಟರೆ, ಗಾಢ ಪರಿಣಾಮವನ್ನು ಬೀರುವಂತೆ ಉಪಯೋಗಿಸಬಹುದು. ಅದರ ಕೃತಕ ಆಕಾರ, ಜೊತೆಗೆ ಅದು ಹರಡದೆ ಇರುವುದರಿಂದ, ಸ್ತಂಭಾಕೃತಿಯಲ್ಲಿ ನೆಟ್ಟರೆ, ಒಂದು ಆಸ್ತಿಯಾಗುತ್ತದೆ. ಒಂದು ಎತ್ತರವಾದ ಕಟ್ಟಡ ಅಥವಾ ಮನೆ, ನೆಲವನ್ನು ಕೂಡುವ ಸ್ಥಳದಲ್ಲಿ ಒದಗುವ ಒಂದು ಮುಖ್ಯ ನಾಭಿ ಬಿಂದು, ಪ್ರಮಾಣಕ್ಕೆ ಗಮನಕೊಡದಿರುವುದರಿಂದ ಹಾಳಾಗುತ್ತದೆ. ಕಟ್ಟಡದ ಅಡಿಯಲ್ಲಿ, ಕಿರಿದಾದ ಪಾತಿಯಲ್ಲಿ, ಅಸಮವಾದ ಚಿಕ್ಕ ಬಣ್ಣದೆಲೆಗಳುಳ್ಳ ಗಿಡಗಳನ್ನು ನೆಡುವುದು ಸಾಮಾನ್ಯವಾಗಿ ಕಾಣುವ ದೃಷ್ಟಿ. ಇದು

ಕೆಳಗಡೆ ಶೋಚನೀಯವಾಗಿ ಕಾಣುವ ನೆರಿಗೆಯಂತಿರುವುದು. ದೊಡ್ಡ ಕಟ್ಟಡಗಳಿಗೆ ದೊಡ್ಡ ಗಿಡಗಳು; ಅವು ದೃಢವಾಗಿ ನಿಲ್ಲುವಂತಿರಬೇಕು. ಯಾವ ಕಾರಣದಿಂದಾಗಲೀ, ದೊಡ್ಡ ಮರಗಳನ್ನು ಕಟ್ಟಡಕ್ಕೆ ಸಮೀಪದಲ್ಲಿ ನೆಡಲಾಗದಿದ್ದರೆ, ಸುತ್ತಲಿನ ನೆಲಹೊದಿಕೆ, ಕಾಂಕ್ರೀಟ್ ನೆಲಗಟ್ಟನ್ನಾಗಲಿ ಅಥವಾ ಹುಲ್ಲುಹಾಸನ್ನಾಗಲಿ ಗೋಡೆಗಳವರೆಗೂ ಕೊಂಡೊಯ್ಯುವುದು ಉತ್ತಮ. ಆದರೆ ಇನ್ನೊಂದು ಕಡೆ, ಚಿಕ್ಕ ಗುಡಿಸಲು ಅಥವಾ ಬಂಗಲೆಯ ಗೋಡೆ ಎದುರಿಗೆ ಸಣ್ಣ ಪುಷ್ಪಗಳ ಅಥವಾ ಅಲಂಕಾರಿಕ ಎಲೆಗಳನ್ನುಳ್ಳ ಗಿಡಗಳನ್ನು ಪಾತಿಯಲ್ಲಿ ನೆಟ್ಟಿದ್ದರೆ, ಅದು ಚೆನ್ನಾಗಿಯೇ ಕಾಣುತ್ತದೆ.

ಇಂದಿನ ದುಬಾರಿಯ ದಿನಗಳಲ್ಲಿ, ಒಂದು ಸಣ್ಣ ಮನೆ ಅಸಮ ಪ್ರಮಾಣದ ಭಾರಿ ಗೋಡೆಯಿಂದ ಸುತ್ತುವರಿಯಲ್ಪಟ್ಟಿರುವುದು ಅಸಂಭವ. ವಿವೇಕಯುತವಾದ ಮಾರ್ಗವೆಂದರೆ, 4–5 ಅಡಿ ಎತ್ತರದ ಗೋಡೆ ಮತ್ತು ಕೆಲವು ಅಡಿ ಎತ್ತರವನ್ನು ಲತೆಗಳಿಂದ ಮುಚ್ಚಲು ಒಂದು ವ್ಯವಸ್ಥೆ. ಕೆಲವು ಸಂದರ್ಭಗಳಲ್ಲಿ, ಅದೂ ಪಟ್ಟಣ ಮತ್ತು ಕಿಕ್ಕಿರಿದು ತುಂಬಿದ ಊರುಗಳಲ್ಲಿ, 20–30 ಅಡಿ ಎತ್ತರದ ಗೋಡೆಗಳು ಇರುವುದುಂಟು ಮತ್ತು ಅಂತಹ ಕಡೆ ಇದರ ಬಗ್ಗೆ ವಿಚಾರ ಮಾಡಬೇಕಾಗುತ್ತದೆ. ಅಂತಹ ಗೋಡೆಯನ್ನು, ಸಾಮಾನ್ಯವಾಗಿ ಏಕಾಂತತೆಯನ್ನು ರಕ್ಷಿಸಲು, ಯಾವುದೋ ಅಹಿತವಾದುದನ್ನು ಮರೆಮಾಡಲು ಅಥವಾ ಯಾವುದೋ ನಿರ್ದಿಷ್ಟ ಕಾರಣಕ್ಕಾಗಿ ಕಟ್ಟುತ್ತಾರೆ. ಅದನ್ನು ಒಡೆದು ಹಾಕುವುದಕ್ಕಾಗಲಿ ಅಥವಾ ಅದರ ಪ್ರಮಾಣವನ್ನು ಕಡಿಮೆಗೊಳಿಸುವುದಕ್ಕಾಗಲೀ ಆಗುವುದಿಲ್ಲ. ಅದು ಇದ್ದಹಾಗೆ, ಅದರ ಜೊತೆ ವಾಸಿಸಬೇಕು.

ಅಂತಹ ಪರಿಸ್ಥಿತಿಗಳಲ್ಲಿ, ಹೇಗಾದರೂ ಆ ಪ್ರಮಾಣವನ್ನು ಅದು ಇರುವುದಕ್ಕಿಂತ ಕಡಿಮೆಯಾಗಿ ಕಾಣುವಂತೆ ಮಾಡಬೇಕು. ಒಂದು ವಿಧಾನವೆಂದರೆ ಅದಕ್ಕೆ ಎದುರಾಗಿ ಬಹಳ ಎತ್ತರವಾದ ಮರಗಳನ್ನು ನೆಡುವುದು. ಇನ್ನೊಂದು ಅದನ್ನು ಸಮತಲಕ್ಕನುಸಾರವಾಗಿ ವಿಭಾಗಿಸುವುದು. ಇದನ್ನು ಜಾಳಂದರದ ಪಟ್ಟಿಗಳನ್ನು ಅಡ್ಡಲಾಗಿಡುವುದರಿಂದ ಗಳಿಸಬಹುದು. ಆದರೆ ನಿವೇಶನದ ವಿಶೇಷ ಪರಿಸ್ಥಿತಿಗಳು ಯಥಾರ್ಥ ಪದ್ಧತಿಯನ್ನು ಕಟ್ಟು ಮಾಡುತ್ತವೆ. ಆದರೆ ನಾನು ಇಲ್ಲಿ ಒತ್ತಿಹೇಳಬೇಕಾದ ವಿಷಯವೆಂದರೆ, ತಕ್ಕಮಟ್ಟಿಗೆ ಯಾವುದೋ ಒಂದು ದುರದೃಷ್ಟಕರ ಉದ್ಯಾನದ ರೂಪವನ್ನು ವ್ಯವಹರಿಸುವ ಬಗೆ: ಅದನ್ನು ಕಡೆಗಾಣಿಸಲು ಪ್ರಯತ್ನಪಡದೆ ಅಥವಾ ಮೂಲೆಯನ್ನು ಹಗುರವಾದ ಬಳ್ಳಿಯಿಂದ ಮುಚ್ಚುವ ಅಭಿನಯ ಮಾಡದೆ, ನಿಜಸ್ಥಿತಿಯನ್ನು ಕಂಡು ಅದನ್ನು ಪ್ರಯತ್ನಪೂರಕವಾಗಿ ಮತ್ತು ಕಲ್ಪನಾ ಶಕ್ತಿಯಿಂದ ಸಾಧಿಸುವುದು. ಎಷ್ಟೋ ವೇಳೆ ಇಂತಹ ಕಣ್ಣು ಬೇನೆಗಳು, ಉದ್ಯಾನದ ಕುತೂಹಲ ನಾಭಿ ಬಿಂದುಗಳನ್ನಾಗಿ ಮಾರ್ಪಡಿಸಬಲ್ಲವೆಂಬುದು ಆಶ್ಚರ್ಯಕರ.

**ಕಾಲ ಮತ್ತು ಬೆಳಕು**

ಉದ್ಯಾನವನ್ನು ರಚಿಸುವಾಗ, ಮೂರು ನಿಶ್ಚಿತ ಬಗೆಯ ಕಾಲಗಳಿವೆ ಎಂಬುದನ್ನು ಪರಿಗಣಿಸಬೇಕು. ಮೊದಲನೆಯದಾಗಿ ಹಗಲು ಹೊತ್ತು. ಹಗಲು ಹೊತ್ತಿನಲ್ಲಿ ವಿವಿಧ ಪ್ರಮಾಣಗಳ ಬೆಳಕು ಮತ್ತು ನೆರಳು ಇರುತ್ತದೆ. ಸಮಯದಿಂದ ಸಮಯಕ್ಕೆ ಬದಲಾಗುವ ನೆರಳನ್ನು ರಸಿಕತೆ ಹಾಗೂ ಉಪಯುಕ್ತತೆಯ ದೃಷ್ಟಿಗಳಿಂದ ಗಣನೆಗೆ ತೆಗೆದುಕೊಳ್ಳಬೇಕು.

ಬೆಳಗಿನ ಬಿಸಿಲು, ಪುಷ್ಪಗಳಿಗೆ ಉತ್ಕೃಷ್ಟವಾದುದರಿಂದ, ಪುಷ್ಪಗಳಿರುವ ತೋಟದ ಭಾಗದ ಮೇಲೆ ಆ ಸಮಯದಲ್ಲಿ ನೆರಳು ಬೀಳುವಂತೆ ಮರಗಳನ್ನು ನೆಡುವುದು ಅವಿವೇಕತನ ಮತ್ತು ಉದ್ಯಾನದ ಅತ್ಯಾಕರ್ಷಕ ಭಾಗ ಸಾಯಂಕಾಲದ ವೇಳೆಯಲ್ಲಿ ಕುಳಿತುಕೊಳ್ಳುವುದಕ್ಕೆ ಯಥೋಚಿತವಾದದ್ದು. ಆ ಸಮಯದಲ್ಲಿ ಸೂರ್ಯನ ಬೆಳಕು ಮತ್ತು ಛಾಯೆ ಸಮಂಜಸವಾಗಿರಬೇಕು.

ಉದ್ಯಾನ ಕಾಲದ ಎರಡನೆ ವಿಧ ವಾರ್ಷಿಕ ಋತುಗಳು. ಸೂರ್ಯನ ಋತುಮಾನ ಚಲನೆಯನ್ನು ಸ್ಥೂಲವಾಗಿ ನಿರ್ಧರಿಸಬೇಕು ಮತ್ತು ಯಾವ ತೋಟಗಾರನಿಗೆ ಇದರ ಬಗ್ಗೆ ತಿಳುವಳಿಕೆ ಇಲ್ಲವೊ, ಆತನು ನಿರಂತರವಾಗಿ ತೊಂದರೆಗೀಡಾಗುವನು. ತೊಂದರೆಗೆ ಇನ್ನೊಂದು ಮೂಲ, ಅದೂ ಋತುಗಳಿಂದಾಗಿ, ನಮ್ಮ ಮರಗಳು ವಿವಿಧ ಕಾಲಗಳಲ್ಲಿ ಎಲೆಗಳನ್ನು ಉದುರಿಸುವುದು ವಾಸ್ತವಾಂಶ. ಒಂದೇ ಕಾಲದಲ್ಲಿ ಅಸ್ಥಿರ ಗಿಡಗಳೆಲ್ಲವೂ ಎಲೆಗಳನ್ನು ಉದುರಿಸುವ ಆಧಾರದ ಮೇಲೆ ಲೆಕ್ಕಹಾಕುವುದು ಒಂದು ರೀತಿ. ಆದರೆ ನಮ್ಮಲ್ಲಿ ಪ್ರತಿಯೊಂದು ಮರಕ್ಕೂ ವಿಚಿತ್ರ ಅಭ್ಯಾಸಗಳಿವೆ ಮತ್ತು ಪ್ರತಿಯೊಂದು ಮರದ ಬಗ್ಗೆಯೂ ಒಂದು ನಿರ್ಧಾರಕ ಗಾಢ ಸಂಬಂಧವನ್ನು ಬೆಳಸಿಕೊಳ್ಳಬೇಕು; ಇದರಿಂದಾಗಿ ಮಳೆಗಾಲದಲ್ಲಿ ಮರದ ಅಡಿಯಲ್ಲಿ ನೆಟ್ಟ ಜಂಜೀರ ಗಿಡಗಳಿಗೆ ಉಳಿಯುವುದಕ್ಕೆ ಅವಕಾಶವಿದೆಯೆ, ಇಲ್ಲವೆ ಎಂಬುದರ ಬಗ್ಗೆ ಭವಿಷ್ಯನುಡಿಯಲು, ನಿಜವಾದ ಕ್ರಮಬದ್ಧ ಅಭ್ಯಾಸಗಳನ್ನು ಹೊಂದಿರುವ ತೋಟಗಾರನು ಎಲೆಗಳು ಉದುರುವ ಕಾಲ, ಹೂ ಬಿಡುವ ಕಾಲ ಮತ್ತಿತರ ಅಭ್ಯಾಸಗಳ ಬಗ್ಗೆ, ಮೊದಲಿನಿಂದಲೇ ಮಾಹಿತಿಯನ್ನು ತಯಾರಿಸುತ್ತಾನೆ. ಆಮೇಲೆ ಅದನ್ನು ನಿವೇಶನದ ನಕ್ಷೆಯ ಮೇಲೆ ಇಟ್ಟು, ಅದರಲ್ಲಿ ಸೂರ್ಯನ ಕೋನ ಮತ್ತು ಸಂಭವನೀಯ ಬಿಸಿಲು ಮತ್ತು ನೆರಳಿನ ಕ್ಷೇತ್ರಗಳು, ವಾರ್ಷಿಕ ಪುಷ್ಪಗಳಿಗೆ ವರ್ಷದ ವಿವಿಧ ಋತುಗಳಲ್ಲಿ ಸೂಕ್ತ ಸ್ಥಳಗಳ ಬಗ್ಗೆ ಲೆಕ್ಕಾಚಾರ ಹಾಕುತ್ತಾನೆ. 'ಆದರೆ ಆಗಲಿ ಹೋದರೆ ಹೋಗಲಿ' ಎನ್ನುವ ನನ್ನಂತಹ ತೋಟಗಾರನು, ಇಂತಹ ಅನೇಕ ವಿಷಯಗಳನ್ನು ಕಠಿಣ ಮಾರ್ಗಗಳಿಂದ, ಕೆರಳಿದ ಆಶ್ಚರ್ಯದಿಂದ ಕಲಿಯಬೇಕಾಗುತ್ತದೆ.

ಕಾಲದ ಈ ಎರಡು ಪರಿಣಾಮಗಳು ನಿರಂತರ ರೀತಿಯವು. ಮೂರನೆಯದು ದೀರ್ಘ ಅವಧಿಯದಾದ್ದರಿಂದ ಸಾಮಾನ್ಯವಾಗಿ ಅಲಕ್ಷಿಸುತ್ತಾರೆ. ವರ್ಷಗಳು

ಕಳೆದಂತೆ ಮತ್ತು ಉದ್ಯಾನ ಪ್ರಾಯಕ್ಕೆ ಬಂದಂತೆ, ಬಿಸಿಲು ಮತ್ತು ನೆರಳಿನ ಮಾದರಿಗಳು, ಉದ್ಯಾನದ ಸಂಪೂರ್ಣ ನೋಟ ಮತ್ತು ವೈಶಿಷ್ಟಗಳನ್ನು ಗುರುತಿಸಲಾಗದಷ್ಟು ಬದಲಾಯಿಸುವುದೇ ಮೂರನೇ ಪರಿಣಾಮ. ಬದಲಾಗುತ್ತಿರುವ ಈ ಲಕ್ಷಣಗಳನ್ನು ಗಮನದಲ್ಲಿಟ್ಟುಕೊಂಡು ಸತತವಾಗಿ ವ್ಯವಸ್ಥೆಗಳನ್ನು ಮಾಡಬೇಕಾಗುತ್ತದೆ. ಪ್ರಥಮದಲ್ಲಿ ನೆಟ್ಟ ಬಹಳಷ್ಟು ಹೊದರುಗಳು, ಮರಗಳು ಈಗ ಪೂರ್ತಿ ಬೆಳೆದು ನಿಂತಮೇಲೆ, ಕೆಲವು ಸರಿಯಾಗಿಲ್ಲವೆಂದು ಕಾಣಬಹುದಾದುದರಿಂದ, ಅವುಗಳನ್ನು ತೆಗೆಯಬೇಕು. ಮೊದಲಿನ ಒಂದೆರೆಡು ವರ್ಷ ಉಲ್ಲಾಸಭರಿತ, ಹೊಳೆಯುವ ಹೂಪಾತಿಗಳು ನಿಸ್ತೇಜಗೊಂಡು ಬಡಕಲು ಮತ್ತು ರೋಗಗ್ರಸ್ತ ಗಿಡಗಳನ್ನು ಉತ್ಪನ್ನ ಮಾಡುತ್ತವೆ. ಈಗ ಅದು ಒಂದು ತರಹ ಯಾತನೆಯ ಆಯ್ಕೆ. ಮರಗಳನ್ನಾಗಲಿ ಅಥವಾ ಹೂವಿನ ಪಾತಿಗಳನ್ನಾಗಲೀ ಇಡಬಹುದು. ಆದರೆ ಎರಡನ್ನೂ ಅಲ್ಲ. ಅದು ಯಾವುದಾಗಬೇಕು ?

ಇಂಥ ಸ್ಥಿತಿಯಲ್ಲಿ ಯಾರು ಮರಗಳಿಗೆ ಬದಲಾಗಿ ಹೂಪಾತಿಗಳನ್ನು ಆರಿಸಿಕೊಳ್ಳುತ್ತಾರೋ ಅಂಥವರ ಸಂಗದಿಂದ ಅಗಲಬೇಕಾಗುತ್ತದೆ. ದೊಡ್ಡ ಉದ್ಯಾನಗಳಲ್ಲಿ, ಮನೆಯ ಹತ್ತಿರವೇ ಒಂದು ಪ್ರತ್ಯೇಕ ಸ್ಥಳವನ್ನು ಪುಷ್ಪಗಳಿಗಾಗಿಯೆ ಮೀಸಲಿಟ್ಟಿದ್ದರೆ, ಅಂಥ ವೇಳೆಯಲ್ಲಿ ಒಂದು ಒಪ್ಪಂದ ಸಾಧ್ಯ. ಮರಗಳನ್ನೇ ನಾನು ಹೆಚ್ಚು ಇಷ್ಟಪಡುತ್ತೇನೆ. ಏಕೆಂದರೆ ಭಾರತದ ಪರಿಸರದಲ್ಲಿ ನೆರಳು ನೀಡುವ ಮರಗಳು ಉಪಯುಕ್ತ ಮತ್ತು ಅವಶ್ಯ ಕೂಡಾ.

ಉದ್ಯಾನದ ಬಗ್ಗೆ ಯೋಚಿಸುವಾಗ ಕಾಲದ ಈ ಎಲ್ಲಾ ದೃಷ್ಟಿಗಳನ್ನೂ ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಹತ್ತು ವರ್ಷಗಳಾದ ಮೇಲೆ ಉದ್ಯಾನ ಹೇಗೆ ಕಾಣುತ್ತದೆಂಬುದನ್ನು ಕರಾರುವಾಕ್ಕಾಗಿ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುವುದು ಅಸಾಧ್ಯ. ಪ್ರತಿಯೊಂದು ಹಂತದಲ್ಲಿಯೂ, ಸಂಧಾನಗಳಿಗೆ ಮತ್ತು ಬದಲಾವಣೆಗಳಿಗೆ ತಯಾರಾಗಿರಬೇಕು. ಪ್ರಾಮುಖ್ಯತೆಗಳಿಗನುಸಾರವಾಗಿ ಮರ ಅಥವಾ ವಾರ್ಷಿಕಗಳು, ಮನೆಯಲ್ಲಿ ತರಕಾರಿ ಅಥವಾ ಭೂ ದೃಶ್ಯವೆ ಎಂಬುದರ ಬಗ್ಗೆ ಇಚ್ಛೆಯನ್ನು ಪ್ರಕಟಿಸಿದ ಮೇಲೆ, ಸತತವಾಗಿ ಹೊಸ ತೀರ್ಮಾನಗಳನ್ನು ಮಾಡಲು ತಯಾರಾಗಿರಬೇಕು. ಉದ್ಯಾನವು ಎಂದಿಗೂ ಮುಗಿಯದು.

'ಕಾಲ' ಎಂಬ ಪದವನ್ನು ಇನ್ನೊಂದು ರೀತಿಯಲ್ಲಿ ಪ್ರಯೋಗಿಸಿದರೆ, ಯಶಸ್ಸಿಯ ಬಹಳ ದೊಡ್ಡ ಗುರುತು, ಉದ್ಯಾನ ಅನಂತ ಅಥವಾ ಅಕಾಲಿಕ ನೋಟವನ್ನು ಪಡೆದಾಗ. ಆದಿಯಿಂದಲೂ ಅದು ಅಸ್ತಿತ್ವದಲ್ಲಿತ್ತು ಮತ್ತು ಅಂತ್ಯದವರೆಗೂ ಅಸ್ತಿತ್ವದಲ್ಲಿರುತ್ತದೆ ಎಂಬ ನೋಟವನ್ನು ಬೀರಿದರೆ, ಆಗ ಅದರ ಮೇಲೆ ಮಾಡಿದ ಕೆಲಸ ಮತ್ತು ಪುಷ್ಕಳ ಗಮನನೀಡಿಗ್ದು ಸಾರ್ಥಕವಾದಂತೆ. 'ಶಾಶ್ವತತೆಯ ನೋಟ' - ಇಲ್ಲಿ ಊಹಿಸಬಹುದಾದ ಒಂದೇ ಒಂದು ಬದಲಾವಣೆಯೆಂದರೆ, ಋತುಮಾನಕ್ಕನುಸಾರವಾಗಿ ಎಲೆಗಳ ಮತ್ತು ಬಣ್ಣಗಳಲ್ಲಾಗುವ ವ್ಯತ್ಯಾಸ ಮಾತ್ರವೇ ಹೊರತು, ಸ್ಥಾಪಿಸಲ್ಪಟ್ಟ ಜೀವಂತ ವಸ್ತುಗಳ ಸ್ಥಾನಪಲ್ಲಟವಲ್ಲ. ಗಮನಿಸುವಾತನು ಎಲ್ಲಿಯವರೆಗೆ ಕಲ್ಪನೆಗಳಿಂದ ಪ್ರೇರಿಸಲ್ಪಟ್ಟು, ವಿವಿಧ ಸ್ಥಳಗಳಲ್ಲಿ ಅಂಶಗಳ ಯೋಗ್ಯತೆ

ಪರೀಕ್ಷಿಸುತ್ತಿರುತ್ತಾನೋ ಅಲ್ಲಿಯವರೆಗೆ ಉದ್ಯಾನವು ಅಶಾಂತತೆಯ ಮತ್ತು ತಾತ್ಕಾಲಿಕತೆಯ ನೋಟವನ್ನು ಬೀರುತ್ತಿರುತ್ತದೆ. ಸಂಪೂರ್ಣವಾಗಿ ಬೆಳೆದಿರುವ ಮರಗಳು, ಶಾಶ್ವತೆಯ ನೋಟವನ್ನು ಬೀರುತ್ತವೆಂಬುದು ನಿಜ. ಆದರೆ ನಿರೂಪಣೆ ಮತ್ತು ಪರಸ್ಪರ ಬಾಂಧವ್ಯಗಳಲ್ಲಿ ನ್ಯೂನತೆಗಳಿದ್ದರೆ ಶಾಶ್ವತೆಯ ನೋಟವು ಬರುವುದಿಲ್ಲ.

ಬೆಳಕು, ಉದ್ಯಾನದಲ್ಲಿ ಅಸಾಧ್ಯವಾದ ಮುಖ್ಯ ಅಂಶ. ಇದೇನೂ ಅತಿಶಯೋಕ್ತಿಯಲ್ಲ. ಏಕೆಂದರೆ ನಾವು ತಿಳಿದಿರುವ ಪ್ರಪಂಚ, ಬೆಳಕಿನ ವಿನಹ ಇರಲಾರದು. ದಿನದ ವಿವಿಧ ಕಾಲಗಳಲ್ಲಿ, ಉದ್ಯಾನ ಗುರುತಿಸಲಾಗದಷ್ಟು ಭಿನ್ನವಾಗಿರುತ್ತದೆ. ಪ್ರಾತಃಕಾಲದ ಮತ್ತು ಹೊತ್ತು ಮೀರಿದ ಸಾಯಂಕಾಲದ ಬೆಳಕು ಪೂರ್ಣ ಭೂದೃಶ್ಯಕ್ಕೆ ಬಹಳ ಹಿತಕರವಾದದ್ದು. ಆದರೆ ಸ್ವಲ್ಪ ಪ್ರಯತ್ನದಿಂದ, ಮಧ್ಯಾಹ್ನದ ಸೂರ್ಯನ ಕಠಿಣ ಬೆಳಕನ್ನು, ಒಳ್ಳೆಯ ಉಪಯೋಗಕ್ಕೆ ತಿರುಗಿಸಬಹುದು. ಬಿಸಿಲು ಇಚ್ಛಿಸುವ ಕಡೆ ಒಂದು ಕೊಳವನ್ನು ನಿರ್ಮಿಸುವುದು, ಬಹಳ ದೂರದಿಂದಲೆ ಆಕರ್ಷಕವಾಗಿ ಕಾಣುವ ಹೊಳೆಯುವ ಎಲೆಗಳ ಮೇಲೆ ಬಿಸಿಲು ಬೀಳುವಂತೆ ಇರಿಸುವುದು - ಇಂಥವುಗಳನ್ನು ಕಲ್ಪಿಸಬಹುದು. ಆದರೆ ಉದ್ಯಾನವನ್ನು ಆನಂದಿಸಲು ಬಹಳ ಉತ್ಕೃಷ್ಟಕಾಲವೆಂದರೆ ಮುಂಜಾನೆ ಮತ್ತು ಸಾಯಂಕಾಲ. ಪ್ರಾತಃಕಾಲ ಅರಳುವ ಪುಷ್ಪಗಳಾದ ಮಾರ್ನಿಂಗ್ ಗ್ಲೋರಿ (ಬೆಳಗಿನ ವೈಭವ) ಮತ್ತು ತಾವರೆಗಳು ಮತ್ತು ಸಾಯಂಕಾಲದ ಪುಷ್ಪಗಳಾದ ಮೂನ್‌ಫ್ಲವರ್ (ಚಂದ್ರನ ಹೂವು) ಮತ್ತು ನೈಟ್‌ಕ್ವೀನ್ (ರಾತ್ರಿಯ ರಾಣಿ) ಗಳಿಗೆ ಎಲ್ಲಾ ಉದ್ಯಾನಗಳಲ್ಲೂ ಒಂದು ವಿಶಿಷ್ಟ ಸ್ಥಳವಿದೆ. ಏಕೆಂದರೆ ಅಂತಹ ಸಮಯಗಳಲ್ಲಿ ಅವು ಸುಖಾನುಭವವನ್ನು ಹೆಚ್ಚಿಸುತ್ತವೆ.

ಆಯ್ಕೆಮಾಡುವಾಗ ಒಂದು ಮರ ಬೀರುವ ನೆರಳಿನ ದರ್ಜೆ ಒಂದು ಮುಖ್ಯ ಅಂಶ. ಸಣ್ಣ ಎಲೆಗಳನ್ನು ಹೊಂದಿರುವ ಮರಗಳು ಲಘು ಛಾಯೆಯನ್ನು ಬೀರುತ್ತವೆ. ಆದರೆ ಎಲೆಗಳು ಎಲ್ಲಿ ಒತ್ತಾಗಿರುತ್ತದೋ, ಪೆಲ್ಟೋ ಫೋರಮ್‌ನಲ್ಲಿರುವಂತೆ, ಮಧ್ಯಾಹ್ನ ಕೂಡ ಕುಳಿತುಕೊಳ್ಳುವುದಕ್ಕೆ ಯೋಗ್ಯವಾದಷ್ಟು ಗಾಢಛಾಯೆಯನ್ನು ಬೀರುತ್ತದೆ. ಅಂಥದಕ್ಕೆ ಗುಲ್‌ಮೊಹರ್ ಬೀರುವ ಛಾಯೆ ಸಾಕಷ್ಟಿಲ್ಲ; ಆದರೆ ಹುಲ್ಲುಹಾಸಿನ ಮೇಲೆ ಏಕೈಕ ಗುಲ್‌ಮೊಹರ್ ಇದ್ದರೆ, ಬಹಳ ಅಂದವಾದ ಬೆಳಕು ಮತ್ತು ಛಾಯೆಯ ಆದರ್ಶ ಮಾದರಿಯನ್ನು ಹುಲ್ಲಿನ ಮೇಲೆ ಎರಚುತ್ತದೆ. ಇದಕ್ಕಿಂತಲೂ ಕೌತುಕವೆಂದರೆ, ಬೆಳದಿಂಗಳಲ್ಲಿ ಇದು ಚೆಲ್ಲುವ ಹರಿತವಾದ ಮತ್ತು ಕೋಮಲವಾದ ಮಾದರಿಗಳು. ಉದ್ಯಾನದಲ್ಲಿ ವಿವಿಧ ತರಹೆಯ ಛಾಯೆಯ ರೂಪಾಂತರಗಳಲ್ಲಿ ಸಾಮ್ಯವಿರಬೇಕು. ಇದು ನೆಲದ ಮೇಲಲ್ಲದೆ ಮರಗಳು ಮತ್ತು ಎಲೆಗಳಲ್ಲಿಯೂ ಕೂಡ ಇರಬೇಕು. ಮರಗಳನ್ನು ಆಯ್ಕೆ ಮಾಡುವಾಗ, ಬೆಳಕನ್ನು ಪ್ರತಿಬಿಂಬಿಸುವ ಎಲೆಗಳ ಗುಣ ಒಂದು ವಿಶಿಷ್ಟ ಅಂಶವೆಂದು ನಾನು ಒತ್ತಿ ಹೇಳಿದ್ದೇನೆ. ಇಂತಹ ಗುಣ, ಮರದಲ್ಲಿನ ಪುಷ್ಪಗಳು ಒಣಗಿದ ಮೇಲೂ ಮತ್ತು ಅದರ ಹಣ್ಣುಗಳನ್ನು ತಿಂದಾದ ಮೇಲೂ, ನಿರಂತರ ಆನಂದವನ್ನು ಕೊಡುತ್ತಲಿರುತ್ತದೆ.

## ನೆರಳು

ಭಾರತದ ಅನೇಕ ಭಾಗಗಳಲ್ಲಿ ಮರಗಳ ನೆರಳು ಮತ್ತು ತಂಪುತನದ ಮುಖ್ಯತೆ, ಬಣ್ಣಕ್ಕಿಂತಲೂ ಹೆಚ್ಚು ಪ್ರಧಾನವಾಗಿರುವುದು. ಉದ್ಯಾನವನ್ನು ರಚಿಸುವಾಗ, ವಿಶ್ರಾಂತಿ, ನೆಮ್ಮದಿ, ನಿಶ್ಯಬ್ದತೆಯ ವಾತಾವರಣವನ್ನು ಸೃಜಿಸುವುದೆ ಗುರಿಯಾಗಿದ್ದಲ್ಲಿ, ದೊಡ್ಡ ಮರಗಳನ್ನು ತ್ಯಜಿಸುವಂತಿಲ್ಲ. ಆಗ ಉಳಿದಿರುವ ಏಕೈಕ ಪ್ರಶ್ನೆಯೆಂದರೆ, ಮರವನ್ನು ಸಂಪೂರ್ಣವಾಗಿ ಉಪಯೋಗಿಸುವುದು ಹೇಗೆ ? ಒಂದು ಒಳ್ಳೆಯ ಮರ ಹೊರಸೂಸುವ ಗಂಭೀರ ತೃಪ್ತಿಯ ಪ್ರತಿಯೊಂದು ಔನ್ಸನ್ನು ಸಂಸ್ಕರಿಸುವುದು ಹೇಗೆ ? ಎಂಬುದು. ಇಂಥದಕ್ಕೆ ಮರಗಳು ಹರಡುವ ಟೊಂಗೆಗಳು ಮತ್ತು ಗಾಢ ಎಲೆಯ ಗುಂಪುಲುಗಳನ್ನು ಹೊಂದಿರಬೇಕು. ಅದು ಯಾವುದಾದರೂ ಋತುವಿನಲ್ಲಿ ಎಲೆಗಳನ್ನೆಲ್ಲಾ ಉದುರಿಸಿದರೆ, ಉದುರುವಿಕೆ ಮತ್ತು ಪುನಹ ಹೊದಿಸುವಿಕೆ ಸುವ್ಯವಸ್ಥಿತ ರೀತಿಯಲ್ಲಿ ನಡೆಯಬೇಕು. ಉದಾಹರಣೆಗೆ ಪೆಲ್ಟೋಫೋರಮ್‌ನಲ್ಲಿ 2–3 ವಾರಗಳಲ್ಲಿ ಈ ಬದಲಾವಣೆಯಾಗುತ್ತದೆ.

ಮನೆಯ ವಿವಿಧ ಬಾಗಿಲು ಮತ್ತು ಕಿಟಕಿಗಳು ಕೂಡ, ಮರಗಳ ನೆರಳಿನಿಂದ ಆವೃತ್ತಗೊಳ್ಳಬೇಕಾಗಿದೆ. ಮರಗಳನ್ನು ಜಾಗರೂಕತೆಯಿಂದ ನೆಟ್ಟರೆ, ಪರದೆಗಳ ಮತ್ತು ದೃಷ್ಟಿತಡೆಗಳ ಅವಶ್ಯಕತೆ ಇರುವುದಿಲ್ಲ. ರಸ್ತೆ ಅಥವಾ ಪ್ರಸ್ತಾವ ಯಾವಾಗಲೂ ಗಾಢ ನೆರಳನ್ನು ಬಯಸುವುದಿಲ್ಲ. ಆದರೆ ಯಾರಾದರೂ ಮನೆಯ ಕಡೆಗೆ ಹಾದು ಹೋಗುತ್ತಿದ್ದರೆ, ಅಂತಹವರಿಗೆ ಸ್ವಲ್ಪವಾದರೂ ರಕ್ಷಣೆ ಉಪಯೋಗಕರ. ಉದ್ಯಾನದ ಉಳಿದ ಭಾಗವೆಲ್ಲಾ ನೆರಳು ಮತ್ತು ಬಿಸಿಲಿನ ಚೂರುಪಾರುಗಳಿಂದ ಆವೃತಗೊಳ್ಳುವಂತೆ ಕಲ್ಪಿಸಿಕೊಳ್ಳಬೇಕು. ಲಘು ಎಲೆಗುಂಪಲು ಮರ ಅತ್ಯಂತ ಉತ್ಕೃಷ್ಟವಾದ ಛಾಯೆಯ ರೂಪವನ್ನು ನೆಲದ ಮೇಲೆ ಬೀರುತ್ತದೆ. ಹಲವು ವೇಳೆ ಗಾಢ ಚಂದ್ರನ ಬಿಂಬಗಳು ಭೇದಿಸಿಕೊಂಡು ಹೋಗುವುದುಂಟು. ಎಲೆಗಳಿಲ್ಲದೆ ಬರಡಾಗಿರುವಾಗ, ಕೊಂಬೆಗಳ ಸೊಬಗಿನ ರೇಖೆಗಳು ವಿನ್ಯಾಸವನ್ನು ನಿರ್ಧರಿಸುತ್ತ, ಕಾಂಡದ ಅಡಿಯ ಸುತ್ತಲೂ ತೊಡಕಿನ ಅರೆಕಾಲು ಮಾದರಿಗಳನ್ನು ಬೀರುತ್ತವೆ. ಬರಡು ಭೂಮಿಯ ಮೇಲೆ ಬೀಳುವ ಮರದ ನೆರಳು ತಣ್ಣಗೂ ಮತ್ತು ಹಿತವಾಗಿಯೂ ಇರುವುದಲ್ಲದೆ ಮತ್ತೇನೂ ಇಲ್ಲ. ಅದೇ ನೆರಳು ನಯವಾದ ಹುಲ್ಲಿನ ಮೇಲೆ ಬಿದ್ದರೆ ಪ್ರಾಧಾನ್ಯವಾಗುವುದಲ್ಲದೆ, ಪೂರ್ಣ ಆಹ್ಲಾದಕರ ಯೋಜನೆಯಲ್ಲಿ ಒಂದು ನಿರ್ದಿಷ್ಟ ಅಂಶವಾಗುತ್ತದೆ. ಎಲ್ಲಾ ಕುತೂಹಲಕಾರಿ ರಚನೆಗಳಾದ ಮರಳು ಮತ್ತು ಗರಸು ನೆರಳಿನ ಮಾದರಿಗಳಿಗೆ ಪ್ರತಿಕ್ರಿಯೆ ತೋರಿಸುತ್ತವೆ. ಪ್ರಾಯಶಃ ಹುಲ್ಲು ಅತ್ಯಂತ ಪ್ರತಿಕ್ರಿಯೆ ತೋರಿಸುತ್ತದೆ.

ಅಲ್ಪ ಕೊಂಬೆಗಳನ್ನುಳ್ಳ ಎತ್ತರವಾದ ಮರಗಳನ್ನು – ಉದಾಹರಣೆಗೆ ನೀಲಗಿರಿಮರ ಅಥವಾ ಪುತ್ರಜೀವಿ ಮರಗಳಂತಹವುಗಳನ್ನು ರಸ್ತೆಯುದ್ದಕ್ಕೂ ನೆಟ್ಟಾಗ ಓರೆಯಾದ ಅಥವಾ ಬಾಗಿದ ನೆರಳಿನ ಪಟ್ಟಿಗಳನ್ನು ಅಡ್ಡವಾಗಿ ಬೀರುತ್ತವೆ. ಕಟ್ಟಡದವರೆಗಿನ ಮಂಕಾದ ಹಾದಿಯನ್ನು ಪುಷ್ಟಿಗೊಳಿಸುತ್ತವೆ. ಚಲಿಸುವ ನೆರಳಿನ

ಭಿನ್ನ ಸಾಂದ್ರತೆಯನ್ನು ನಿರೀಕ್ಷಿಸುವುದು, ನೆರಳಿನ ರಚನೆ ಹುಲ್ಲುಹಾಸಿನ ಅಥವಾ ಗರಸಿನ ಮೇಲೆ ಬಿದ್ದಾಗ, ಕಾಣಬರುವ ನೋಟ ಸೌಂದರ್ಯಾತ್ಮಕ ಆನಂದವನ್ನು ನೀಡುವಂತಹದ್ದು. ಇನ್ನೊಂದೆಡೆ, ದೊಡ್ಡ ಮರದ ನೆರಳು, ಅನೇಕ ಸಂದರ್ಭಗಳಲ್ಲಿ ಸ್ವಾಗತಾರ್ಹವಾದರೂ, ಕೆಲವು ವೇಳೆ, ಅದರಲ್ಲೂ ವಿಶಿಷ್ಟವಾಗಿ ಬಹಳ ಸಮೀಪದಲ್ಲಿಯೆ ಬೆಳೆಯುತ್ತಿರುವ ಸಣ್ಣಗಿಡಗಳ ಬೆಳವಣಿಗೆಯನ್ನು ಕುಂಠಿತಗೊಳಿಸಿ, ತಲೆ ಎತ್ತದಂತೆ ಮಾಡುತ್ತದೆ. ಇಂತಹ ಕಡೆ, ಬಹಳ ಕೆಳಗಿನ ಕೊಂಬೆಗಳನ್ನು ತೆಗೆಯುವದೊಂದೇ ದಾರಿ. ಆಗ ಓರೆಯಾಗಿ ಬೀಳುವ ಬೆಳಕು ಸೋಕಿಕೊಂಡು ಅಡಿಯನ್ನು ಮುಟ್ಟುತ್ತದೆ. ಆದರೆ ನೆರಳು ಬಯಸುವ ಅನೇಕ ಗಿಡಗಳೆಂದರೆ ಬೆಗೋನಿಯ, ಫರ್ನುಗಳು, ಕೆಲೇಡಿಯಂ. ಇವುಗಳು ಅಲ್ಪ ಪ್ರಯತ್ನದಿಂದ ಮರಗಳ ಕೆಳಗೆ ಬೆಳೆಯಬಲ್ಲವು.

## ರಚನೆ

ಅಂತಿಮ ವಿಶ್ಲೇಷಣೆಯಲ್ಲಿ ಉದ್ಯಾನ ಅನೇಕ ಬಂಧಗಳ ಸಂಯೋಜನೆ. ಇದರಲ್ಲಿ ಜೀವಿತ ಮತ್ತು ಜಡವಸ್ತುಗಳಿರುತ್ತವೆ. ಭೂದೃಶ್ಯ ಶಿಲ್ಪಿಯ ಅಂತಿಮ ಜಾಣ್ಮೆಯ ವಿಮರ್ಶೆ, ಆತನು ಈ ವಿವಿಧ ಬಂಧಗಳ ಸಾಮರಸ್ಯ ಮತ್ತು ವೈಲಕ್ಷಣ್ಯಗಳನ್ನು, ಅಪೇಕ್ಷಿಸಿದ ಪರಿಣಾಮವನ್ನು ಹೊಂದಲು ಹೇಗೆ ಉಪಯೋಗಿಸಿದ್ದಾನೆ ಎಂಬುದರ ಮೇಲೆ ಅವಲಂಬಿಸಿದೆ. ಉದ್ಯಾನದ ಬಂಧಗಳನ್ನು ಸುಲಭವಾಗಿ ವಿಮರ್ಶಿಸಲು, ಅವುಗಳನ್ನು ಮೂರು ಹಂತಗಳಲ್ಲಿ ವಿಭಜಿಸಬಹುದು. ಇವು, ನೆಲಮಟ್ಟ, ಕಣ್ಣುಮಟ್ಟ ಮತ್ತು ನೆತ್ತಿಯ ಮೇಲ್ಮಟ್ಟ.

ಒಂದು. ಉದ್ಯಾನವನ್ನು ನೆಲಹೊದಿಕೆಯ ರಚನೆಯಿಂದ ತೃಪ್ತಿಯಾಗಿ ಮಾಡಬಹುದು ಅಥವಾ ಹಾಳು ಮಾಡಬಹುದು. ಹೂಪಾತಿಗಳು ಇದುವರೆಗೂ ನೆಲಮಟ್ಟದಲ್ಲಿ ಇವೆಯೆಂದು ಭಾವಿಸಿಕೊಂಡಲ್ಲಿ (ಅನೇಕ ಹೂಪಾತಿಗಳು ಎತ್ತರವಾದ ಗಿಡಗಳನ್ನು ಹೊಂದಿರುವುದರಿಂದ, ಅವುಗಳು ಕಣ್ಣುಮಟ್ಟದ ವಿಭಾಗದಲ್ಲಿ ಬರುತ್ತವೆ), ಇವು ಉದ್ಯಾನದ ಸರ್ವಶಕ್ತಿಯೆಂದು ಸಾಮಾನ್ಯವಾಗಿ ಪರಿಗಣಿಸಲಾಗಿದೆ. ಉಳಿದೆಲ್ಲಾ ಭೂಮಿ ಅಂದರೆ ಅದು ಸಿಮೆಂಟ್ ಅಥವಾ ಡಾಂಬರ ಅಥವಾ ಹುಲ್ಲು ಅಥವಾ ನಗ್ನ ಭೂಮಿಯೇ ಆಗಿರಲಿ, ಅವು ಅಷ್ಟು ಮುಖ್ಯವಲ್ಲ.

ರಚನೆಯಲ್ಲಿ ನೆಲದ ಮೇಲಿನ ಸ್ವರೂಪ ಬಹಳ ಮುಖ್ಯ. ನೆಲದ ರಚನೆಯಲ್ಲಿ ಅಲ್ಪ ಬದಲಾವಣೆಗಳನ್ನು ಮಾಡುವುದರಿಂದ, ಅದು ಎಷ್ಟೊಂದು ಉತ್ತಮಗೊಳ್ಳುತ್ತದೆ ಎಂಬುದು ಆಶ್ಚರ್ಯಕರ. ಮುಂಬೈ ಬಳಿಯಿರುವ ಪೊವಾಯ್ ಪಾರ್ಕನ್ನು ನಾನು ಒಂದು ಸಲ ಭೂದೃಶ್ಯಗೊಳಿಸಿದಾಗ, ಅದರಲ್ಲಿ ದೊಡ್ಡ ಮರಗಳಿಂದ ಕೂಡಿದ ವಿಶಾಲವಾದ ಮತ್ತು ಮಟ್ಟವಾದ ಸ್ಥಳವಿತ್ತು. ಎಲ್ಲಾ ಕಾಯಿದೆಗಳ ಪ್ರಕಾರ, ಅದು ನೆರಳು, ತಂಪು ಮತ್ತು ಶಾಂತಿಯನ್ನು ಬೀರುವ ರಮ್ಯ ಅರಣ್ಯ ಸ್ಥಳವಾಗಿರಬೇಕಾಗಿತ್ತು. ಆದರೆ ಅದು ಹೇಗೋ ಅಹಿತ ಮತ್ತು ಬೇಸರದ ನೋಟವನ್ನು ಬೀರುತ್ತಿತ್ತು. ಆ ಸಮಸ್ಯೆಯ ಬಗ್ಗೆ ಯೋಚಿಸಲು ನನಗೆ ಸ್ವಲ್ಪ ಕಾಲ

ಹಿಡಿಯಿತು. ಮರಗಳ ಕೆಳಗಿನ ನಗ್ನ ಭೂಮಿ, ಸಾವಿರಾರು ವನವಿಹಾರಿಗಳಿಂದ ಪ್ರತಿಯೊಂದು ವಾರವೂ ತುಳಿಯಲ್ಪಟ್ಟು, ಅಸ್ವಾಭಾವಿಕವಾಗಿಯೆ ಗಟ್ಟಿ, ನಯ ಮತ್ತು ಅಂಟಾಗಿತ್ತು. ನಾವು ಮನೆ ಕಟ್ಟುವುದಕ್ಕೆ ಉಪಯೋಗಿಸುವ ಮರಳನ್ನು ಅಲ್ಪ ಪ್ರಮಾಣದಲ್ಲಿ ಮೇಲೆ ಚೆಲ್ಲಿದೆವು. ಇದು ನಂಬಲಾರದಷ್ಟು ಬದಲಾವಣೆ ತಂದಿತು. ಇದು ಜಮೀನಿನ ಮೇಲ್ಮೈಗೆ ತರಕಲು ಗುಣವನ್ನು ನೀಡಿದ್ದರಿಂದ ನಿವೇಶನದ ಸಂಪೂರ್ಣ ರೂಪವನ್ನೇ ಬದಲಾಯಿಸಿತು.

ನದಿಯ ಪಾತ್ರದಿಂದ ಆರಿಸಿದ ಸಣ್ಣ ನಯವಾದಕಲ್ಲುಗಳು ಉನ್ನತವಾದ ನೆಲ ಹೊದಿಕೆಯಾಗುತ್ತವೆ. ಎಲ್ಲಾ ಕಲ್ಪನೆಗಳು ವಿಫಲವಾದಾಗ ಅವುಗಳನ್ನು ಉಪಯೋಗಿಸಬಹುದು. ಅವುಗಳ ನೋಟ ಎಂದಿಗೂ ಕುಂದಾಗುವುದಿಲ್ಲವೆಂಬುದನ್ನು ನಂಬಬಹುದು. ಆದರೆ ಅವುಗಳನ್ನು ಅಳತೆಗನುಸಾರವಾಗಿ ಆರಿಸಿಕೊಳ್ಳಬೇಕು ಮತ್ತು ಅವುಗಳನ್ನು ಜೋಡಿಸುವಾಗ ಎಲ್ಲಾ ತರಹದ ಸಣ್ಣ ಕಲ್ಲುಗಳನ್ನು ಹಾಸುವುದಕ್ಕೆ ಒಂದು ಸಂದರ್ಭವೆಂದು ತಿಳಿಯಬಾರದು. ಹಾದಿಗಳ ಮೇಲೂ ಅವು ಅತ್ಯಂತ ಸೊಗಸಾಗಿ ಕಾಣುತ್ತವೆ. ಆದರೆ ಜೋರು ಮಳೆಯಲ್ಲಿ ಇಂತಹ ದುಬಾರಿ ಚಿಕ್ಕ ಕಲ್ಲುಗಳು ಮಣ್ಣಿನಲ್ಲಿ ಹುದುಗಿ ಮರೆಯಾಗುವುದುಂಟು.

ಯಾವುದೇ ನೆಲಹೊದಿಕೆಯು ನಿಜವಾದ ಅಂದವನ್ನು ಹೊರತರಲು ಅದನ್ನು ಇನ್ನೊಂದು ವ್ಯತಿರಿಕ್ತವಾದ ರಚನೆಯ ಮೇಲೆ ಇಡಬೇಕು. ಅಂಥ ಬಂಧ ಅಥವಾ ರಚನೆ ನೈಜಿಕವಾಗಿರಬಹುದು ಅಥವಾ ಕೃತಕವಾಗಿರಬಹುದು. ಉದಾಹರಣೆಗೆ ಗರಸು ಮಣ್ಣಿನ ಕ್ಷೇತ್ರ ಹುಲ್ಲಿನ ಪಕ್ಕದಲ್ಲಿ, ಹರಳು ಕಲ್ಲುಗಳು ಒಂದು ಹಳೆ ಮರದ ತೊಗಟೆ ಮತ್ತು ಬೇರುಗಳ ಪಕ್ಕದಲ್ಲಿ, ಒರಟಾದ ಅಥವಾ ನಯವಾದ ಶಹಬಾದ್ ಹಾಸು ಕಲ್ಲುಗಳನ್ನು ನೆಲದಲ್ಲಿ ಒಳಜೋಡಿಸುವುದು ಇತ್ಯಾದಿ. ಎರಡು ತರಹ ಬಂಧಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ಇಡುವುದರಿಂದ, ಅವುಗಳೆರೆಡರ ಚೆಂದವೂ ಹೊರಬರುತ್ತದೆ.

ಉದ್ಯಾನದ ನೆಲಮಟ್ಟ ಅಥವಾ ನೆಲಗಟ್ಟು, ವಿವಿಧ ಬಂಧಗಳ ಚಿತ್ರ ಕೆಲಸವೆಂದು ಪರಿಗಣಿಸಬೇಕು. ಬಂಧಗಳಿಂದ ಮಾಡಿದ ಮಾದರಿ ಎಷ್ಟು ಯಶಸ್ವಿಯಾಗಿದೆ ಎಂಬುದರ ಮೇಲೆ, ಉದ್ಯಾನದ ಅಂದ ಅವಲಂಬಿಸಿದೆ ಮತ್ತು ಅವುಗಳು ಎಷ್ಟರಮಟ್ಟಿಗೆ ಲೀನಗೊಂಡು, ಒಂದಕ್ಕೊಂದು ಸಾಮರಸ್ಯವನ್ನು ಸಾಧಿಸಿದೆ ಎಂಬುದು ಮುಖ್ಯ. ಆದರೆ ನೆಲಹೊದಿಕೆಯ ಬಗ್ಗೆ ಎಷ್ಟೇ ತೊಂದರೆ ತೆಗೆದುಕೊಂಡಿದ್ದರೂ, ಅದು ರಂಗಸ್ಥಳದಲ್ಲಿ ಪ್ರಧಾನವಾಗಿರಬಾರದು ಅಥವಾ ಮರಗಳ ಮತ್ತು ಗಿಡಗಳ ಅಂದವನ್ನು ಅಪಹರಿಸಬಾರದು. ಏಕೆಂದರೆ ಗಿಡಮರಗಳು ಉದ್ಯಾನದ ನ್ಯಾಯವಾದ ಪ್ರಮುಖ ಪಾತ್ರಧಾರಿಗಳು. ನೆಲಮಟ್ಟ ಬಂಧಗಳ ಕೆಲಸವೆಂದರೆ ಹಿನ್ನಲೆಯನ್ನು ಒದಗಿಸುವುದು ಮತ್ತು ಅನ್ಯಥಾ ಕಾಣದಂಥ ವಾತಾವರಣವನ್ನು ಕಲ್ಪಿಸುವುದು.

ಉದ್ಯಾನದ ನೆಲದ ರಚನೆಯನ್ನು ಕುತೂಹಲಕಾರಿಯಾಗಿ ಮಾಡುವುದಕ್ಕೆ ಇತರೆ

ವಿವಿಧ ಮೇಲ್ಮೈಗಳ ಬಗ್ಗೆ ಯೋಚಿಸುವುದನ್ನು ವಾಚಕರ ಊಹೆಗೆ ಬಿಡಲಾಗಿದೆ. ಸ್ವಾಭಾವಿಕವಾಗಿ, ಸಾಧಾರಣ ಮತ್ತು ಪ್ರಯೋಗಿಸಿದ ಮೇಲ್ಮೈಗಳನ್ನು ಚಾತುರ್ಯದಿಂದ ಮತ್ತು ಕಲ್ಪನಾಶಕ್ತಿಯಿಂದ ಉಪಯೋಗಿಸುವುದು ಸುಲಭದಾಯಕ. ಆದರೆ ಚಿಕ್ಕಮೂಲೆಗಳಲ್ಲಿ ಪರೀಕ್ಷಿಸಿದ ಪ್ರಯೋಗಗಳು ಯಶಸ್ವಿ ಫಲ ಕೊಡಬಹುದು. ಆಮೇಲೆ ಅದನ್ನು ವಿಸ್ತರಿಸಬಹುದು.

ವಿವಿಧ ಬಗೆಯು ನೆಲದ ಮೇಲೆ ತೆರಳುವ ಸಣ್ಣ ಬಣ್ಣದ ಎಲೆಗಳು ವೈಭವಯುಕ್ತ, ಕೋಮಲವಾದ ಮೆತ್ತನೆಯ ಹೊದಿಕೆಯನ್ನು ಮಾಡುತ್ತವೆ. ಬೇರೆ ಬೇರೆ ಬಗೆಯ ಕಲ್ಲುಗಳು ಮತ್ತು ಇಟ್ಟಿಗೆ, ಮರದ ತೊಗಟೆ, ಈ ಆಟಕ್ಕೆ ಇವೆಲ್ಲಾ ಕಚ್ಚಾ ವಸ್ತುಗಳು. ಪ್ರತಿಯೊಂದು ಸ್ವಾಭಾವಿಕ ಹೊರರೂಪ, ತೊಗಟೆ, ಕಲ್ಲು, ಹುಲ್ಲು – ಇವುಗಳು ತಮ್ಮಷ್ಟಕ್ಕೆ ತಾವೆ ಸುಂದರವಾಗಿರುವುದು ಮತ್ತು ಇತರೆ ನೈಜಿಕ ಬಂಧಗಳೊಡನೆ ಚೆನ್ನಾಗಿ ಐಕ್ಯವಾಗುವುವು. ಆದರೆ ಕೃತಕ ಬಂಧಗಳಾದ ಕಾಂಕ್ರೀಟು, ಸಿಮೆಂಟುಗಳನ್ನು ಉಪಯೋಗಿಸುವಾಗ ಅತ್ಯಂತ ಜಾಗರೂಕರಾಗಿರಬೇಕಲ್ಲದೆ, ಅವುಗಳ ರಚನೆ ತಮ್ಮಷ್ಟಕ್ಕೆ ಅಂದವಾಗಿರುವಾಗ, ಇತರೆ ವಸ್ತುಗಳೊಡನೆ ಹೊಂದಿಕೊಳ್ಳುವುದರ ಬಗ್ಗೆ ನಿಶ್ಚಿತವಾಗಿರಬೇಕು. ಇನ್ನೊಂದು ಅಪಾಯವೆಂದರೆ 'ಹೋಮ್ಸ್ ಅಂಡ್ ಗಾರ್ಡನ್ಸ್' ನ್ನು ಓದುವ ಉತ್ಸಾಹಿವಾಚಕರು ಕೆಲವು ವೇಳೆ ಅತಿಗೊಂದಲದ ರಚನೆಗಳಾದ ಉದ್ಯಾನ ಪೀಠೋಪಕರಣಗಳಿಗೆ ತೊಗಟೆಯನ್ನು ಮೊಳೆ ಹೊಡೆಯುವುದು, ಚಿಕ್ಕಕಲ್ಲು ಮತ್ತು ಥಳಥಳಿಸುವ ವಸ್ತುಗಳನ್ನು ಸಿಮೆಂಟು ಹಲಗೆಗಳಲ್ಲಿ ಹುದುಗಿಸುವುದು ಮತ್ತು ಇನ್ನಿತರ ಕೆಲಸಕ್ಕೆ ಬಾರದ ಕಾರ್ಯಗಳನ್ನು ಮಾಡುವುದರಿಂದ ತೊಂದರೆಗಳಿಗೆ ತುತ್ತಾಗುತ್ತಾರೆ. ನೋಡುವುದಕ್ಕೆ ಚಿತ್ರಹಿಂಸೆ ಪಡೆದ ಮತ್ತು ಕಲ್ಪಿತ ರಚನೆಗಳಿಗಿಂತ, ಸಾಧಾರಣ ಮತ್ತು ಸರಳವಾದ ಹೊರರೂಪಗಳಿಗೆ ಅಂಟಿಕೊಳ್ಳುವುದು ಉತ್ತಮ.

ಕಣ್ಣುಮಟ್ಟದ ಬಂಧಗಳ ಪರಿಣಾಮಗಳಿಗೆ, ನಾವು ಏಕೈಕ ಎಲೆ ಅಥವಾ ತೊಗಟೆ ತುಂಡಿನ ರಚನೆಯನ್ನು ಪರಿಗಣಿಸಬಾರದು. ಆದರೆ ಸಮಗ್ರ ಮರ ಅಥವಾ ಹೊದರಿನ ಒಟ್ಟುಗೂಡಿಸಿದ ರಚನೆಯನ್ನು ಗಣನೆಗೆ ತೆಗೆದುಕೊಳ್ಳಬೇಕು. ಅನೇಕ ದೊಡ್ಡ ಮರಗಳಲ್ಲಿ ಕಣ್ಣುಮಟ್ಟದ ರಚನೆಯೆಂದರೆ, ರೇಖೆಗಳು, ಗಾತ್ರ ಮತ್ತು ಕಾಂಡ ಕೊಂಬೆಗಳ ಟಿಸಿಲೊಡೆಯುವಿಕೆ ಜೊತೆಗೆ ತೊಗಟೆಯ ಬಣ್ಣ ಮತ್ತು ಸ್ಪರ್ಶತೆ. ಹೊದರುಗಳಲ್ಲಿ ಇದರ ಅರ್ಥ ಸಮಗ್ರ ಗಿಡದ ಸಾಂದ್ರತೆ ಮತ್ತು ಸ್ವರೂಪ.

ನೀವು ಎಂದಾದರೂ ಒತ್ತಾಗಿ ಮರಗಳಿಂದ ಆವೃತ್ತವಾದ ಒಂದು ಗ್ರಾಮೀಣ ಭಾಗವನ್ನು, ದೂರದಿಂದ ನೋಡಿದರೆ, ಹಸಿರಿನ ನೂರಾರು ಛಾಯೆಗಳು, ಒಂದರಮೇಲೊಂದು ಕೂಡಿಕೊಂಡಿರುವ ಅಭಿಪ್ರಾಯವನ್ನು ಹೊಂದುವಿರಿ. ಸಮೀಪದಿಂದ ನೋಡಿದ್ದಲ್ಲಿ ಅಷ್ಟೊಂದು ಹಸಿರಿನ ವಿಧಗಳು ಕಾಣುವುದಿಲ್ಲ. ವಾಸ್ತವಿಕವಾಗಿ ಎರಡು ತರಹ ಹಸಿರುಗಳು ಒಂದೇ ತರಹ ಕಾಣುವುದಿಲ್ಲ. ಏಕೆಂದರೆ ಪ್ರತಿಯೊಂದು ಮರವೂ ವಿವಿಧ ರಚನೆಗಳನ್ನು ಹೊಂದಿವೆ. ಅವುಗಳು ಬಿಡುವ ಹೂಗಳನ್ನು ಗಣನೆಗೆ ತೆಗೆದುಕೊಳ್ಳದೆ, ಅವುಗಳ ಸಮಗ್ರ ನೋಟವನ್ನು ಪರಿಗಣಿಸಿ

ಆದರಂತೆ ಅವುಗಳನ್ನು ನೆಡಬೇಕು. ಹಬ್ಬುವ ಮತ್ತು ಏರುವ ಲತೆಗಳು, ಗುಲ್ಮಗಳು, ವಾರ್ಷಿಕಗಳು – ಇವೆಲ್ಲದರ ಸಮಗ್ರ ರಚನೆಯ ನೋಟವನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ಗುಲಾಬಿಗಳನ್ನು ಯಶಸ್ವಿಯಾಗಿ ಉದ್ಯಾನದಲ್ಲಿ ಸೇರಿಸುವುದು ಬಹಳ ಕಷ್ಟ, ಏಕೆಂದರೆ ಗುಲಾಬಿ ಗುಲ್ಮದ ಸಮಗ್ರ ರಚನೆ ಅಷ್ಟು ತೃಪ್ತಿಕರವಲ್ಲ. ಉದ್ಯಾನದ ರಚನೆಯಲ್ಲಿ ಗುಲಾಬಿಗಳನ್ನು ಉಪಯೋಗಿಸುವ ಒಂದೇ ರೀತಿಯೆಂದರೆ, ಗುಲಾಬಿಗಾಗಿಯೇ ಒಂದು ಪ್ರತ್ಯೇಕ ಭಾಗವನ್ನು ಸೃಷ್ಟಿಸುವುದು. ಜಾಣ್ಮೆಯಿಂದ ಹಿನ್ನಲೆಯನ್ನು ಒದಗಿಸಿದರೆ, ಗುಲಾಬಿಯ ಅತೃಪ್ತಿಕರ ಲಕ್ಷಣಗಳನ್ನು ಮಿತಗೊಳಿಸಬಹುದು.

ಇತರೆ ಅನೇಕ ಗಿಡಗಳ ರಚನೆಯನ್ನು ಸುಮಾರಾಗಿ ತಿಳಿದುಕೊಂಡಿದ್ದರೆ ಸಾಕು. ಅವುಗಳನ್ನು ಒಂಟಿಯಾಗಿ ಇಟ್ಟಾಗ ಅಥವಾ ಬೇರೆ ಗಿಡಗಳ ಎದುರಿಗೆ ನೆಟ್ಟಾಗ, ಅವುಗಳು ಬೀರುವ ಪರಿಣಾಮವನ್ನು ಲೆಕ್ಕಿಸಿದರೆ ಸಾಕು. ಒಂದು ಪ್ರಬಲ ನಿರ್ದಿಷ್ಟ ಆಕಾರದ ಜೊತೆಗೆ, ಕಠಿಣ ರಚನೆಯನ್ನು ಹೊಂದಿರುವ ಕ್ಯಾಕ್ಟಸ್ ಅಥವಾ ಕತ್ತಾಳಿ ಅಂತಹುದು ಸುಲಭವಾಗಿ ಇತರೆ ಗಿಡಗಳೊಡನೆ ಲೀನವಾಗುವುದಿಲ್ಲ. ಆದರೆ ಇತರೆ ಗಿಡಗಳ ಹಿನ್ನಲೆಯಲ್ಲಿ ಅದು ಹೊರಬರುವಂತೆ ಮಾಡಬೇಕು. ಮಸುಕಾದ ಮತ್ತು ಅನಿರ್ದಿಷ್ಟ ಪರಿಣಾಮಗಳುಳ್ಳ, ಇತರ ಗಿಡಗಳು, ಸಮರ್ಥ ಎಲೆಗಳುಳ್ಳ ಮರಗಳೊಡನೆ ಸಂತೋಷವಾಗಿ ಐಕ್ಯ ಹೊಂದುತ್ತವೆ. ಕ್ಯಾಸರಿಕೆಯಂತಹ ಹಗುರ ಹಾಗೂ ಜಾಳು ಜಾಳಾದ ನೋಟವನ್ನು ಹೊಂದಿರುವ ಗಿಡಗಳು, ಹೂ ಬಿಟ್ಟ ಎರಿತ್ತಿನ ಅಥವಾ ಬೂರಗದ ಪಕ್ಕದಲ್ಲಿದ್ದಾಗ ನಿರ್ದಿಷ್ಟ ಪರಿಣಾಮವನ್ನು ಬೀರಿ ಸೊಗಸೆನ್ನಿಸುತ್ತವೆ. ಕ್ಯಾಸರಿಕೆ ಬೇಲಿಗಳು, ದಪ್ಪಕ್ಕೆ ಮತ್ತು ಎತ್ತರಕ್ಕೆ ಹುಷಾರಾಗಿ ಕತ್ತರಿಸಿ ಇಟ್ಟಿದ್ದರೆ ಉಜ್ವಲ ಬಣ್ಣಗಳಿಗೆ ಅತ್ಯುತ್ತಮ ಹಿನ್ನಲೆಯಾಗುತ್ತವೆ. ಕೇವಲ ಸಾಮಾನ್ಯವಾದ ಲಾಂಟಾನವನ್ನು ಒತ್ತಾಗಿ ಸಮರಿದ್ದರೆ, ಉಜ್ವಲ ಬಣ್ಣದ ಹೂಗಳೊಂದಿಗೆ ವೈಭವಯುಕ್ತ ರಚನೆಯನ್ನು ನೀಡುತ್ತವೆ.

ಕೆಲವು ತೊಗಟೆಗಳು ಅಂದವಾದ ರಚನೆಗಳನ್ನು ಹೊಂದಿವೆ. ಇದರಿಂದಾಗಿ ಅವುಗಳನ್ನು ಎತ್ತಿ ತೋರಿಸಲು ವಿಶಿಷ್ಟ ಪ್ರಯತ್ನಗಳನ್ನು ಮಾಡುವುದು ಅರ್ಹ. ರೆಯಾನ್ ಮರ ಅತ್ಯಂತ ಉತ್ಕೃಷ್ಟವಾದ, ಗಂಟು ಗಂಟಿನ ಮತ್ತು ಕುತೂಹಲಕಾರಿ ತೊಗಟೆಯನ್ನು ಹೊಂದಿದೆ ಮತ್ತು ಪ್ರತಿಯೊಬ್ಬರ ಅಭಿರುಚಿಗೆ ತಕ್ಕಂಥ ಅನೇಕ ಬಗೆಯ ತೊಗಟೆಗಳೂ ಉಂಟು. ಮತ್ತೆ, ಕೆಲವು ತೊಗಟೆಗಳು ಒಂದು ಹಂತದವರೆಗೂ ಅಷ್ಟು ಕುತೂಹಲಕಾರಿಯಲ್ಲ ಮತ್ತು ಅಂತಹುದರ ಮರ ಎದ್ದು ಕಾಣುವ ಸ್ಥಳದಲ್ಲಿದ್ದರೆ, ಅದನ್ನು ಸೊಗಸಾಗಿ ಬಳ್ಳಿಗಳಿಂದ ಮುಚ್ಚುವುದಾಗಲಿ ಅಥವಾ ಆರ್ಕಿಡ್ಡುಗಳಿಂದ ಅಲಂಕರಿಸಿವುದು ಸಮಂಜಸವಾದದ್ದು.

ಕೆಲವು ವೇಳೆ, ಮರದ ಸುತ್ತಲೂ ಒಂದು ವಿಶಿಷ್ಟ ರೀತಿಯಲ್ಲಿ ಗಿಡಗಳನ್ನು ನೆಡುವುದರಿಂದ, ಸಾಧಾರಣ ಕಾಂಡದ ಚಹರೆಯನ್ನು ಉತ್ತಮಗೊಳಿಸಬಹುದು. ನನ್ನ ಅಭೀಷ್ಟದ ಯೋಜನೆಯೆಂದರೆ, ಸ್ಪೈಡರ್ ಲಿಲ್ಲಿಗಳನ್ನು ದಿಟ್ಟತನದಿಂದ ನೆಡುವುದು. ಇದು ಹಳೆ ಮಾವಿನಮರದ ತೊಗಟೆಯನ್ನು ಎದ್ದು ಕಾಣುವಂತೆ

ಮಾಡುತ್ತದೆ. ಹೊಳೆಯುವ ಗಾಢ ಹಸುರೆಲೆಗಳಿಗೆ, ಬಹುಮಟ್ಟಿಗೆ ಕಪ್ಪಾಗಿರುವ ಕಾಂಡ ಆದರ್ಶ ಕಾಂತಿವರ್ಧಕವಾಗಿರುತ್ತದೆ.

ಸುಮಾರಾಗಿ ಕಣ್ಣುಮಟ್ಟಕ್ಕೆ ಇರುವ ಉದ್ಯಾನದ ಎಲ್ಲಾ ಪೀಠೋಪಕರಣಗಳು ಬಹಳ ಪ್ರಾಮುಖ್ಯತೆಯನ್ನು ಹೊಂದಿರುವುದರಿಂದ, ಅವುಗಳು ವಾಸ್ತವವಾಗಿ ಕೆಲವೊಮ್ಮೆ ರೂಪಗಳನ್ನು ಉದ್ಯಾನ ರಚನೆಗೆ ಒದಗಿಸುತ್ತವೆ. ನೈಜಿಕ ವಸ್ತುಗಳಾದ ಮರ ಮತ್ತು ಕಲ್ಲುಗಳು ವಾಸ್ತವವಾಗಿ ತಮ್ಮ ಪರಿಸರಗಳೊಡನೆ ಬಹಳ ಸುಲಭವಾಗಿ ಲೀನಗೊಳ್ಳುತ್ತವೆ. ಕಾರ್ಯರೂಪ ನಿಮಿತ್ತಗಳಿಸುಸಾರವಾಗಿ, ಪೀಠೋಪಕರಣಗಳು ಮರದ್ದೇ ಆಗಿರಲಿ, ಕಬ್ಬಿಣದ್ದೇ ಆಗಿರಲಿ, ಬಣ್ಣ ಹಚ್ಚಬೇಕಾಗುತ್ತದೆ. ಬಣ್ಣ ಬಳಿಯ ಬೇಕಾದ ಪೀಠೋಪಕರಣಗಳಿಗೆ, ಹಸಿರು ಮತ್ತು ಬಿಳಿ ಬಣ್ಣಗಳನ್ನು ಬಿಟ್ಟು, ಬೇರೆ ಬಣ್ಣಗಳನ್ನು ಬಳಸಲು ಖಾತ್ರಿಯಾದ ಅಭಿರುಚಿ ಇರಬೇಕು. ಇವೆರಡೂ ಕನಿಷ್ಠ ಜಿಗುಪ್ಸೆಯನ್ನು ತರತಕ್ಕದ್ದು. ಪೀಠೋಪಕರಣಗಳು ಸ್ವಾಭಾವಿಕವಾಗಿ ಕಾಣುವಂತೆ ಮಾಡಲು ಕೈಗೊಳ್ಳುವ ಅತಿ ಶ್ರದ್ಧಾಪೂರ್ವಕವಾದ ಪ್ರಯತ್ನಗಳು, ಒಂದೊಂದು ವೇಳೆ ಅವಲಕ್ಷಣ ಮತ್ತು ಅಸಂಬದ್ಧತೆಯಲ್ಲಿ ಅಂತ್ಯವಾಗುತ್ತವೆ. ಅಂತಹ ಕೃತಕವಸ್ತುಗಳಿಗಿಂತ ಒಳ್ಳೆ ಬಣ್ಣವನ್ನು ಇಷ್ಟಪಡಬೇಕು.

ನಮ್ಮಲ್ಲಿ ಆಕಾಶಕ್ಕೆ ಮಾನ್ಯತೆ ಕೊಡುವುದು ರೂಢಿಯಾಗಿದೆ. ಆದರೆ ಯಾವುದಾದರೂ ಕಾರಣದಿಂದಾಗಿ, ಎತ್ತರವಾದ ಕಟ್ಟಡಗಳಿಂದಲೋ ಅಥವಾ ವಿಪರೀತ ಬೆಳವಣಿಗೆಯಿಂದಲೋ, ಕತ್ತಲೆ ಕವಿದರೆ, ಆಗ ಉದ್ಯಾನದ ರಚನೆಯಲ್ಲಿ ಆಕಾಶವು ಎಷ್ಟು ಮುಖ್ಯ ಪಾತ್ರವನ್ನು ನಿರ್ವಹಿಸುತ್ತದೆಂಬುದನ್ನು ಥಟ್ಟನೆ ಗ್ರಹಿಸುತ್ತೇವೆ. ಆಕಾಶದ ತೆರಪು ಕಡಿಮೆಯಾದಾಕ್ಷಣ, ಉದ್ಯಾನ ಚಿಕ್ಕದಾದಂತೆ, ರೋಗಗ್ರಸ್ತವಾದಂತೆ, ಚದರಡಿಗಳಲ್ಲಿ ವಿಸ್ತೀರ್ಣ ಬದಲಾಗದಿದ್ದರೂ, ಅಂತಹ ಭಾವನೆ ಮೂಡಿಸುತ್ತದೆ. ದಿಗಂತದಲ್ಲಿ ಐಕ್ಯವಾಗುವಂತೆ ಕಾಣುವ ಉದ್ಯಾನವನ್ನು ಹೊಂದಿರುವ ಅದೃಷ್ಟವಂತರು ಯಾರೂ ಇಲ್ಲ. ವಾಸ್ತವವಾಗಿ, ಸೂರ್ಯಾಸ್ತಮದ ನಿರ್ಮಲ ನೋಟವನ್ನು ಹೊಂದಿರುವ ಉದ್ಯಾನಕ್ಕೆ ಬೇರೆ ಇನ್ನಾವ ರೂಪಗಳ ಆವಶ್ಯಕತೆ ಇಲ್ಲ. ಸಾಯಂಕಾಲದ ಸೂರ್ಯನನ್ನು ಶ್ಲಾಘಿಸಲು ಮತ್ತು ಚೆನ್ನಾಗಿ ಕಾಣುವಂತೆ ಮಾಡಲು, ಪೂರ್ಣ ನಿವೇಶನವನ್ನು ವಿಸ್ತಾರವಾದ ಚೌಕಟ್ಟಿನಲ್ಲಿ ಅಡಗಿರುವಂತೆ ಸಂಸ್ಕರಿಸಬಹುದು. ಚೆನ್ನಾಗಿ ಕಾಣುವ ಮರದ ನೆತ್ತಿ, ಆಕಾಶದ ಎದುರಿಗೆ, ಬಹಳ ಮನೋಹರವಾಗಿ ಕಾಣುತ್ತದೆ. ಹೊಳೆಯುವ ಪುಷ್ಪಗಳ ಬಣ್ಣಗಳು, ನೀಲಿ ಆಕಾಶದ ಎದುರಿಗೆ ಬಹಳ ಅತ್ಯುತ್ತಮವಾಗಿ ಕಾಣುತ್ತವೆ ಮತ್ತು ಶ್ರೇಷ್ಠವಾದ ಎಲೆಗಳಿಂದ ಆವೃತವಾದ, ವಿಶಾಲವಾಗಿ ವ್ಯಾಪಿಸಿರುವ ಮೇಲ್ಕಟ್ಟನ್ನು, ಮೇಲಿನ ಆಕಾಶದ ಗಾಢತೆಯಿಂದಾಗಿ, ಕೆಳಗಿನಿಂದ ನೋಡಿದಾಗ ವಿವರಿಸಲಾಗದಷ್ಟು, ಮನೋಹರವಾಗಿರುತ್ತದೆ.

ಆಕಾಶವು 'ಎಂದೆಂದಿಗೂ ಅಲ್ಲಿದೆ' ಎಂಬುದು ದಿಟ. ಆದರೆ ಅದರ ಇರುವಿಕೆಯನ್ನು ಅರಿತರೆ, ಉದ್ಯಾನಕ್ಕೆ ವಿಶಾಲತೆಯ ದೊಡ್ಡ ಭಾವವನ್ನು ಮತ್ತು ಸ್ವತಂತ್ರತೆಯನ್ನು ಕೊಡುವುದಕ್ಕೆ ಉದ್ದೇಶಪೂರಕವಾಗಿಯೆ ಉಪಯೋಗಿಸಬಹುದು.

## ವರ್ಣ ಸಾಂದ್ರತೆ ಮತ್ತು ವರ್ಣ

ಅನೇಕ ತೋಟಗಾರರು ಆದಷ್ಟು ತರಹೆ ಗಿಡಗಳನ್ನು, ದೊರೆಯುವ ಎಲ್ಲ ಬಣ್ಣಗಳನ್ನು ಶೇಖರಿಸಲು 'ಹರಟೆ ಮಲ್ಲ' ಹಕ್ಕಿಯಂತೆ ಮಹಾಕಾಂಕ್ಷೆಯನ್ನು ಹೊಂದಿರುತ್ತಾರೆ ಮತ್ತು ಉತ್ಸಾಹಿ ತೋಟಗಾರನ ಸರ್ವಗ್ರಾಹಿ ಆಸೆಗಳು ಈಡೇರದಂತೆ ಮಾಡುವುದು ಬಹಳ ಕ್ರೂರವಾದದ್ದು. ದೊಡ್ಡ ಉದ್ಯಾನ ಅಥವಾ ಸಾರ್ವಜನಿಕ ತೋಟಗಳಲ್ಲಿ, ಒಂದೇ ತರದ ಮತ್ತು ವಿಭಿನ್ನ ತರದ ಬಣ್ಣಗಳ ಚತುರ ಸಾಮೂಹಿಕತೆ ಆಕರ್ಷಣೀಯ ಪರಿಣಾಮಗಳನ್ನು ನಿಸ್ಸಂದೇಹವಾಗಿಯೂ ಉಂಟು ಮಾಡುತ್ತವೆ. ಭಾರತದ ತೋಟಗಾರರು, ವಾರ್ಷಿಕಗಳನ್ನು ನೆಡುವಾಗ ಬಣ್ಣಗಳೊಡನೆ ಈ ರೀತಿಯಾಗಿ ಆಟವಾಡುತ್ತಾರೆ. ಕಡುಗೆಂಪು ಫ್ಲಾಕ್ಸಿನ ಹೂಪಾತಿ, ಕೆನೆ ಬಣ್ಣದ ಫ್ಲಾಕ್ಸಿನ್ ಹೂಪಾತಿಯು ಎದುರಿಗೆ ಇರುವಂತಹ ವಿನ್ಯಾಸ ಸಾಮಾನ್ಯವಾಗಿ ನಮ್ಮ ತೋಟಗಾರರ ತಲೆಗೆ ಹೊಕ್ಕುತ್ತದೆ.

ಹೂ ಮರ ಮತ್ತು ಗುಲ್ಮಗಳು ತಮ್ಮ ಬಣ್ಣಗಳಿಂದಲೆ ಪ್ರಾಧಾನ್ಯತೆಯನ್ನು ಹೊಂದುವ ರೀತಿಯಲ್ಲಿ ಅವುಗಳನ್ನು ಅನುಗೊಳಿಸುವುದು ಬಹಳ ಅಪರೂಪವಾಗಿ ಕಂಡು ಬರುತ್ತದೆ. ನಾವು ಕಂಡಂತೆ, ಭಾರತದ ಹೂ ಬಿಡುವ ಮರಗಳು ಸ್ಥೂಲವಾಗಿ ಎರಡು ವರ್ಣಗುಂಪುಗಳ ಸಾಲಿಗೆ ಬೀಳುತ್ತವೆ. ದೃಢ ಬಣ್ಣದವುಗಳು – ಕೆಂಪು ಬಣ್ಣದ ವ್ಯಾಪ್ತಿಗೆ ಒಳಸೇರುವ ಎಲ್ಲವೂ (ಗುಲ್ ಮೊಹರ್, ಬೂರುಗಳು, ಹಾಲುವಾಣಗಳು, ಸ್ಪರ್ ಕ್ಯೂಲಿಯಗಳು, ಟ್ಯೂಲಿಪ್ ಮರಗಳು) ಮತ್ತು ಕೋಮಲ ಬಣ್ಣದವು. ಇದರಲ್ಲಿ ಉಳಿದೆಲ್ಲವೂ ಸೇರುತ್ತವೆ (ಪಾಟಲ ಬಣ್ಣದ ಕ್ಯಾಸಿಯಗಳು, ಧೂಮ ವರ್ಣದ ಜಕರಾಂಡಗಳು, ಬಸವನ ಪಾದಗಳು ಮತ್ತು ಹೋಳೆ ದಾಸವಾಳಗಳು) ಮತ್ತು ಹಳದಿ, ಬಿಳಿ ಹೂಗಳನ್ನು ಬಿಡುವ ಮರಗಳು. ಈ ಸಂದರ್ಭಗಳಲ್ಲಿ ಯೋಚಿಸುವಾಗ ಪಾಟಲ ಬಣ್ಣದ ಮತ್ತು ಧೂಮ ವರ್ಣದ ದೊಡ್ಡ ಸಿಡಿತಗಳ ಅಥವಾ ವಿವಿಧ ಕೆಂಪು ಮತ್ತು ಅಲ್ಲಲ್ಲೆ ಬಿಳಿಯ ಬಣ್ಣವನ್ನು ಚಿಮ್ಮುವಂತಹ ಉದ್ಯಾನವನ್ನು ಸೃಷ್ಟಿಸುವುದು ಸಾಧ್ಯ. ಕಾರ್ಯರೂಪದಲ್ಲಿ ಒಂದು ತೊಂದರೆಯೆಂದರೆ, ಮೈದಾನ ಪ್ರದೇಶಗಳಲ್ಲಿನ ಋತುಮಾನಗಳು ಅಸ್ಪಷ್ಟ ಮತ್ತು ಅನಿರ್ದಿಷ್ಟ. ಆದರೆ ಸಮಶೀತೋಷ್ಣ ವಲಯದ ಹೂಮರಗಳಲ್ಲಿ ಯಾವಾಗಲೂ ನಿರ್ದಿಷ್ಟವಾದ ಒಂದು ತರಹ ನಲಿದಾಟವಿದೆ. ಒಂದೇ ಜಾತಿಯ ಎರಡು ಗಿಡಗಳನ್ನು ಅವು ಒಟ್ಟಿಗೆ ಹೂ ಬಿಡುವವೆಂಬ ಆಸೆಯಿಂದ, ಅತಿ ಸಮೀಪದಲ್ಲಿಯೇ ನೆಟ್ಟರೆ, ಪ್ರತಿಯೊಂದು ವರ್ಷವೂ, ಕೆಲವು ದಿನಗಳ ಅಂತರದಿಂದ ತಪ್ಪಿಹೋಗಬಹುದು – ಕೆಲವು ಹಿಂದಾಗಬಹುದು ಅಥವಾ ಮುಂದಾಗಬಹುದು.

ಕೆಲವು ವೇಳೆ ಒಂದು ಉದ್ಯಾನ ಅತ್ಯಂತ ಶ್ಲಾಘನೀಯ ಪ್ರಶಂಸೆಗಳಿಸಬಹುದು. ಹೇಗೆಂದರೆ 'ಬಣ್ಣ ಗೊಂದಲ' ಎಂದು ಕರೆಯಲ್ಪಡುವುದರಿಂದ. ವಾಸ್ತವವಾಗಿ, ಸ್ವಲ್ಪ ಕಾಲ ಮಾತ್ರ, ಈ ಗೊಂದಲ ಉತ್ಸಾಹ ಭರಿತ ಮತ್ತು ಉದ್ರೇಕಿಸುವಂತಿರುವುದು. ಈ ಬಣ್ಣಗಳು ಗಮನಿಸುವವರ ನೋಟವನ್ನು ಸೆಳೆಯಲು ಒಂದಕ್ಕೊಂದು ಡಿಕ್ಕಿ

ಹೊಡೆಯುತ್ತಾ ಪ್ರತಿಸ್ಪರ್ಧಿಸುತ್ತವೆ. ಇದರಿಂದಾಗಿ ಉದ್ಯಾನದ ಗಹನ ಸೌಂದರ್ಯ ಹಿಂದಕ್ಕೆ ಬಿದ್ದು ಮಾಯವಾಗಬಹುದು. ಅದೃಷ್ಟವಶಾತ್, ಈ ಗೊಂದಲ ಎಂದಿಗೂ ಬಹಳ ಕಾಲವಿರುವುದಿಲ್ಲ; ಋತು ಬದಲಾಯಿಸುತ್ತದೆ, ವಾರ್ಷಿಕ ಪುಷ್ಪಗಳು ಬಾಡುತ್ತವೆ ಮತ್ತು ಹಸಿರು-ಕಂದು ಬಣ್ಣಗಳ ಸಾವಿರ ಸ್ವರೂಪಗಳ ಶಾಂತತೆಯ ನೋಟಕ್ಕೆ ಉದ್ಯಾನ ಹಿಂದಿರುಗುತ್ತದೆ.

ಈ ಚಿರಸ್ಥಾಯೀ ಹಸಿರುಗಳು, ಶಾಶ್ವತವಾದ ಹಿನ್ನೆಲೆಗಳು. ಇವುಗಳ ಮೇಲೆ ಕಲೆಗಾರನಾದ ತೋಟಗಾರನು ತನ್ನ ವರ್ಣ ವಿನ್ಯಾಸಗಳನ್ನು ಗುರುತು ಮಾಡಬೇಕು. ಈ ಅದ್ಭುತವಾದ ಹಿನ್ನಲೆಯಲ್ಲಿ ಒಂದು ಬಣ್ಣದ ಚುಕ್ಕೆಯೂ ಎದ್ದು ಕಾಣುತ್ತದೆ. ಇದರ ಮೌಲ್ಯ, ಒಂದು ವೈಭವಯುಕ್ತ ಹೊದಿಕೆಯಲ್ಲಿನ ಆಭರಣದಂತೆ ಏರುತ್ತದೆ. ಅನೇಕ ಹಸಿರುಗಳ ಪುಸಲಾಯಿಸುವ ಹಿನ್ನೆಲೆ, ಪಾದದಡಿಯಲ್ಲಿ, ಕಣ್ಣುಮಟ್ಟದಲ್ಲಿ, ಮತ್ತು ನೆತ್ತಿಯ ಮೇಲ್ಗಡೆಯಲ್ಲಿ ಬಣ್ಣದ ಪ್ರತಿಯೊಂದು ಅಂಶವನ್ನು ಸಂಭ್ರಮದಿಂದ ಹೆಚ್ಚಿಸುತ್ತದೆ. ಇದರಿಂದಾಗಿ ಪ್ರತಿಯೊಂದು ಪುಷ್ಪವೂ ಚೆನ್ನಾಗಿ ಕಾಣುತ್ತದೆ. ಇದರ ವ್ಯತಿರಿಕ್ತವೂ ಕೂಡ ಅಷ್ಟೇ ನಿಜ. ಧೂಳಿನ ಸ್ಥಳದಲ್ಲಿ, ನಗ್ನ ಹಿನ್ನೆಲೆಯ ಎದುರಿಗೆ, ಅತಿ ಸ್ವೇಚ್ಛಾ ಬಣ್ಣದ ಮಡಿಯನ್ನು ನೆಟ್ಟರೆ ಅದರ ಪರಿಣಾಮ ಬರೀ ಗೊಂದಲ.

ಕೆಲವು ಬಹಳ ಉಚ್ಚ ಉದ್ಯಾನಗಳು ನಿರ್ದಿಷ್ಟ ಮತ್ತು ಅತ್ಯುತ್ತಮವಾದ ವರ್ಣವಿನ್ಯಾಸಗಳನ್ನು ಬಳಸುತ್ತವೆ; ಮತ್ತು ಪ್ರಾಯಶಃ ಬಹಳ ಹೆಸರುವಾಸಿಯಾದ "ಶ್ವೇತ ಉದ್ಯಾನ" ಇಂಗ್ಲೆಂಡಿನ ಸಿಸಿಂಗ್ ಹರ್ಸ್ಟ್ ಕೋಟೆಯಲ್ಲಿದೆ. ಇದು ಅನೇಕ ಬಿಳಿ ಜಾತಿಯವುಗಳ ಸಂಯೋಜನೆ – ತೆಳು ಅಲಂಕಾರಿಕ ಬಿಳಿ ಹೂಗಳು, ಇನ್ನಿತರ ಬಿಳಿ ಮತ್ತು ತೆಳು ಬಿಳಿ ಹೂಗಳ ಗಾಢ ರಚನೆಯನ್ನು ಪ್ರತ್ಯೇಕಿಸುತ್ತವೆ. ಇದರ ಪರಿಣಾಮ ಶುದ್ಧ ಮತ್ತು ಲಾವಣ್ಯಮಯ ಮತ್ತು ರೂಢಿಯಲ್ಲಿರುವ ಬಹುಬಣ್ಣಗಳ ಹೂಪಾತಿ ಹೋಲಿಕೆಯಲ್ಲಿ ಕಣ್ಣುಕೋರೈಸುವಂತಿರುತ್ತದೆ. ಅಸಾಧಾರಣವಾಗಿ ಯಶಸ್ವಿಯಾಗಿರುವ ಇನ್ನೊಂದು ಉದ್ಯಾನ, ಎಲ್ಲಾ ಹಳದಿ ಬಣ್ಣಗಳ ಮೇಲೆ ಕೇಂದ್ರೀಕರಿಸಿದೆ. ಇದು ತೋಟಗಾರನ ಒಳ್ಳೆಯ ಅಭಿರುಚಿಯನ್ನು ಪ್ರತಿಬಿಂಬಿಸುವುದಲ್ಲದೆ, ತೋಟಗಾರಿಕೆಯಲ್ಲಿನ ಅವನ ಜ್ಞಾನವನ್ನು ತಿಳಿಸುತ್ತದೆ. ಹಳದಿ ಹೂಗಳನ್ನು ಹೊಂದಿರುವ ಅನೇಕ ಗಿಡಗಳನ್ನು ಶೇಖರಿಸುವುದು ಅಷ್ಟೇನೂ ಕಷ್ಟಕರವಲ್ಲ; ಅವೆಲ್ಲವೂ ಒಂದೇ ಕಾಲದಲ್ಲಿ ಹೂ ಬಿಡುವುದೆಂಬುದನ್ನು ಖಾತರಿ ಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಹೆಚ್ಚು ವಿಶ್ವಾಸಾರ್ಹ ಮತ್ತು ಅನುಭವಿ ಗಿಡಗಳ ನರ್ಸರಿಗಳಿದ್ದರೆ ಇದು ಸುಲಭವಾಗುತ್ತದೆ. ಭಾರತದಲ್ಲಿ ಒಳ್ಳೆ ನರ್ಸರಿಗಳ ಕೊರತೆ ಇರುವುದರಿಂದ ದೂಷಿಸುತ್ತೇವೆ. ಆದರೆ ಇಷ್ಟನ್ನು ಹೇಳಿದ ಮೇಲೆ, ಸಮಾನರೂಪದ ಗಿಡಗಳು ಒಂದೇ ಸಮಯದಲ್ಲಿ ಯೋಚಿಸದೆಯೆ, ಹೊರ ಬಂದಿರುವುದನ್ನು ನಾನು ನೋಡಿದ್ದೇನೆಂದು ತಿಳಿಸಬೇಕಾಗಿದೆ. ನನಗೆ ಸಂಬಂಧಿಸಿದಂತೆ, ಇದು ನಿಜವಾಗಿಯೂ ಆಕಸ್ಮಿಕ; ಆದರೆ ಇಂತಹವುಗಳನ್ನು ಪ್ರೇರಿಸಲು ಯಾವುದಾದರೂ ನೈಜಿಕ ಕಾಯಿದೆ ಇದೆಯೆ ಎಂಬುದರ ಬಗ್ಗೆ ನೋಜಿಗವೆನಿಸುವುದು.

ಭಾರತದ ಉದ್ಯಾನಗಳಲ್ಲಿ ವರ್ಣವಿನ್ಯಾಸಗಳನ್ನು ಖಾತರಿಯಾಗಿ ಗುರುತಿಸುವುದು ಬಹಳ ಕಷ್ಟದ ಕೆಲಸ; ಆದರೂ ಉದ್ಯಾನ ಬಣ್ಣದ ವಿನ್ಯಾಸವನ್ನು ಮನಸ್ಸಿನಲ್ಲಿಟ್ಟುಕೊಳ್ಳುವುದು ಮುಖ್ಯ ಮತ್ತು ಜ್ಞಾಪಕದಲ್ಲಿಟ್ಟುಕೊಳ್ಳುವುದಕ್ಕೆ ಅರ್ಹವಾದ ಕೆಲವು ಸಾಮಾನ್ಯ ಸೂತ್ರಗಳಿವೆ.

ಪ್ರಪ್ರಥಮವಾಗಿ ಯೋಚಿಸಲಾಗದಷ್ಟು ಮಿಶ್ರಣಗಳಿಗಿಂತ, ಏಕೈಕ ಬಣ್ಣದ ಸಾಮೂಹಿಕಗಳು ಬಹಳ ಪರಿಣಾಮಕಾರಿ. ಭೇದಭಾವಗಳಿಲ್ಲದ ಹಲವು ಬಣ್ಣಗಳ ಸಾಮೂಹಿಕಗಳು ಉದಾಹರಣೆಗೆ: ವಿವಿಧ ಬಣ್ಣಗಳ ಜಿನಿಯಾ ಪಾತಿಯನ್ನು ನೆನಪಿಡಿ ಇವು ಪ್ರತಿಯೊಂದನ್ನೂ ತೊಡೆದು ಹಾಕುವಂತೆ ಕಾಣುತ್ತದೆ. ಬಣ್ಣಗಳನ್ನು ಬೆರೆಸುವಾಗ, ಒಂದು ಪ್ರಧಾನವಾಗಿದ್ದು, ಒಂದೆರೆಡು ಪೂರಕ ಅಥವಾ ಸಹಾಯಕವಾಗಿರಬೇಕು. ಅವುಗಳನ್ನು ಸಮವಾಗಿ ಬೆರಸಬಾರದು. ಬಿಳಿ ಹೂಗಳು, ಅದರಲ್ಲೂ ಬಹಳ ತೆಳು ಬಣ್ಣದ ಚಿಕ್ಕ ಹೂಗಳು, ಯಾವಾಗಲೂ ಹೊಳೆಯುವ ಬಣ್ಣದ ದೊಡ್ಡ ಪಾತಿಗಳನ್ನು ಚೆನ್ನಾಗಿ ಎದ್ದು ಕಾಣುವಂತೆ ಮಾಡುತ್ತವೆ. ಅದೂ ಅಲ್ಲದೆ, ಬಣ್ಣದ ಒಂದು ದೊಡ್ಡ ಪಟ್ಟೆ, ಇನ್ನೊಂದು ಕಡೆ ಅದೇ ಬಣ್ಣದಲ್ಲಿ ಅಲ್ಪಾಂಶದಲ್ಲಿದ್ದು ಪ್ರತಿಬಿಂಬಿಸಿದರೆ, ದೊಡ್ಡ ಪಟ್ಟೆಯ ಬಣ್ಣ ಅಧಿಕಗೊಳ್ಳುತ್ತದೆ.

ಹೆಚ್ಚು ಜಾಗರೂಕನಾದ ತೋಟಗಾರನು, ಪುಷ್ಪಗಳಲ್ಲಿನ ಅನೇಕ ಛಾಯೆಗಳನ್ನು ಸಂಗ್ರಹಿಸುತ್ತಾನೆ. ಅದನ್ನೇ ಪ್ರವೀಣರು ಉತ್ಪತ್ತಿಗೊಳಿಸಿ, ನಿಯತ ಕಾಲಗಳಲ್ಲಿ ಪ್ರಕಟಿಸುತ್ತಾರೆ. ಇಂದಿನ ಸಾಂಪ್ರದಾಯಿಕ ತೋಟಗಾರಿಕೆಯಲ್ಲಿ ಕೊನೆಯದಾಗಿ ಹೊರಬಂದಿರುವುದು ನೀಲಿ ಗುಲಾಬಿ ಅಥವಾ ನಿಜವಾಗಿ ಹೇಳಬೇಕಾದರೆ ಧೂಮ ಅಥವಾ ಬೂದಿ ಗುಲಾಬಿ. ಆದರೆ ಈ ಮಂಕು ಬಣ್ಣ, ಸ್ವಚ್ಛವಾದ ಉತ್ತಮ ಮಟ್ಟದ ಕೆಂಪು, ಪಿಂಕು ಮತ್ತು ಹಳದಿಗಳಿಗಿಂತಲೂ ಉತ್ತಮವೆ? ಬೊಗನ್ ವಿಲಿಯಾ ಮರ್ಮಜ್ಞರು ಕೂಡ, ಅನಿರ್ದಿಷ್ಟ ಛಾಯೆಗಳ ಸಂಕರಗಳಿಗೋಸ್ಕರ ಅದನ್ನು ಬೆನ್ನಟ್ಟಿ ಹೋಗುತ್ತಾರೆ. ಆದರೂ ನನಗೆ ಕಾಣುವಂತೆ, ಬಳಕೆಯಲ್ಲಿರುವ ಹಳೇ ಜಾತಿಯ ಪುಷ್ಪಗಳು ಅತ್ಯಂತ ಆಕರ್ಷಕವಾಗಿವೆ.

ಉದ್ಯಾನ ಶಿಲ್ಪಿಗೆ ಬಹಳ ಸುಲಭ ಮತ್ತು ನಿಸ್ಸಂದೇಹವಾದ ಸ್ಥಳವೆಂದರೆ, ವಾರ್ಷಿಕಗಳ ಪಾತಿಗಳಲ್ಲಿ ಬಣ್ಣಗಳೊಡನೆ ಆಟವಾಡುವುದು. ಒಂದು ಪ್ಯಾಕೆಟ್ಟು ವಿಶ್ವಾಸಾರ್ಹ ಬೀಜಗಳನ್ನು ಪಡೆದಿದ್ದಲ್ಲಿ, ಬಣ್ಣಗಳ ಮಾದರಿಗಳನ್ನು ಮಾಡುವುದರಲ್ಲಿ, ವರ್ಷ ವರ್ಷವೂ ವರ್ಣ ವಿನ್ಯಾಸಗಳನ್ನು ಬದಲಾಯಿಸುವುದರಲ್ಲಿ, ಅವುಗಳು ಹೊಳೆಯುವಂತೆ, ಕಣ್ಣು ಕುಕ್ಕುವಂತೆ, ತೀಕ್ಷ್ಣತೆ ಗಮನಗೊಳ್ಳುವಂತೆ, ಲಾವಣ್ಯಮಯವಾಗಿರುವಂತೆ ಮಾಡಿ ತನ್ನನ್ನೇ ಬೆರಗುಗೊಳಿಸಬಹುದು; ಆದಾಗ್ಯೂ ಅಂತಹ ಆಕಾಂಕ್ಷೆಗೆ ಅವಿಶ್ವಾಸಾರ್ಹ ಬೀಜಗಳು ಒಂದು ದೊಡ್ಡ ತೊಡಕು.

ಲಭ್ಯವಾಗಿರುವ ಅನೇಕ ತರಹ ನೆಲಹೊದಿಕೆಗಳನ್ನು ಉಪಯೋಗಿಸುವುದರಿಂದ ಉದ್ಯಾನಕ್ಕೆ ಬಹಳ ವ್ಯಾಪಕವಾದ ಆದರೆ ನಾಟಕೀಯವಲ್ಲದ ಬಣ್ಣಗಳನ್ನು ಸೇರಿಸಬಹುದು. ಇವುಗಳ ಪೈಕಿ ಅನೇಕವು ಸಣ್ಣ ಪಟ್ಟೆಗಳಿರುವ ಮತ್ತು ಮೂಕ

ಬಣ್ಣದ ಎಲೆಗಳಿರುವ ಗಿಡಗಳು. ಉದಾಹರಣೆಗೆ 'ವಾಂಡರಿಂಗ್ ಜ್ಯೂ' ಎಂದು ಕರೆಯಲ್ಪಡುವ ಗಿಡ ನೆರಳನ್ನು ಸಹಿಸುತ್ತದೆ ಮತ್ತು ಮನಃಪೂರ್ವಕವಾಗಿ ಹರಡಿಕೊಂಡು, ನೆರಳಿನಿಂದ ಆವೃತವಾದ ಮೂಲೆಗಳನ್ನು ಅಲಂಕರಿಸುತ್ತವೆ. ಬೂದು-ಹಸಿರು, ಬೂದು-ಕೆನ್ನೀಲಿ, ನೀಲಿ ಮತ್ತು ಬೂದು-ಕಡುಗೆಂಪುಗಳ ಬಣ್ಣಗಳು, ಅವು ಹೊಂದುವ ಬೆಳಕಿನ ಆಧಾರದ ಮೇಲೆ, ಹೊಳೆಯುತ್ತವೆ ಅಥವಾ ತೆಳುವಾಗುತ್ತವೆ. ಇಂತಹ ನೆಲವನ್ನು ಅಪ್ಪಿ ಹಿಡಿಯುವ ಗಿಡಗಳು, ಮರಗಳ ಕೆಳಗೆ ಅಲ್ಲಲ್ಲಿ ಒಟ್ಟಾಗಿ ಹರಡಿದ್ದರೆ ಅಥವಾ ಹುಲ್ಲುಹಾಸಿನ ಅಂಚಿನಲ್ಲಿದ್ದರೆ, ಅವು ವಿನ್ಯಾಸದ ಕ್ಲಿಷ್ಟ ರೇಖೆಗಳನ್ನು ಮೃದುಗೊಳಿಸುವುದಲ್ಲದೆ, ನೆಲಮಟ್ಟಕ್ಕೆ ಕುತೂಹಲಕಾರಿ ಜೆಗಿಯುವ ರಚನೆಯನ್ನು ನೀಡುತ್ತದೆ. ಇದಕ್ಕಿಂತಲೂ ಹೆಚ್ಚಾಗಿ, ಭ್ರಾಂತಿದಾಯಕ ವೈವಿಧ್ಯತೆಯನ್ನು, ನೆಲಮಟ್ಟದಲ್ಲಿ ವರ್ಣ-ರಚನೆ ಮಾದರಿಗೆ ಕೊಡುತ್ತದೆ. ಇದನ್ನು ಸಿದ್ದಿಸಲು, ಜಡವಸ್ತುಗಳ ಉಪಯೋಗವನ್ನು ಬಿಟ್ಟರೆ, ಇದೊಂದೇ ಮಾರ್ಗ. ಉದ್ಯಾನದಲ್ಲಿ ಬಣ್ಣವನ್ನು ತರುವ ನಿರೀಕ್ಷೆಯಲ್ಲಿ, ಗಾಢ ಬಣ್ಣದ ಕಠಿಣ ಪದಾರ್ಥಗಳನ್ನು ಉಪಯೋಗಿಸಿದರೆ, ಅಂತಿಮವಾಗಿ ಸೋಲನ್ನು ಒಪ್ಪಿಕೊಂಡಂತೆ ಎಂಬುದಾಗಿ ನಾನು ತಿಳಿಯುತ್ತೇನೆ.

ಕಣ್ಣು ಮಟ್ಟದಲ್ಲಿ ಕೂಡ, ಉದ್ಯಾನದಲ್ಲಿ ವೈವಿಧ್ಯತೆಯನ್ನು ತರಲು ಬಣ್ಣದ ಎಲೆ ಜಾತಿಗಳು ಬಹಳ ಉಪಯೋಗಕರ. ದುರಾದೃಷ್ಟವಶಾತ್ ಕ್ರೋಟನ್ ಕುಟುಂಬ ಅದರಲ್ಲಿನ ಕೆಲವು ಜಾತಿಗಳು ಸರ್ವಥಾ ಆಶ್ಚರ್ಯಕರವಾದ ಬಣ್ಣಗಳನ್ನು ಹೊಂದಿವೆ. ಇವು ಉದ್ಯಾನದ ಭೂ ದೃಶ್ಯದಲ್ಲಿ ಐಕ್ಯವಾಗದಂತೆ, ಪ್ರತ್ಯೇಕ ವ್ಯಕ್ತಿತ್ವವನ್ನೇ ಹೊಂದಿವೆ. ಅವು ಕುಂಡದ ಗಿಡಗಳು. ಪ್ರತಿಯೊಂದನ್ನೂ ಬಿಡಿಯಾಗಿ ಶ್ಲಾಘಿಸಬೇಕೆ ವಿನಃ ಅವುಗಳು ಭೂ ದೃಶ್ಯದ ಅಂದವಾಗಲಾರದು. ಅವುಗಳಲ್ಲಿನ ಒಂದೆರೆಡು ವಿಧಗಳನ್ನು (ಕೆಂಪು ಎಲೆ ಜಾತಿ) ಸೊಗಸಾದ ಹಸಿ ಬೇಲಿಯನ್ನಾಗಿ ಮಾಡಬಹುದು. ಅದೇ ಜಾತಿಯನ್ನು ಒತ್ತಾಗಿ, ಟೀ ತೋಟಗಳ ಶೈಲಿಯಲ್ಲಿರುವಂತೆ ಬೆಟ್ಟದ ಏರಿನಲ್ಲಿ ನೆಟ್ಟರೆ ಅಸಾಧಾರಣವಾಗಿಯೂ, ಮನೋಹರಕರವಾಗಿಯೂ ಕಾಣುತ್ತದೆ. ಆದರೆ ಒಟ್ಟಿನಲ್ಲಿ ಹೆಚ್ಚು ಆತ್ಮವಿಶ್ವಾಸ ಮತ್ತು ಖಾತರಿ ಸ್ಪರ್ಶನಾ ಶಕ್ತಿ ಇಲ್ಲದಿದ್ದರೆ, ಭೂ ದೃಶ್ಯದ ಹಿನ್ನೆಲೆಯಲ್ಲಿ, ಕ್ಲಿಷ್ಟ ಬಣ್ಣಗಳನ್ನು ಒಳಸೇರಿಸದಿರುವುದು ಒಳ್ಳೆಯದು.

ಉಳಿದೆರಡು, ಬಣ್ಣದ ಎಲೆಗಳ ಗುರುತು ಮುದ್ರೆಗಳೆಂದರೆ ಕೆಲೆಡಿಯಂ ಮತ್ತು ಕೋಲಿಯಸ್. ಇವುಗಳು ಉದ್ಯಾನ ವಸ್ತುಗಳೊಡನೆ ಚೆನ್ನಾಗಿಯೇ ಐಕ್ಯಗೊಳ್ಳುತ್ತವೆ. ಬಣ್ಣದ ಮಚ್ಚೆಗಳಂತೆ ಉದ್ಯಾನದ ಮೂಲೆಗಳನ್ನು ಬೆಳಗಿಸುತ್ತವೆ. ಆದರೆ ಪ್ರಾಯಶಃ ಅತ್ಯುತ್ತಮ ಸಂಯೋಜನೆಗಳೆಂದರೆ ವರ್ಣೀಯ ಹುಲ್ಲುಗಳು. ಅವು ಸಹಜತೆ ಮತ್ತು ಸ್ವಾಭಾವಿಕತೆಯನ್ನು ಉದ್ಯಾನದಲ್ಲಿ ತರುತ್ತವೆ. ಜೊತೆಗೆ ಇವುಗಳ ರಚನೆ, ಆಕಾರ ಮತ್ತು ಬಣ್ಣ ಇತರೆ ಉದ್ಯಾನ ವಸ್ತುಗಳಿಂದ ಭಿನ್ನವಾಗಿರುತ್ತವೆ. ಗ್ಲಾಡಿಯೋ ಟೈ ಮತ್ತು ಡೇಲಿಯಾಗಳಂಥ ಅತ್ಯಂತ ಕ್ರಮಬದ್ಧ ಗಿಡಗಳನ್ನು ಎತ್ತರವಾದ ಹುಲ್ಲಿನ ಪಕ್ಕದಲ್ಲಿ ಇಟ್ಟರೆ, ಅವು ಕೂಡ ಅಲ್ಪಲಾಭವನ್ನು ಸಂಪಾದಿಸುತ್ತವೆ; ಅದೇ ಕಾಲದಲ್ಲಿ

ಹುಲ್ಲಿನ ಹೂಗಳ ಮೇಲೆ ಸೂರ್ಯನ ಬೆಳಕು ಬೀಳುವಂತೆ ನಿರ್ವಹಿಸಿದರೆ, ಬೇರೆ ಯಾವ ಬಣ್ಣಕ್ಕೂ ಹೆಣಗಬೇಕಾದ ಅವಶ್ಯಕತೆ ಇಲ್ಲ.

**ಚಲನೆ**

ಪರ್ಷಿಯನ್ನರಿಗೆ ತೋಟಗಾರಿಕೆಯಲ್ಲಿದ್ದ ಗಾಢ ಕುತೂಹಲಕ್ಕೆ ಸೂಚಿಸಿದ ಕಾರಣಗಳಲ್ಲಿ ಒಂದು, ಅವರ ದೇಶದಲ್ಲಿನ ಆಶ್ಚರ್ಯಕರ ಮತ್ತು ಅತಿ ತೀವ್ರತೆಯ ವಸಂತ ಋತು. ವಸಂತದ ಆಗಮನ ಯಾವಾಗಲೂ ಕೌತುಕವನ್ನುಂಟು ಮಾಡುತ್ತದೆ. ಆದರೆ ಶುಷ್ಕ, ಶಿಲಾಭರಿತ, ಶೀತಲ ಹವೆಯಿರುವ ಪರ್ಷಿಯಾದಲ್ಲಿ ಮಾಗಿ ಕಾಲ ವಸಂತಕ್ಕೆ ಬಹಳ ಬೇಗ ಬದಲಾಗುತ್ತದೆ. ಆಗ ತತ್‌ಕ್ಷಣದಲ್ಲಿ ಎಲೆಗಳು, ಮೊಗ್ಗುಗಳು ಮತ್ತು ಹೂಗಳು ಕಾಣಿಸಿಕೊಳ್ಳುತ್ತವೆ. ಇದು ಎಷ್ಟು ಕುತೂಹಲಕಾರಿಯೆಂದರೆ, ಇದನ್ನು ಕಂಡ ಎಂತಹ ಉದಾಸೀನ ವ್ಯಕ್ತಿಯೂ ಚಲಿಸದೆ ಇರಲಾರನು. ಸಜೀವ ಪದಾರ್ಥಗಳ ಉತ್ಸಾಹದ ಬಗ್ಗೆ ಆಶ್ಚರ್ಯ, ಪ್ರಕೃತಿಯ ಕೊಡುಗೆ ಮತ್ತು ಸೌಂದರ್ಯದ ಬಗ್ಗೆ ಸಂತೋಷವನ್ನು ವ್ಯಕ್ತಪಡಿಸಲು, ವಸಂತ ಋತುವನ್ನು ಲೌಕಿಕ ಮತ್ತು ಅಲೌಕಿಕವಾಗಿ ಅಲ್ಲಿನವರು ಆರಾಧಿಸುತ್ತಾರೆ. ಈ ಅರಿವು ಮತ್ತು ಬೆಳವಣಿಗೆಯ ಬಗ್ಗೆ ಮತ್ತು ಪುನರವತಾರದ ಬಗ್ಗೆ ಪ್ರಶಂಸೆ – ಇವೆಲ್ಲವೂ ಉದ್ಯಾನಗಳನ್ನು ಮಾಡುವುದಕ್ಕೆ ಅವರಿಗೆ ಇರುವ ಅತ್ಯಂತ ಕುತೂಹಲವನ್ನು ಸ್ವಲ್ಪ ಮಟ್ಟಿಗೆ ವಿವರಿಸುತ್ತವೆ.

ಭಾರತದ ಅನೇಕ ಭಾಗಗಳಲ್ಲಿ, ಪ್ರಕೃತಿ ಜೀವನದ ಈ ಮನಃಪ್ರವೃತ್ತಿಯ ಅನುಭವದಿಂದ ವಂಚಿತಗೊಂಡಿದ್ದೇವೆ. ಈ ಪ್ರಾಕೃತಿಕ ಘಟನೆಯನ್ನು ವಸಂತ ಋತುವಿನ ರೂಪದಲ್ಲಿ ಬಿಂಬಿಸಲಾಗದೆ ಇಲ್ಲಿನ ಉದ್ಯಾನಗಳು ಒಂದು ಋತುವಿನಲ್ಲಿ ಎಚ್ಚರಗೊಳ್ಳುವುದಿಲ್ಲ. ಹಾಗೆಯೇ ಇನ್ನೊಂದು ಋತುವಿನಲ್ಲಿ ನಿದ್ರಿಸಲು ನಿವೃತ್ತವಾಗುವುದಿಲ್ಲ. ಇಂಥ ಸ್ಥಳಗಳಲ್ಲಿ ಋತುಗಳ ಬದಲಾವಣೆಗಳ ಪರಿಣಾಮಗಳು ಮಿತಿಗೊಂಡಿದೆ. ಚಲನೆಗಳು ಸಂಕುಚಿತಗೊಂಡಿವೆ. ನಿಸ್ಸಂದೇಹವಾಗಿಯೂ, ನಮ್ಮಲ್ಲಿ ಕೂಡ ಹೂವಿನ ಮರಗಳು, ಹೂವಿನ ಹೊದರುಗಳು, ಋತುಮಾನದ ವಾರ್ಷಿಕಗಳು ಇವೆ; ಆದರೆ ಒಂದು ತಂಡದ ಹೂಗಳಿಂದ ಇನ್ನೊಂದು ತಂಡದ ಹೂಗಳ ಚಲನೆ ಅಸ್ಪಷ್ಟ, ಕ್ರಮೇಣ ಮತ್ತು ಒಂದರ ಮೇಲೊಂದು ಪ್ರಸರಿಸುತ್ತವೆ ಮತ್ತು ವಾಸ್ತವಿಕತೆಯಲ್ಲಿ ಮಹಾ ವಸಂತ ಋತುವಿನ ಹೊಮ್ಮುವಿಕೆಯಿಂದ ವಂಚಿತರಾಗಿರುವುದರಿಂದ, ನಮ್ಮ ಉದ್ಯಾನಗಳನ್ನು ಸ್ವಾರಸ್ಯವಾಗಿ ಮಾಡಲು ಪ್ರಯತ್ನ ಪಡಬೇಕು. ಇದನ್ನು ನಿಶ್ಚಿತಗೊಳಿಸಲು ಒಂದು ತರಹ ಚಲನೆ ಸ್ವಲ್ಪವಾದರೂ ಕೂಡ, ವರ್ಷಾದ್ಯಂತ ಇರಬೇಕು. ಶಿಶಿರಕಾಲದ ನಗ್ನತೆಯನ್ನು ತಡೆಯಲಾಗದಿದ್ದರೆ, ವಸಂತದ ರಭಸ ಮತ್ತು ಶಕ್ತಿಯನ್ನು ಎಂದಿಗೂ ತಿಳಿಯಲಾರೆವು.

ನಮ್ಮ ಪುಷ್ಪಗಳನ್ನು ಸರದಿ ಪ್ರಕಾರ ನೆಡುವುದರಿಂದ, ಇದು ಕ್ರಮಬದ್ಧ ಮತ್ತು ಕುತೂಹಲಜನಕ. ಉಷ್ಣವಲಯದಲ್ಲಿ ನಮಗೆ ಒಂದು ದೊಡ್ಡ ಅನುಕೂಲವಿದೆ.

ಬೆಳವಣಿಗೆ ವೇಗವಾಗಿ ಆಗುವುದರಿಂದ, ಸ್ವಲ್ಪಮಟ್ಟಿಗೆ ನಾವು ಹೊದರು ಮತ್ತು ಗಿಡಗಳೊಡನೆ ಆಡಬಹುದು; ಹಳೆಯದನ್ನು ಹೊಸದರಿಂದ ಬದಲಾಯಿಸುವುದು, ಚೆನ್ನಾಗಿಲ್ಲದೆ ಹಳೆಯದನ್ನು ಕಿತ್ತು, ಪ್ರಯೋಗಿಸದೆ ಇರುವ ಮತ್ತು ನವೀನ ಗಿಡಗಳ ಬಗ್ಗೆ ತಿಳಿದುಕೊಳ್ಳಬಹುದು.

ಕೆಲವು ಉದ್ಯಾನಗಳು ರೂಢಿಯ ಪದ್ಧತಿಯಲ್ಲೇ ಇದ್ದು, ಹೂಪಾತಿಗಳು, ಅದೇ ವಾರ್ಷಿಕಗಳು ಮತ್ತು ಅದೇ ಬಣ್ಣಗಳನ್ನು ಪ್ರತಿವರ್ಷವೂ ಹೊಂದಿರುತ್ತವೆ. ವಿವಿಧ ವಾರ್ಷಿಕಗಳ ಬಗ್ಗೆ ತೀರ್ಮಾನಿಸುವುದು, ಪ್ರಾಯಶಃ ಹೊಸಪಾತಿಗಳನ್ನು ರಚಿಸುವ ಪ್ರಯತ್ನಗಳೆಲ್ಲವೂ ತೋಟಗಾರನಿಗೆ ಮೀರಿದ್ದು. ಆದರೂ ಕೂಡ ಪ್ರತಿವರ್ಷವೂ ನಮ್ಮ ಉದ್ಯಾನಗಳಲ್ಲಿ ಸ್ವಲ್ಪ ಬದಲಾವಣೆಗಳು ಆಗಬೇಕು. ಕೇವಲ ಪರಿಪೂರ್ಣವಾದುವುಗಳಿಗೆ, ಬದಲಾವಣೆಗೊಳ್ಳದೆ ಉಳಿಯುವುದಕ್ಕೆ ಹಕ್ಕಿದೆ. ನಮ್ಮಲ್ಲಿ ಕೆಲವರು ತಮ್ಮ ಉದ್ಯಾನಗಳು ಅಖಂಡ ಸ್ಥಿತಿಗೇರಿದೆ ಎಂದು ವಾದಿಸುವರಿದ್ದಾರೆ; ಆದರೆ ಸಮೀಪ ಪರಿಪೂರ್ಣ ಸ್ಥಿತಿಗೆ ಬರಲು ಆಗಾಗ್ಗೆ ಸ್ವಲ್ಪವಾಗಿ ಪ್ರಾಧಾನ್ಯತೆಯನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಬದಲಾಯಿಸುತ್ತಿರಬೇಕು. ಇದರ ಜೊತೆಗೆ, ಮೊದಲೇ ತಿಳಿಸಿದಂತೆ, ಗಿಡಗಳಲ್ಲಿ ಮತ್ತು ಎಲೆ ಗುಂಪುಗಳಲ್ಲಿ ಋತುಮಾನ ಚಲನೆ ಅತ್ಯಂತ ಅಲ್ಪವಾದುದರಿಂದ, ಉದ್ಯಾನ ಮಂಕಾಗದಿರುವಂತೆ ಯಾವುದಾದರೂ ಸಾಮರಸ್ಯವಿಲ್ಲದ ಚಲನೆ ಅವಶ್ಯಕವೆನಿಸುವುದು.

ಕೆಲವು ಸಣ್ಣ ಸೂಕ್ಷ್ಮ ಚಲನೆಗಳನ್ನು ಉದ್ಯಾನದಲ್ಲಿ ಅಲ್ಪ ರೀತಿಗಳಲ್ಲಿ ಸೇರಿಸಬಹುದು. ಸಮಶೀತೋಷ್ಣವಲಯದ ನಿರ್ದಿಷ್ಟ ಋತುಗಳಲ್ಲಿ, ತೂಗಾಡುವ ಸಾಮೂಹಿಕ ಚಲನೆಗಳಿರುತ್ತವೆ. ಇದಕ್ಕೆ ಬದಲಾಗಿ, ಕಾಡು ಬಾದಾಮಿಯಲ್ಲಿದ್ದಂತೆ, ಎಲೆಗಳು ಉದುರುವ ಮುನ್ನ ಕೆಂಪಾಗುವಿಕೆ, ಹೊಂಗೆ ಮತ್ತು ಹೊಳೆ ದಾಸವಾಳಗಳಲ್ಲಿರುವಂತೆ ಚಿಗುರೆಲೆಗಳು ಹಳದಿ – ಹಸಿರಾಗುವಿಕೆಯಂತಹ ಮರಗಳ ಬಗ್ಗೆ ಗಮನಹರಿಸಬಹುದು.

ಹರಿಯುವ ನೀರು ಮತ್ತು ಚಿಲುಮೆಗಳು ಕಷ್ಟ ಮತ್ತು ದುಬಾರಿ; ಆದರೆ ಹಲವು ವೇಳೆ ಕೊಳವೆಗಳ ಬದಲಾಗಿ ತೆರೆದ ಕಾಲುವೆಗಳನ್ನು ಉಪಯೋಗಿಸಬಹುದು. ಇದರಲ್ಲಿ ನೀರಿನ ಚಲನೆಯನ್ನು ನೋಡಬಹುದು ಮತ್ತು ಎಲ್ಲಿ ಸಾಧ್ಯವೋ ಅಲ್ಲಿ ಮೇಲ್ಮಟ್ಟದಿಂದ ಕೆಳಮಟ್ಟಕ್ಕೆ ಬೀಳುವಂತೆ ನಿಶ್ಚಿತಗೊಳ್ಳಿಸಬೇಕು. ಹುಲ್ಲುಹಾಸಿನ ಮೇಲೆ ತುಷಾರದ ಹಾರಿಕೆ ಕೂಡ ಚಲನೆಯ ಭ್ರಾಂತಿಯನ್ನು ಸೃಜಿಸುತ್ತದೆ.

ಉದ್ಯಾನದಲ್ಲಿ ಬಹಳ ಚಿತ್ತಾಕರ್ಷಕವಾದ ಚಲನೆಯ ರೂಪವೆಂದರೆ ಪಕ್ಷಿಗಳ ಹಾರಾಟ ಮತ್ತು ಚಲನೆ. ಎಂತಹುದೇ ಉದ್ಯಾಸ, ಮರಗಳು, ಹೊದರುಗಳು, ಲತೆಗಳು, ಹುಲ್ಲುಹಾಸುಗಳನ್ನು ಹೊಂದಿದ್ದರೆ, ಸ್ವಾಭಾವಿಕವಾಗಿಯೆ ಪಕ್ಷಿಗಳನ್ನು ಆಕರ್ಷಿಸುತ್ತದೆ. ಬಹಳ ಅಚ್ಚುಕಟ್ಟಾಗಿರುವ ಉದ್ಯಾನ, ಅವುಗಳು ಗೂಡುಕಟ್ಟುವುದನ್ನು ಸಹಿಸದಿರಬಹುದು. ಚಿಕ್ಕ ಪಕ್ಷಿಗಳು ಜಟಿಲ ಗುಲ್ಮಾಲಯಗಳನ್ನು, ಕಾಗೆ ಮತ್ತು ಇತರ ಶತ್ರುಗಳಿಂದ ಸುರಕ್ಷಿತವಾಗಿರಲು ಅಪೇಕ್ಷಿಸುತ್ತವೆ. ಹೊದರು ಮತ್ತು ಬಳ್ಳಿಗಳ ಗಾಢ ಸಮೂಹ ಗೋಡೆಯ

ಎದುರಿಗಿದ್ದರೆ, ಉನ್ನತ ವಸತಿಸ್ಥಳವನ್ನು ಕೊಡುತ್ತವೆ. ಅನೇಕ ಗಿಡಗಳ ಪುಷ್ಪಗಳು ಓಟೆಯಿಲ್ಲದ ತಿರುಳುಳ್ಳ ಹಣ್ಣುಗಳಾಗುತ್ತವೆ. ಇಂತಹವುಗಳನ್ನು ಪಕ್ಷಿಗಳು ಬಹಳವಾಗಿ ಆಶ್ರಯಿಸುತ್ತವೆ. ಹಲವು ವೇಳೆ, ಅನೇಕ ಪಕ್ಷಿಗಳನ್ನು ಆಕರ್ಷಿಸಲು, ಪುಷ್ಪಗಳು ಸುಂದರವಲ್ಲದಿದ್ದರೂ ಕೂಡ, ಇಂಥ ಗಿಡಗಳನ್ನು ನೆಡುವುದು ಅರ್ಹ. ಬೂರಗ ಮತ್ತು ಹಾಲುವಾಣ ಮರಗಳು ಹೂವಿನಲ್ಲಿದ್ದಾಗ, ಮಕರಂದಕ್ಕಾಗಿ ಅನೇಕ ಪಕ್ಷಿಗಳನ್ನು ಆಕರ್ಷಿಸುತ್ತವೆ. ದಿನವೆಲ್ಲಾ ಅವುಗಳ ಟೊಂಗೆಗಳ ಕೆಳಗೆ ಕುಳಿತು, ಪಕ್ಷಿ ಶಾಸ್ತ್ರದ ಬಗ್ಗೆ ಯಾರಾದರೂ ವೈಜ್ಞಾನಿಕ ಸಂಶೋಧನೆಗಳನ್ನು ಮಾಡಬಹುದು. ಜಾಳಂದರದ ಮೇಲೆ ಹಬ್ಬಿರುವ ಬಳ್ಳಿ ಲಾಂಟಾನ ಗುಲ್ಮ, ತೆರೆತೆರೆಯಾಗಿ ಬಿಳಿ ಪುಷ್ಪಗಳನ್ನು ಬಿಟ್ಟಾಗ, ಚಿಟ್ಟೆಗಳ ಸಮೂಹವನ್ನು ಆಕರ್ಷಿಸುತ್ತವೆ ಮತ್ತು ಹಣ್ಣುಗಳು ತಯಾರಾಗಿದ್ದಾಗ ಅನೇಕ ರೆಕ್ಕೆ ಬಡಿದಾಡುವ ಹಕ್ಕಿಗಳನ್ನು ಕೂಡ ಆಕರ್ಷಿಸುತ್ತವೆ. ಸತ್ತ ಮರ, ಕೆಲವು ಉದುರಿದ, ಕೊಳೆಯುತ್ತಿರುವ ಎಲೆಗಳು, ಮಂಕಾಗಿರುವ ಮೂಲೆಯಲ್ಲಿ ಹೊಲಸು ಬೆಳವಣಿಗೆ – ಇವೆಲ್ಲಾ ನಿಕೃಷ್ಟ ತೋಟಗಾರನ ಗುರುತುಗಳು; ಆದರೆ ಪಕ್ಷಿಗಳು ಬಂದು, ತನ್ನ ಉದ್ಯಾನವನ್ನು ಉಪಯೋಗಿಸಲು ಒಲಿಸಿದರೆ, ಅಂತಹುದನ್ನು ಸಂತೋಷವಾಗಿ ಸಹಿಸಬಹುದು.

ತೋಟಗಾರಿಕೆಯ ಅಧಿಕ ಪ್ರಮಾಣಗಳು ಇಲ್ಲಿಗೆ ಮುಗಿಯುವುದಿಲ್ಲ. ಕಪ್ಪೆ ಮತ್ತು ಇತರೆ ಸಣ್ಣ ಜಂತುಗಳು, ಒಳಗಡೆ, ಹೊರಗಡೆ ಮತ್ತು ನೀರಿನ ಸುತ್ತಲು ವಾಸಿಸಿ, ಅವುಗಳ ಕೇಂದ್ರ ಕಾರ್ಯಸ್ಥಾನವಾಗುವುದಕ್ಕೆ ಒಂದು ಕೊಳಬೇಕು. ಅಣಬೆಗಳು, ಎಲ್ಲಾ ಆಕಾರ ಮತ್ತು ಅಳತೆಗಳಲ್ಲಿ ಹಠಾತ್ತನೆ ಹುಟ್ಟುತ್ತವೆ ಮತ್ತು ಅವುಗಳನ್ನು ತಿನ್ನಬಹುದೋ ಇಲ್ಲವೋ ಎಂಬುದನ್ನು ಯೋಚಿಸುತ್ತಿರುವಾಗಲೆ, ಹಠಾತ್ತನೆ ಮಾಯವಾಗುತ್ತವೆ. ಕಳೆಗಳು ಹಸನ್ಮುಖಿ ಸಣ್ಣ ಪುಷ್ಪಗಳನ್ನು ಬಿಡುತ್ತವೆ. ಆರ್ಕಿಡ್ಸ್ ಅಥವಾ ಸೀತೆ ಹೂ (ಉತ್ಕೃಷ್ಟ ಜಾತಿಗಳಲ್ಲಿ) ಆಮಂತ್ರಣವಿಲ್ಲದೆ ನಿಮ್ಮ ಮರಗಳ ಮೇಲೆ ಬೆಳೆಯುವುದನ್ನು ಕಾಣಬಹುದು. ಒಟ್ಟಿನಲ್ಲಿ ಅಸಮರ್ಥ ತೋಟಗಾರನು ಸಮೃದ್ಧಿಮಯ ಸುಗ್ಗಿಯ ಪ್ರತಿಫಲವನ್ನು, ಬಹಳ ಸಮರ್ಥವಾದ ತೋಟಗಾರನಿಗಿಂತ ಹೆಚ್ಚಾಗಿ ಭೋಗಿಸುತ್ತಾನೆ.

## ಶೈಲಿ

ಒಂದು ರೀತಿಯಲ್ಲಿ ಪ್ರತಿಯೊಬ್ಬನೂ ಈಗ ತನ್ನದೆ ಆದ ಉದ್ಯಾನ ಶೈಲಿಯನ್ನು, ಸಂಪತ್ತು, ನಿವೇಶನ ಮತ್ತು ಒಡೆಯನ ಅಭಿರುಚಿಗಳಿಗೆ ಒಗ್ಗುವಂತೆ ಸೃಷ್ಟಿಸಬೇಕಾಗುತ್ತದೆ. ಆತನು ಪ್ರಪಂಚದ ಅನೇಕ ದೊಡ್ಡ ಉದ್ಯಾನಗಳ ಶೈಲಿಯನ್ನು ಜಾಗರೂಕತೆಯಿಂದ ಅಧ್ಯಯನ ಮಾಡಿ ಮತ್ತು ಪ್ರತಿಯೊಂದರಲ್ಲೂ ಹುದುಗಿರುವ ವಿಷಯಗಳಿಂದ ಪ್ರೇರಣೆ ಹೊಂದಿ, ಅವುಗಳಿಂದ ತನ್ನದೇ ಆದದ್ದನ್ನು ನಿರ್ಮಿಸಬೇಕು. ಯಾರು ಒಟ್ಟಿನಲ್ಲಿ ಕಾಲು ಎಕರೆ ಜಮೀನನ್ನು ಹೊಂದಿರುತ್ತಾರೋ, ಅಂತಹವರ ಬಗ್ಗೆ ಇದು ಆಡಂಬರವಾಗಬಹುದು. ಆದರೆ ಆತನು, ಸರ್ ಆರ್ಥರ್ ಕ್ವಿಲ್ಲರ್ ಕೌಚ್‌ನು ಹೇಳಿದ ಷೇಕ್ಸ್‌ಪಿಯರ್‌ನಲ್ಲಿದ್ದ 'ಭಗವಂತನ ಎಲ್ಲ ಅಗ್ನಿಯೂ,

ನನ್ನಲ್ಲಿರುವ ಒಂದು ಚಿಕ್ಕ ಕಿಡಿಯನ್ನೂ ಕೂಡ ಧೈರ್ಯವಾಗಿ ಪ್ರೋತ್ಸಾಹಿಸಲಾಗದ್ದು' ಎಂಬ ವಾಕ್ಯಗಳನ್ನು ನೆನೆಸಿಕೊಂಡು, ಧೈರ್ಯ ತೆಗೆದುಕೊಳ್ಳಬೇಕು. ಆತನು ತನ್ನ ಕಾಲು ಎಕರೆಯ ಬಗ್ಗೆ ಯೋಚಿಸುವಾಗ, ವರ್ಸೇಲ್ಸ್‌ನ ಸಾಲುಮರಗಳ ಬೀದಿಗಳನ್ನು ಲೆ ನೋತ್ರೆಯು ಗುರುತು ಹಾಕುತ್ತಿದ್ದಂತೆ, ತಾನೆ ಆತನೆಂದು ಭಾವಿಸಿಕೊಂಡು, ದೃಢ ಸಂಕಲ್ಪದಿಂದ ಯೋಜಿಸಬೇಕು.

ಯಾರಿಗೆ ಸೌಂದರ್ಯ ಮನೋಭಾವವಿರುತ್ತದೆಯೋ, ಅಂಥವರಿಗೆ ಉದ್ಯಾನವನ್ನು ರಚಿಸುವುದು ಮತ್ತು ಗಿಡ ನೆಡುವುದು, ಇನ್ನಾವ ಬಗೆಯಲ್ಲಿಯೂ ಹೊಂದಲಾಗದ, ಒಂದು ಸಫಲತೆ ಮತ್ತು ವಿದ್ಯಾಭ್ಯಾಸ. ವಿಶಿಷ್ಟ ಜ್ಞಾನವಿಲ್ಲದೆ, ಮನೆಕಟ್ಟಿದರೆ, ಅದರ ಪರಿಣಾಮ ಕೇಡಾಗಬಹುದು. ಮನೆ ಬೀಳಬಹುದು. ಆದರೆ ತನಗಿಷ್ಟ ಬಂದಷ್ಟು ತಪ್ಪುಗಳನ್ನು ಉದ್ಯಾನ ರಚಿಸುವಾಗ ಮಾಡಬಹುದು. ಅತ್ಯಂತ ಕೀಳು ಪರಿಣಾಮವೆಂದರೆ, ಬೇರೆಯವರು ಇವುಗಳಿಗಾಗಬಹುದಾದ ಖರ್ಚು, ಕಾಲ



ಚಿತ್ರ 4. ಒಂದು ಚಿಕ್ಕ ಗುಡ್ಡದಲ್ಲಿ ನೆಡುವಾಗ ಗಿಡ್ಡದಾದ, ನೆಲವನ್ನು ಅಪ್ಪುವ ಗಿಡಗಳು ಬೇಕೋ ಅಥವಾ ಎತ್ತರವಾದ ನೆಟ್ಟಗೆ ನಿಲ್ಲುವ ಗಿಡಗಳು ಬೇಕೋ ಎಂಬುದರ ಬಗ್ಗೆ ಕೂಲಂಕಷವಾಗಿ ಯೋಚಿಸಿ. ಮೊದಲನೆಯದು ಚೆನ್ನಾಗಿ ಕಾಣುವ ಸಂಭವ ಉಂಟು.

ಮತ್ತು ಕಷ್ಟಗಳ ಬಗ್ಗೆ ನೋಡಿ ನಗಬಹುದು.

ತನಗೆ ತಾನೆ ಉದ್ಯಾನ ಶಿಲ್ಪಿಯಾಗುವುದರಲ್ಲಿ ಒಂದು ಉಪಾಯವೆಂದರೆ, ತನ್ನ ತಪ್ಪುಗಳನ್ನು ತಿಳಿದು ಅದನ್ನು ಅನುಭವಿಸುವುದು. ವಿಮರ್ಶಾತ್ಮಕ ಮನೋಭಾವವನ್ನು ಶಾಶ್ವತವಾಗಿ ಉದ್ಯಾನದ ಬಗ್ಗೆ ಹೊಂದಿರುವುದು ಕಷ್ಟ. ತಪ್ಪುಗಳಾಗಿರುವುದನ್ನು ನಿರ್ಧರಿಸುವುದು, ದೊಡ್ಡ ನೆಲದುಬ್ಬರಗಳನ್ನು ವಿವೇಚನೆ ಇಲ್ಲದೆ ತೊಡೆದು ಹಾಕದೆ, ಬದಲಾವಣೆಗಳನ್ನು, ಹೊಂದಿಕೆಯನ್ನು, ಸರಿಯಾದ

ಹಂತಕ್ಕೆ ವ್ಯವಸ್ಥೆ ಮಾಡುವುದು. ಇವುಗಳೆಲ್ಲವೂ ಉದ್ಯಾನವನ್ನು ನಿರಂತರ ವ್ಯತ್ಯಾಸ ಹೊಂದುತ್ತಿರುವ ಸ್ಥಿತಿಯಲ್ಲಿ ಇಡುತ್ತದೆ.

ತನ್ನದೇ ಶೈಲಿಯನ್ನು ಯೋಜಿಸುವಾಗ, ತೋಟಗಾರನು ಗೊತ್ತುಗುರಿಯಿಲ್ಲದೆ ಆಕಾರಗಳನ್ನು ಆರಿಸಿ ಅವುಗಳನ್ನು ತನ್ನ ಉದ್ಯಾನದಲ್ಲಿ ಒಟ್ಟಾಗಿ ಒಗೆಯಬಾರದು. ಅವನ ದೃಷ್ಟಿ ಎಷ್ಟೇ ಕಾರಾರುವಾಕ್ಕಾಗಿರಲಿ ಮತ್ತು ಅವನ ಕೈ ಎಷ್ಟೇ ನಿಶ್ಚಿತವಾಗಿರಲಿ, ಪ್ರಾಚೀನ ವಿವಿಧ ಶೈಲಿಗಳ ಅಭ್ಯಾಸ, ಹಾಗೂ ಅವರು ಸಾಮಾಜಿಕವಾಗಿ, ಸೌಂದರ್ಯಾತ್ಮಕವಾಗಿ ಪಕ್ವತೆ ಗಳಿಸಲು ಸಹಾಯಕವಾದ ಸನ್ನಿವೇಶ – ಇವುಗಳ ಅಧ್ಯಯನ ಅವನಿಗೆ ಬಹಳಷ್ಟು ಸಹಾಯ ಮಾಡುತ್ತದೆ. ಇದನ್ನು ಸಂಪೂರ್ಣವಾಗಿ ಮಾಡದಿದ್ದಲ್ಲಿ, ಪ್ರಾಚೀನ ಶೈಲಿಗಳಿಂದ ಏನನ್ನೂ ಕಲಿತಂತಾಗುವುದಿಲ್ಲ. ಮುಂದೆ ಸಂಕ್ಷೇಪವಾಗಿ ಮತ್ತು ಸ್ಥೂಲವಾಗಿ ತಿಳಿಸುವ ಮುಖ್ಯ ಶೈಲಿಗಳ ವಿವರಣೆ, ವಾಚಕರಲ್ಲಿ ಕುತೂಹಲ ಹುಟ್ಟಿಸುವುದೆಂದು ಭಾವಿಸಲಾಗಿದೆ. ಇದರಿಂದಾಗಿ ಮುಂದೆ ಇನ್ನೂ ಹೆಚ್ಚಿನ ಗ್ರಂಥಗಳನ್ನು ವ್ಯಾಸಂಗ ಮಾಡಬಹುದು. ಪ್ರತಿಯೊಂದು ಶೈಲಿಯ ಒಳಗಿನ ತತ್ವಗಳನ್ನು ತಿಳಿದುಕೊಂಡ ನಂತರ, ತನ್ನ ಸ್ವಂತ ತೋಟದಲ್ಲಿ ಪೂರ್ಣ ನಂಬಿಕೆಯಿಂದ ಕೆಲಸ ಮಾಡಬಹುದು. ತನ್ನ ಇಚ್ಛೆಗೆ ಮತ್ತು ಅವಶ್ಯಕತೆಗೆ ಅನುಸಾರವಾಗಿ, ಸ್ಥಳೀಯ ಪರಿಸ್ಥಿತಿಗಳಿಗೆ ಅನುಗುಣವಾಗಿ ಯಾವುದು ಸೂಕ್ತವೋ ಅದನ್ನು ಸೃಷ್ಟಿಸಬಹುದು.

ಪರ್ಷಿಯನ್ನರ ಮತ್ತು ಜಪಾನೀಯರ ಉದ್ಯಾನ ಶೈಲಿಗಳು ದೇವಲೋಕದ ಬಗ್ಗೆ ತಮ್ಮ ತಮ್ಮ ಭಾವನೆಗಳನ್ನು ಸ್ಪಷ್ಟಪಡಿಸಲು ಪ್ರಯತ್ನಿಸುತ್ತವೆ. ಅವರೆಡೂ ಪೃಥ್ವಿಯ ಮೇಲಿನ ಸ್ವರ್ಗಗಳೆಂಬುದು ಅವರ ಉದ್ದೇಶ, ಆದಾಗ್ಯೂ ಅಂತಿಮ ನೋಟದಲ್ಲಿ ಯಾರ ಎರಡು ಶೈಲಿಗಳು ಭಿನ್ನವಾಗಿರಲಾರವು. ಒಂದು ಪೂರ್ಣವಾಗಿ ಕೃತಕ, ಕ್ರಮಬದ್ಧ, ನೇರ ರೇಖೆಗಳ ಮತ್ತು ಸಮಕೋನ ಯುಕ್ತ ರಚನೆ; ಇನ್ನೊಂದು ಪ್ರಕೃತಿಯ ಅತ್ಯಂತ ಸಾರವತ್ತಾದ ಭಾಗವನ್ನು ಸೆರೆಹಿಡಿಯುವ ಪ್ರಯತ್ನ. ಪ್ರದೇಶ ಲಕ್ಷಣ ಮತ್ತು ಪ್ರಕೃತಿಯ ಸ್ಥಳ ಲಕ್ಷಣದ ಡೊಂಕುಗಳ ಮತ್ತು ಅದನ್ನು ಹೊಡಿದ ಸಸ್ಯ ವರ್ಗಗಳನ್ನು ಅನುಕರಿಸುವುದು. ಆದಷ್ಟು ಮಟ್ಟಿಗೆ ನೈಜಿಕ ವಸ್ತುಗಳಾದ, ಮರ, ಕಲ್ಲು, ಮರಳು, ಮಣ್ಣು ಮತ್ತು ಸಸ್ಯಗಳನ್ನು ಉಪಯೋಗಿಸಿ ಪ್ರಕೃತಿಯ ಸ್ಫೂರ್ತಿಗೊಂಡ ವೇಳೆಯಲ್ಲಿ ಮಾಡಿದಂತೆ ಅವುಗಳನ್ನು ಅಳವಡಿಸುತ್ತವೆ. ಪರ್ಷಿಯನ್ನರ ಶೈಲಿ ಜಾಣ್ಮೆಯ ವಸ್ತುಗಳಾದ ಕೆತ್ತನೆ ಮತ್ತು ಕೊರೆದ ಅಮೃತಶಿಲೆ, ಕಲ್ಲು ಕೆಲಸ, ತಯಾರಾದ ಕಲ್ಲುಗಳು ಮತ್ತು ಅತ್ಯಂತ ಹೆಚ್ಚಾಗಿ ಮೆರಗು ಮಾಡಿದ ಗಾರೆಗಳನ್ನು ಉಪಯೋಗಿಸಿದೆ. ಪರ್ಷಿಯನ್ನರು ಗುಡ್ಡಗಾಡನ್ನು ಅಂತಸ್ತುಗಳನ್ನಾಗಿ ಕತ್ತರಿಸಿ, ಒಂದು ಬುಗ್ಗೆಯನ್ನು ಹಿಡಿದು, ನೇರವಾದ ನೀರಿನ ಮಾರ್ಗಗಳನ್ನು ಭೇದಿಸಿಕೊಂಡು ಮತ್ತು ಅಡ್ಡಲಾಗಿ ಹೋಗುವಂತೆ ಮಾಡಿ ಮತ್ತು ನೀರು ಪ್ರತಿಯೊಂದು ಕೌಶಲ ಚಲನೆಗಳನ್ನು ಒಳಗೊಳ್ಳುವಂತೆ ಮಾಡಿದರು. ಜಪಾನೀಯರು ಜಮೀನಿನ ಸ್ವಾಭಾವಿಕ ವಕ್ರಗಳನ್ನು ಅನುಸರಿಸಿದರು ಮತ್ತು ನೀರು ಸ್ವಾಭಾವಿಕ ತೊರೆಗಳಲ್ಲಿ ಹರಿಯುವಂತೆ ಅಥವಾ ಸ್ಥಬ್ಧವಾಗಿರುವಂತೆ ಎಡೆಗೊಟ್ಟರು.

ಸಂಕ್ಷಿಪ್ತವಾಗಿ ಹೇಳಬೇಕಾದರೆ, ಪರ್ಷಿಯನ್ನರು ಭೂಭಾಗದ ಮೇಲೆ ಹೆಚ್ಚು ವಿಶಿಷ್ಟ ಗುರುತನ್ನು ಹೇರಿದರು, ಕಟ್ಟು ಮಾಡಿದರು. ಸೌಂದರ್ಯದ ಬಗ್ಗೆ ತಮ್ಮ ಭಾವನೆಗಳನ್ನು ನಿಷ್ಠೆಯಿಂದ ಪರಿಪಾಲಿಸಿ, ಒಂದು ಗೊತ್ತಾದ ಗುರಿಗೆ ಬದಲಾಯಿಸಿದರು. ಜಪಾನೀಯರು ಪ್ರಕೃತಿಯನ್ನು ಪ್ರೇರಿಸಿ, ಅದರ ರೂಪ ಮತ್ತು ರಚನೆಗಳನ್ನು ಶುದ್ಧಗೊಳಿಸಿ, ಭೂ ದೃಶ್ಯದಲ್ಲಿ ಹುದುಗಿರುವುದನ್ನು ಬಹಿರಂಗಪಡಿಸಿದರು.

ಈ ಎರಡು ತರಹ ಉದ್ಯಾನಗಳು ಉದ್ಯಾನ ವಿನ್ಯಾಸದಲ್ಲಿನ ಎರಡು ಮುಖ್ಯ ಶೈಲಿಗಳನ್ನು ಪ್ರತಿನಿಧಿಸುತ್ತವೆ – ಕ್ರಮಬದ್ಧ ಅಥವಾ ಕೃತಕ ವಿಧದಲ್ಲಿ ಮಾನವ ತನ್ನ ಸಂಕಲ್ಪವನ್ನು ಮನಸ್ಸಿಗೆ ಬಂದಂತೆ ಹೇಳುತ್ತಾನೆ. ಆದರೆ ನೈಜಿಕ ಅಥವಾ ಭೂ ದೃಶ್ಯ ಶೈಲಿಯಲ್ಲಿ ಉದ್ಯಾನವು ಒಂದು ಆದರ್ಶ ಪ್ರಕೃತಿಯ ರೂಪವಾಗಿರುವಂತೆ ಪ್ರಯತ್ನಿಸುತ್ತದೆ. ಪರ್ಷಿಯ, ಇಟಲಿ ಮತ್ತು ಫ್ರೆಂಚ್ ತೋಟಗಳು ಹಿಂದಿನ ಪಂಥಕ್ಕೆ ಸೇರಿವೆ.

ಪರ್ಷಿಯನ್ ತೋಟಗಳ ಶುದ್ಧ ವ್ಯವಸ್ಥೆ ಮತ್ತು ಸಮತೆ ನೀರಿನ ಕಾಲುವೆಗಳ ಅವಶ್ಯಕತೆಯ ಮೇಲೆ ಆಧರಿಸಿವೆ. ನೀರು ಪ್ರತಿಯೊಂದು ಭಾಗದಲ್ಲಿಯೂ ಹರಿಯುತ್ತದೆ ಮತ್ತು ತಂಪುತನವನ್ನು ಮತ್ತು ಹೊಸ ಕಳೆಯನ್ನು ಕೊಡುವುದರಿಂದ ಇದು ನಿರೀಕ್ಷಿಸಿದ ಸ್ವರ್ಗದ ನೇರ ಭಾಷಾಂತರ. ಸ್ವರ್ಗದಲ್ಲಿ ತಂಪು ನೀರು ಹರಿಯುತ್ತದೆ. ಜೀವನದ ಸಂಕೇತಗಳಾದ ಹಣ್ಣಿನ ಮರಗಳನ್ನು ಮತ್ತು ಬದಲಾವಣೆಗೊಳ್ಳದ ಸೈಪ್ರೆಸ್ ಗಿಡಗಳನ್ನು – ಸಾವು ಮತ್ತು ನಿತ್ಯತೆಯ – ಸಂಕೇತವಾಗಿ ಒಂದಾದ ನಂತರ ಒಂದನ್ನು ಜಾಣ್ಮೆಯಿಂದ ನೆಡುತ್ತಿದ್ದರು. ಪರ್ಷಿಯಾದ ಉದ್ಯಾನ ಕ್ರಮಬದ್ಧ ಮತ್ತು ನಿಖರ. ನೋಡುವುದಕ್ಕೆ ಮತ್ತು ಇರಬೇಕಾದುದು ಹಾಗೆ, ತನ್ನ ಗೋಡೆಗಳ ಆಚೆ ಹಳ್ಳಿಗಾಡಿಗೆ ಅದು ವಿರೋಧವಾಗಿರುತ್ತದೆ. ಉದ್ಯಾನ ವಿನ್ಯಾಸದ ಈ ಭಾವ ರೂಪವನ್ನೇ ಮೊಗಲರು ತಮ್ಮೊಡನೆ ಭಾರತಕ್ಕೆ ತಂದರು. ಬಹುಶಃ ಮೊಗಲ್ ಉದ್ಯಾನಗಳ ಅತ್ಯಂತ ಸುಂದರ ಮಾದರಿ ಶ್ರೀನಗರದಲ್ಲಿರುವ ನಿಷಾದ್ ಬಾಗ್. ವಾಸ್ತವವಾಗಿ ವಸಂತದಲ್ಲಿ ಸ್ವರ್ಗಕ್ಕೆ ಸಮಾನವಾಗಿರುತ್ತದೆ. ಇಳಿಜಾರಿನ ನಿವೇಶನ, ಹಿಂಭಾಗದಲ್ಲಿ ಹಿಮಕಡಿದ ಬೆಟ್ಟಗಳು ಮತ್ತು ಮುಂಭಾಗದಲ್ಲಿ ದಾಲ್ ಸರೋವರ, ನಿಲ್ಲಲಾಗದ ಹರಿಯುವ ನೀರಿನ ಉಪಯೋಗ, ಅದರ ಚರಿತ್ರೆ ಮತ್ತು ಶಾಶ್ವತ ನೋಟ. ಇವರೊಡನೆ ಕಾಶ್ಮೀರದ ಗಾಳಿ ಮತ್ತು ಹವಾಗುಣ. ಇವು ಭಾರತದಲ್ಲಿ ಇನ್ನಾವ ಉದ್ಯಾನಕ್ಕೂ ಇಲ್ಲದಷ್ಟು ಮೋಹಗೊಳಿಸುವ ಸೌಂದರ್ಯವನ್ನು ನೀಡುತ್ತವೆ.

ಭಾರತದ ಮೈದಾನ ಪ್ರದೇಶಗಳಲ್ಲಿ ಉದ್ಯಾನ ಯೋಜನೆ ಚಪ್ಪಟೆಯಾದ ಭೂ ಪ್ರದೇಶಕ್ಕೆ ಅನುಗುಣವಾಗಿರುವಂತಿರಬೇಕು. ಕಾಲುವೆಗಳು, ಹಾದಿಗಳು, ಸೇರುಗುಗಳು. ವಿಶಾಲವಾದ ದೊಡ್ಡ ಚದರಗಳಿಂತಿದ್ದು, ಅದರಲ್ಲಿ ಪ್ರಾಯಶಃ ಹಣ್ಣಿನ ಮರಗಳನ್ನೋ ಅಥವಾ ಹೂ ಗಿಡಗಳನ್ನೋ ನೆಟ್ಟಿರಬಹುದು. ಇಂಥ ಅನೇಕ ಉದ್ಯಾನಗಳು ಸಮಾಧಿಗಳಿಗೆ ರೂಪಕಗಳಾಗಿದ್ದವು. ಕೆಲವಂತೂ ಬಹಳ ಅಲಕ್ಷ್ಯ

ಸ್ಥಿತಿಯಲ್ಲಿವೆ. ಆದರೂ ಕೂಡ ತಮ್ಮ ಗಾಂಭೀರ್ಯ ಮತ್ತು ಮಹಾ ವೈಭವವನ್ನು ಇನ್ನೂ ಉಳಿಸಿಕೊಂಡಿವೆ. ಅವುಗಳ ಭವ್ಯ ಪ್ರಮಾಣಗಳು, ಸಮತೋಲನ ಮತ್ತು ಉದ್ಯಾನ ವಾಸ್ತುಶಿಲ್ಪದ ಅಂದ, ಇವುಗಳೆಲ್ಲವೂ ಅಸಡ್ಡೆಯ ಸ್ಥಿತಿಯಲ್ಲಿದ್ದರೂ ಕೂಡ, ಒಂದು ತರಹ ವೈಶಿಷ್ಟ್ಯತೆಯನ್ನು ಕೊಡುತ್ತವೆ. ಪ್ರತಿಯೊಂದು ಉದ್ಯಾನದಲ್ಲಿಯೂ, ಅತ್ಯುತ್ತಮವಾಗಿ ಪರಿಷ್ಕರಿಸಿದ ವಾಸ್ತುಶಿಲ್ಪದ ಅನೇಕ ದೃಷ್ಟಾಂತರಗಳು – ಅಂದರೆ ಬಾರಾದರಿಗಳು, ಕಾಲುವೆಗಳು, ಬುಗ್ಗೆಗಳು, ಗೋಡೆಗಳು, ಹೆಬ್ಬಾಗಿಲುಗಳು, ಹಾದಿಗಳು, ಒಂದೊಂದು ವೇಳೆ ಸಮಾಧಿ ಅಥವಾ ಮಸೀದಿ – ಇವೆಲ್ಲವೂ ಸೊಗಸಾಗಿ ಕಟ್ಟಿದ್ದು ಮತ್ತು ಶಾಶ್ವತವಾಗಿ ನಿಂತಿವೆ. ಬಹಳ ಕಾಲದ ಹಿಂದೆ ಅದರ ಗಾರೆ ಮಾಯವಾಗಿದ್ದರೂ, ಆಕಾರವನ್ನು ಉಳಿಸಿಕೊಂಡಿವೆ. ತಮ್ಮ ಹಿಂದಿನ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಹಾಗೆ ಕಾಣುವಂತೆ ಮಾಡಲು ಹಾಗೂ ಇವುಗಳಲ್ಲಿ ಪುನಃ ಗಿಡಗಳನ್ನು ನೆಡಲು ಅಷ್ಟು ಹೆಚ್ಚಿನ ಪ್ರಯಾಸ ಬೇಕಾಗಿಲ್ಲ.

ಉದ್ಯಾನದ ಶೈಲಿಯನ್ನು ರಚಿಸುವುದು ತುಲನಾತ್ಮಕವಾಗಿ ಸುಲಭ; ಆದರೆ ನಿರ್ಮಿಸಲು ದುಬಾರಿಯಾಗಬಹುದು. ಕೆಲವು ನಿರ್ದಿಷ್ಟ ತತ್ವಗಳು – ಸಾಮಂಜಸ್ಯ ನೀರಿನ ಕಾಲುವೆಗಳು, ಹೂಪಾತಿ ಮತ್ತು ಅಂತಸ್ತುಗಳು, ಸುತ್ತುಗಟ್ಟಲ್ಪಟ್ಟ ಗೋಡೆಗಳು. ಹೆಬ್ಬಾಗಿಲುಗಳು, ಯೋಜಿತ ಕ್ರಮದ ಕೆಲಸ. ವಾಸ್ತುಶಿಲ್ಪಿ ಬಹಳ ಮುಖ್ಯವಾಗಿ ತೀರ್ಮಾನಿಸಬೇಕಾದ ಅಂಶವೆಂದರೆ ಸಮತೋಲನ ಅಥವಾ ಸಮತೆ. ಮನುಷ್ಯ ನಿರ್ಮಿತ ವಸ್ತುಗಳ ಅಳತೆ ಮತ್ತು ಪ್ರಮಾಣಗಳು ತಪ್ಪಾದರೆ ವಿಸ್ತಾರವಾಗಿ ಮಾಡಿದ ಉದ್ಯಾನ ವಿಫಲವಾಗಬಹುದು. ಮಾನದಂಡದ ಬಗ್ಗೆ ಮೊಗಲರಿಗೆ ಅಸಮಾನ್ಯ ದೃಢ ದೃಷ್ಟಿ ಇದ್ದಿರಬೇಕು. ಅಂಥ ಉದ್ಯಾನಗಳು ಬಹುಮಟ್ಟಿಗೆ ಸೂಕ್ಷ್ಮ ವಿವರ ಮತ್ತು ಚಾತುರ್ಯತೆಯ ಮೇಲೆ ಆಧಾರಪಡುತ್ತವೆ. ಅಂದಿನ ಉದ್ಯಾನಗಳು ಯಶಸ್ವಿಯಾಗುವುದಕ್ಕೆ ಕಾರಣವಾದ ಕಾರ್ಯ ಕೌಶಲ, ಮೇಲ್ವಿಚಾರಣೆಗಳಂತಹುವನ್ನು ಪುನರುಜ್ಜೀವನಗೊಳಿಸುವುದು ಸಾಧ್ಯವೆ ಎಂಬುದು ಯೋಚಿಸಬೇಕಾದ ಪ್ರಶ್ನೆ.

ಸ್ಮಾರಕಕ್ಕೆ ರೂಪವನ್ನು ಕೊಟ್ಟಾಗ ಮಾತ್ರ, ಮೊಗಲ್ ಉದ್ಯಾನಗಳು ಅತ್ಯಂತ ಯಶಸ್ವಿಯಾಗುತ್ತವೆ. ಆಗ ಉದ್ಯಾನ ಮತ್ತು ಕಟ್ಟಡ ಏಕಾಂಶವಾಗುತ್ತವೆ. ಏಕೆಂದರೆ ಇವೆರಡರ ರಚನೆ ಒಂದೇ ಪ್ರೇರಿತ ಭಾವನೆಯಿಂದ ಉತ್ಪತ್ತಿಯಾಗಿರುವುದರಿಂದ. ತನ್ನ ಸುತ್ತಲಿರುವ ಉದ್ಯಾನದಿಂದ ಸ್ಮಾರಕ ಬಹಳಷ್ಟು ಲಾಭವನ್ನು ಪಡೆಯುತ್ತದೆ. ಮತ್ತು ಅದೇ ಸಮಯದಲ್ಲಿ ಉದ್ಯಾನಕ್ಕೆ ಇನ್ನೊಂದರ ವಿಸ್ತರಣೆಯಾಗುತ್ತದೆ. ಹಲವು ವೇಳೆ ಜಪಾನೀ ಮಂದಿರಗಳ ಬಗ್ಗೆಯೂ ಈ ತತ್ವ ನಿಜವೆನಿಸುತ್ತದೆ. ಅವುಗಳ ಸುತ್ತಲಿರುವ ಉದ್ಯಾನಗಳು, ಅಂಥದೇ ಮೌಲ್ಯಗಳ ಆಧಾರದ ಮೇಲೆ ರಚಿಸಲ್ಪಟ್ಟಿರುವುದರಿಂದ, ಶಾಂತತೆ ಮತ್ತು ಧ್ಯಾನಪರತೆ, ನಮ್ಮನ್ನು ಗೋಡೆಗಳ ಆಚೆ, ಹೊರಗಿನ ವಿಶಾಲ ಕ್ಷೇತ್ರಗಳಿಗೆ ಕೊಂಡೊಯ್ಯುತ್ತವೆ.

ರಚನೆಯ ಅಂದದ ಬಗ್ಗೆ, ಮೊಗಲರ ಸೂಕ್ಷ್ಮ ತಿಳುವಳಿಕೆ, ಅವರು ನೀರನ್ನು ಉಪಯೋಗಿಸುತ್ತಿದ್ದ ರೀತಿಗಳಿಂದ ಗೊತ್ತಾಗುತ್ತದೆ. ಆಳವಾದ ನಿಶ್ಚಲ ಕೊಳಗಳು,

ಸಾಮೂಹಿಕ ಆದರೆ ಸೊಗಸಾದ ಸರಣಿಯಲ್ಲಿರುವ ನೀರ ಬುಗ್ಗೆಗಳಿಂದ ಹೊರಸೂಸುವ ತೆಳುವಾದ ತುಂತುರುಗಳು, ರೂಪಿಸಿದ ಅಮೃತ ಶಿಲೆಯ ಮೇಲೆ ಬಿದ್ದ ನೀರಿನಿಂದ ಉಂಟಾಗುವ ಕೋಮಲ ಅಲೆಗಳು, ಆದರ ಹಿಂಭಾಗದಲ್ಲಿ ಕುಣಿಯುತ್ತಿರುವ ದೀಪಗಳಿದ್ದು ಇಳಿ ಹೊಸಲಿನಲ್ಲಿ ನೀರು ಬೀಳುವುದು – ಇವೆಲ್ಲವೂ ನೀರನ್ನು ಉಪಯೋಗಿಸುತ್ತಿದ್ದ ರೀತಿಗಳು. ಮೊಗಲರು ನೀರಿನಲ್ಲಿ ನಲಿದಾಡಿ, ಆಟವಾಡಿ ಇಂದ್ರಿಯ ಸುಖವನ್ನು ಅನುಭವಿಸಿದರು, ಅದಕ್ಕೆ ಸರಿಸಮಾನವಾದುದು ವಿರಳವೆಂದೇ ಹೇಳಬೇಕು. ಸೌಂದರ್ಯೋಪಾಸನೆಯಲ್ಲಿ ಮತ್ತು ಆಚಾರಾರ್ಥಕವಾಗಿ ಇವರೆಡರಿಂದಲೂ, ಅವರು ಉತ್ಕೃಷ್ಟವಾದುದನ್ನು ನೀರಿನಿಂದ ಪಡೆದರು. ಏಕೆಂದರೆ ನೀರಿನ ಅನೇಕ ಕಾರ್ಯಗಳು ಅತ್ಯಂತ ತಂಪಾದ ಪರಿಣಾಮವನ್ನು ಉಂಟು ಮಾಡುತ್ತಿತ್ತು. ಇಂತಹದು ಉತ್ತರ ಭಾರತದ ಮೈದಾನ ಪ್ರದೇಶಗಳಲ್ಲಿ ಬಹಳ ಅಮೂಲ್ಯವಾದದ್ದು. ನೀರಿನ ನೋಟದ ಪರಿಣಾಮವೇ ತಂಪನ್ನುಂಟು ಮಾಡುತ್ತದೆ. ನೀರು ಅಂದರೆ ಚಲನೆ: ಗಾಳಿ ನೀರಿನ ಮೇಲೆ ಬೀಸಿದಾಗ ಎರಡರಷ್ಟು ತಂಪು: ಸೌಮ್ಯವಾಗಿ ಬೀಳುವ ನೀರು, ಉದ್ಯಾನದ ಅನೇಕ ಭೋಗಗಳಿಗೆ ಇನ್ನೊಂದು ಪ್ರಮಾಣವನ್ನು ಸೇರಿಸುತ್ತದೆ. ನೀರಿಲ್ಲದೆ, ಕಲ್ಲು, ಮರಳು, ಒರಟು ಕಲ್ಲು ಮತ್ತು ಮಾಂಸಲಗಳನ್ನು ಉಪಯೋಗಿಸಿ, ಒಂದು ಉದ್ಯಾನವನ್ನು ಸೃಷ್ಟಿಸುವುದು ಅಸಾಧ್ಯವೇನಲ್ಲ; ಆದರೆ, ಹರಿಯುವ ನೀರನ್ನು ಅಮಿತವಾಗಿ ಉಪಯೋಗಿಸದಿದ್ದರೆ, ಅಷ್ಟೊಂದು ಭೋಗಾಸಕ್ತಿಯನ್ನು, ಯಾವ ಉದ್ಯಾನವೂ ಕೊಡಲಾರದೆಂಬ ಭಾವನೆಯನ್ನು ಮೊಗಲರು ಹೊಂದಿದ್ದರು.

ಇತರೆ ಮೊಗಲರ ಉದ್ಯಾನಗಳು ಗಮನ ಪಡೆಯದೆ ಕ್ಷೀಣಿಸಿ ಒಣಗುತ್ತಿರುವಾಗ ನಿಷಾದ್ ಮತ್ತು ಷಾಲಿಮಾರ್ ಉದ್ಯಾನಗಳನ್ನು, ಸೌಂದರ್ಯೋಪಾಸಕರಾದ ಕಾಶ್ಮೀರಿಗಳು ನಿಷ್ಠೆಯಿಂದ ಪೋಷಿಸುತ್ತಿದ್ದಾರೆ. ಪ್ರತಿ ವಸಂತ ಋತುವೂ, ಎಡಬಿಡದ ಅಲೆಗಳಂತೆ ಪುಷ್ಪಗಳ ಆಗಮನವನ್ನು ಕಾಣುತ್ತಾ, ಶರತ್ಕಾಲದವರೆಗೂ, ಉದ್ಯಾನಗಳನ್ನು ಬಣ್ಣ ಬಣ್ಣಗಳಿಂದ ಪ್ರಜ್ವಲಿಸುತ್ತಿರುತ್ತದೆ. ದೊಡ್ಡ ಚಿನಾರ್ ಮರಗಳು – ಪ್ರಾಯಶಃ ಶತಮಾನಗಳಷ್ಟು ಹಳೆಯದು – ಸ್ಥಿರತೆ ಮತ್ತು ಪಕ್ವತೆಯ ನೋಟವನ್ನು ಉದ್ಯಾನಗಳಿಗೆ ಬೀರುತ್ತವೆ. ಶರತ್ಕಾಲದಲ್ಲಿ ಅವುಗಳ ಕೆಂಪು ಮತ್ತು ಹಳದಿ ಎಲೆಗಳಿಂದ ಪ್ರಭಾವಿತವಾಗಿ, ಕುತೂಹಲ ನಾಭಿ ಬಿಂದುಗಳಾಗಿರುತ್ತವೆ. ನಮ್ಮಂತಹ ಕೆಲವರು ಇಂದು ಉದ್ಯಾನಗಳನ್ನು ನಿರ್ಮಿಸಲು ಹೆಣಗಾಡುತ್ತಿರುವಾಗ ಕೆಲವು ಸರಳ ಪಾಠಗಳನ್ನು ಮೊಗಲರಿಂದ ಕಲಿಯಬಹುದು. ಮೊದಲನೆಯದಾಗಿ, ವಿವಿಧ ಕಲ್ಲು ಕೆಲಸಗಳ ಮತ್ತು ಮಾನವ ನಿರ್ಮಿತ ವಸ್ತುಗಳ ಶ್ರೇಷ್ಠತೆ ಮತ್ತು ವಿನ್ಯಾಸಗಳ ಪ್ರಾಮುಖ್ಯತೆ. ಅವರ ತೋಟಗಳಿಗೆ ಸೊಬಗು ಮತ್ತು ಸುಸ್ಥಿರತೆಯನ್ನು ಕೊಡುವ, ಕೊರೆದ ರಂಧ್ರಗಳಿಂದ ಕೂಡಿದ ಜಾಲಿ ಗೋಡೆ ಮತ್ತು ಕಟಕಟೆಗಳ ಸೊಬಗನ್ನು ನಾವು ಸರಿದೂಗಿಸಲಾರೆವು. ಆದರೂ ಸರಳವಾದ, ಕೃತ್ರಿಮವಿಲ್ಲದ ಸಾಮಗ್ರಿಗಳನ್ನು ಜಾಗರೂಕ ಪ್ರಮಾಣದಲ್ಲಿ ಉಪಯೋಗಿಸಬಹುದು. ಯಾವುದೇ ನಿಕೃಷ್ಟವಾದ ಮತ್ತು ಅಬದ್ಧವಾಗಿ ರಚಿಸಲಾದ ಸಾಮಾನು ಬೇರೆಡೆ ಕೀಳಾಗಿ

ಕಾಣಿಸುವ ಹಾಗೆಯೇ ತೋಟದಲ್ಲಿಯೂ ಕಾಣಿಸುವುದು. ನಿಜಸ್ಥಿತಿಯಲ್ಲಿ ಹೇಳಬೇಕಾದರೆ ಅದು ಇನ್ನೂ ಅಧಿಕ ಕೀಳಾಗಿ ಕಾಣಿಸುವುದು. ಏಕೆಂದರೆ ಅವು ಪ್ರಕೃತಿ ನಿರ್ಮಿತವಾದ ವಸ್ತುಗಳ ಮಧ್ಯೆ ಸರಿಯಾಗಲಾರವು. ಆದುದರಿಂದ ಅಳಿದುಳಿದ ವಸ್ತುಗಳಿಂದ ಉದ್ಯಾನವನ್ನು ಮಾಡಲು ಪ್ರಯತ್ನಿಸಬೇಡಿ – ಅದು ಪರಿಣಾಮಕಾರಿಯಾಗಲಾರದು. ಎರಡನೆಯ ಪಾಠವೆಂದರೆ, ಹಣ್ಣಿನ ಗಿಡಗಳು ಅಲಂಕಾರದ ತೋಟಗಳಲ್ಲಿ ಬಹಳ ಯಶಸ್ವಿಯಾಗಿ ಮಿಲನಗೊಳ್ಳುತ್ತವೆಂಬುದು. ಸೀಬೆ, ಗಜನಿಂಬೆ, ಎಲ್ಲಾ ಜಾತಿಯ ಜಂಭೀರಗಳು, ಪೀಚ್, ಪ್ಲಮ್ ಹಣ್ಣಿನ ಗಿಡಗಳ ಆಕಾರ ಮತ್ತು ಗಾತ್ರ, ಇತರೆ ಪುಷ್ಪೀಯ ಹೊದರು, ಮರಗಳ ಜೊತೆ ಚೆನ್ನಾಗಿ ಹೊಂದಿಕೊಳ್ಳುತ್ತವೆ. ಅಂತಹವುಗಳನ್ನು ಏತಕ್ಕಾಗಿ ಪ್ರತ್ಯೇಕಿಸಿ ಮನೆಯ ಹಿಂಭಾಗದಲ್ಲಿ ನೆಡಬೇಕು?

ಮೂರನೆಯ ಪಾಠ ನೀರಿನ ದೃಶ್ಯತೆಯ ವಿಚಾರವಾಗಿ. ಹಿಂದಿನ ಕಾಲದ ಮೊಗಲರ ಉದ್ಯಾನಗಳಲ್ಲಿ ನೀರಿನ ಕಾಲುವೆಗಳು ಕಿರಿದಾಗಿದ್ದು, ಕಾರ್ಯನಿರತವಾಗಿದ್ದವು. ಹಾಗಾಗಿ ಅವಶ್ಯಕತೆ ಮತ್ತು ಅನುಕೂಲತೆಗಳಿಗನುಗುಣವಾಗಿ ನೀರನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ತರಬಹುದಾಗಿತ್ತು. ಹುಮಾಯೂನ್ ಸಮಾಧಿಯ ನಿವೇಶನದಲ್ಲಿರುವ ಬಹಳ ಕಿರಿದಾದ ನೀರಿನ ಕಾಲುವೆಗಳನ್ನು ಇಲ್ಲಿ ಗುಮನಿಸಿ. ಕಾಲಕ್ರಮದಲ್ಲಿ ಇಂತಹ ಅವಶ್ಯಕವಾಗಿ ಹರಿಯುವ ನೀರು, ಅಲಂಕಾರಿಕ ಕೃತಿಗಳಾಗಿ ರೂಪುಗೊಂಡವು. ಅಗಲ ಕಾಲುವೆಗಳು, ಇಳಿಗಾಲುವೆಗಳು, ಕಾರಂಜಿಗಳನ್ನು ತಾಜ್ ಮತ್ತು ಷಾಲಿಮಾರ್ ತೋಟಗಳಲ್ಲಿ ಗಮನಿಸಿ. ಖಂಡಿತವಾಗಿ ನಾವು ಕೂಡ ತೋಟದ ಕೆಲವು ಚದರ ಗಜಗಳ ಮೇಲೆ ಚಿಮುಕಿಸುವ ನೀರನ್ನು, ನಮ್ಮದೇ ಆದ ನಮ್ರ ಅಲಂಕಾರಿಕ ರೀತಿಯಲ್ಲಿ ಕಾಣುವ ಹಾಗೆ ಏರ್ಪಡಿಸಬಹುದು.

ಪುನರುಜ್ಜೀವನ ಕಾಲದಲ್ಲಿ ಕಾಣಿಸಿಕೊಂಡ ಇಟಾಲಿಯನ್ ಶೈಲಿ ಮತ್ತು ಮೊಗಲ್ ಉದ್ಯಾನ ಶೈಲಿಗಳಲ್ಲಿ ಅನೇಕ ಹೋಲಿಕೆಗಳಿವೆ. ಸ್ವತಃ ಸಿದ್ಧವಾದ ಹೋಲಿಕೆಯೆಂದರೆ, ಎರಡು ಶೈಲಿಗಳಲ್ಲೂ ಭಾರವಾದ ಕಲ್ಲು ಕೆಲಸದ ರೂಪಕಗಳನ್ನು ಅತಿಯಾಗಿ ಉಪಯೋಗಿಸಿರುವುದು. ಅವುಗಳ ಕಲ್ಲು ಕೆಲಸದ ವೈಲಕ್ಷಣ್ಯಗಳು ಬಹಳ ಭಿನ್ನವಾಗಿದ್ದರೂ, ಅಲ್ಲಿನ ಕ್ಷೇತ್ರಗಳಲ್ಲಿ ಆಗ ಸಾಮಾನ್ಯ ಬಳಕೆಯಲ್ಲಿದ್ದ ವಾಸ್ತುಶಿಲ್ಪದ ರುಚಿಯ ಪ್ರತಿಬಿಂಬ ಮತ್ತು ಮುನ್ನಡೆ ಎಂದು ಹೇಳಬಹುದು. ಇಟಾಲಿಯನ್ನರು ಉದ್ಯಾನಗಳನ್ನು ತಮ್ಮ ಅರಮನೆಗಳ ಬಡಾವಣೆಯೆಂದು ಭಾವಿಸಿದರು. ಅವುಗಳನ್ನು ವಿನೋದ ಪ್ರದರ್ಶನಗಳಿಗಾಗಿ ದೊಡ್ಡ ಹೊರಾಂಗಣದ ಹಜಾರ ಮತ್ತು ತಮ್ಮಲ್ಲಿರುವ ಪ್ರತಿಮೆಗಳನ್ನು ತೋರಲು ಪ್ರದರ್ಶನಾ ಸ್ಥಳಗಳೆಂದು ಭಾವಿಸಿದರು. ಹೊರಾಂಗಣಗಳನ್ನು ಕಲಾ ಸಂಗ್ರಹಾಲಯಗಳನ್ನಾಗಿ ಉಪಯೋಗಿಸುವ ಕಲ್ಪನೆ ಅನೇಕ ಕಾಲಮಾನಗಳಲ್ಲಿ ಮತ್ತು ಅನೇಕ ಸ್ಥಳಗಳಲ್ಲಿ ಪುನರ್ ಸಂಭವಿಸಿದೆ. ಇಟಾಲಿಯನ್ ಉದ್ಯಾನ ಶೈಲಿಯ ಜೊತೆಗೆ ವಿಶಿಷ್ಟವಾಗಿ ಸಂಬಂಧಿಸಿದ ವೈಶಿಷ್ಟವೆಂದರೆ, ವಿವಿಧ ನೆಲಮಟ್ಟಗಳನ್ನು ಸಂಯೋಜಿಸುವ ಸ್ಥೂಲವಾದ, ವಿಕೃತ

ಸಾಲು ಮೆಟ್ಟಿಲುಗಳು. ಈ ಮೆಟ್ಟಿಲುಗಳ ಶೈಲಿಯ ಜೊತೆಗೆ ಕಲಶಗಳು, ನೀರಿನ ಬುಗ್ಗೆಗಳು ಮತ್ತು ಪ್ರತಿಮೆಗಳು ನಮ್ಮಲ್ಲಿ ಕೆಲವರಿಗೆ ಪರಿಚಯವಿದೆ. ಏಕೆಂದರೆ ಹಿಂದಿನ ಶತಮಾನದ ಅಂತ್ಯದಲ್ಲಿ ಬೊಂಬಾಯಿನ ಅನೇಕ ಐಶ್ವರ್ಯವಂತರ ದೊಡ್ಡ ಮನೆಗಳಲ್ಲಿ ಇಂತಹ ಅನುಕರಣವಿತ್ತು.

ವಾಸ್ತವಿಕತೆಯಲ್ಲಿ, ಇಟಾಲಿಯನ್ ಉದ್ಯಾನ ಶಿಲ್ಪಕಲೆಯ ಪ್ರಭಾವ, ಪಾಶ್ಚಿಮಾತ್ಯ ಪ್ರಪಂಚದ ಅನೇಕ ಕ್ರಮಬದ್ಧ ಉದ್ಯಾನಗಳಲ್ಲಿ ಕಾಣಬಹುದು. ಪ್ರಾಯಶಃ ಆಂಗ್ಲೇಯ ಭೂದೃಶ್ಯ ಶಿಲ್ಪಿಗಳು, ಉದ್ಯಾನಗಳು ಪ್ರಕೃತಿಯ ಶಾಂತವಾತಾರಣವನ್ನು ಪ್ರತಿಬಿಂಬಿಸಬೇಕೆ ವಿನಹ, ವಾಸ್ತುಶಿಲ್ಪಿಗಳ ರಾಗೋದ್ರೇಕ ಕನಸುಗಳನ್ನಲ್ಲವೆಂಬ ಅಸಾಧಾರಣ ಸಲಹೆಯನ್ನು ಮುಂದಿಟ್ಟಾಗ, ಇದರ ಬಿಗಿಹಿಡಿತ ಕಳಚಿ ಬಿದ್ದಿರಬೇಕು. ಇಟಾಲಿಯನ್ ಉದ್ಯಾನಗಳ ಅತ್ಯಂತ ದೊಡ್ಡ ಶ್ರೇಷ್ಟತೆಯೆಂದರೆ, ಅದು ಮಧ್ಯಯುಗದ ಯೂರೋಪಿಗೆ ಸಮರ್ಪಿಸಿದ ಪ್ರಸ್ತಾಪ. ಅದರಂತೆ ಉದ್ಯಾನ ನಿರ್ಮಾಣವು ಇರಬೇಕಾದ ಮತ್ತು ಇರಬಹುದಾದ ಒಂದು ರಚನಾತ್ಮಕ ಮತ್ತು ಸುಸಂಸ್ಕೃತಾಭಿ ರುಚಿಯ ಅತಿದೊಡ್ಡ ಕಾರ್ಯ. ಇಟಾಲಿಯನ್ ಶೈಲಿಯ ತೋಟಗಳ ನಿವೇಶನಗಳನ್ನು ನಾವು ಇಷ್ಟಪಡುತ್ತೇವೆಯೋ ಇಲ್ಲವೋ, ಅಂತೂ ನಾವು ಒಪ್ಪಕೊಳ್ಳಬೇಕಾದ ಅಂಶವೆಂದರೆ ಈ ಉದ್ಯಾನಗಳು ಯೂರೋಪಿನಾದ್ಯಂತ, ತೋಟಗಾರಿಕೆ ಒಂದು ಗಣ್ಯಕಲೆ, ಇದಕ್ಕೆ ಎಚ್ಚರಿಕೆ ಮತ್ತು ಶ್ರದ್ಧೆ ಅವಶ್ಯಕವೆಂಬುದನ್ನು ಹರಡಿತು.

ಅರಮನೆ ಜೀವನಕ್ಕನುಸಾರವಾಗಿ, ಫ್ರೆಂಚ್ ಶೈಲಿ ಒಂದು ನೋವು ಭರಿತ, ಜಟಿಲ ಮತ್ತು ಕೃತಕ ಉದ್ಯಾನ ಶೈಲಿಯಾಗಿ ಹೊರಹೊರಟಿತು. ಇದು ಕ್ರಮಬದ್ಧತೆ ಮತ್ತು ನಿಖರತೆಯ ಸ್ವರೂಪಕ್ಕೆ ನಾಂದಿಯಾಯಿತು. ಆದರೂ, ಅವರ ದೊಡ್ಡ ಶಿಲ್ಪಾಚಾರ್ಯನಾದ ಲೆ ನೋತ್ರೆ ಅವರನ್ನು ಒಂದು ಮುಖ್ಯ ಕಾರಣಕ್ಕಾಗಿ ನೆನೆಸಿಕೊಳ್ಳಬೇಕು. ಆತನು ಪ್ರಪಂಚಕ್ಕೆ ಮಾನದಂಡದ ಗಾಢವಾದ ಭಾವನೆಗಳನ್ನು ಉತ್ತೇಜಿಸುವ ಶಕ್ತಿಯನ್ನು ತೋರಿಸಿದನು. ವರ್‌ಸೇಲ್ಸ್‌ನಲ್ಲಿಯ ಸಾಲುಮರಗಳ ಹಾದಿಗಳ ಬೃಹತ್ ಉದ್ದ ಮತ್ತು ಅಗಲ, ಈ ಅಂಶವನ್ನು ಒತ್ತಿ ಹೇಳುತ್ತದೆ. ಲೆ ನೋತ್ರೆಯ ಅಭಿಪ್ರಾಯ ಸೂಚಿಸುವಂತೆ, ದೇವರು ಹಲವು ವೇಳೆ ದೊಡ್ಡ ಸೇನೆಗಳ ಕಡೆ ಇರುವಂತೆ, ದೊಡ್ಡ ಉದ್ಯಾನಗಳ ಕಡೆಗೂ ಇರುತ್ತಾನೆ. ಒಂದು ಸಣ್ಣ ಅಳತೆಯ ಪ್ರಮಾಣದಲ್ಲಿ, ಆ ಸಾಲು ಮರದ ಬೀದಿಗಳು ಯಾವ ರೀತಿಯಲ್ಲೂ ಗಮನಾರ್ಹವಾಗಿ ಕಾಣುತ್ತಿರಲಿಲ್ಲ. ಆದರೆ ಇಂದಿನ ಅವುಗಳ ಮಾನದಂಡ ಪ್ರಮಾಣ ಮತ್ ಅಳತೆಯಲ್ಲಿದೆ ಅದರ ಅಖಂಡತ್ವ, ಭೂದೃಶ್ಯ ವ್ಯವಸ್ಥಿತ ಸಂಸ್ಥೆಯ ಅತ್ಯುತ್ತಮ ಕೌಶಲ್ಯದ ಕೃತಿಯಾಗಿದೆ. ಒಂದು ಸ್ಥಾಯೀ ನಿಯಮ ಪ್ರಕಾರ, 'ಫ್ರೆಂಚ್ ಉದ್ಯಾನ ಶೈಲಿ' ಎಂಬ ಪದ ಜಟಿಲ, ಸುರಳಿ ಸುತ್ತಿಕೊಂಡಿರುವ ಮಾದರಿಗಳನ್ನು ಹೂಪಾತಿಗಳಲ್ಲಿ ಬಹಳ ಸಮೀಪವಾಗಿ ನೆಡುವ ಅದ್ಭುತ ಕಾರ್ಯದ ದೃಷ್ಟಿಗಳನ್ನು ಬೀರುತ್ತದೆ. ಆದರೆ ವಾಸ್ತವವಾಗಿ, ಪ್ರಪಂಚದ ತೋಟಗಾರನಿಗೆ, ದೊಡ್ಡದಾಗಿ ಯೋಜನೆ ಮಾಡುವುದು, ನಿವೇಶನದ ವ್ಯಾಪ್ತಿಯನ್ನು, ಅವಿಚ್ಛಿನ್ನ ವಿಸ್ತಾರದ

ಮಾನದಂಡವನ್ನು ಪರಿಣಾಮಕಾರಿಯಾಗಿ ಉಪಯೋಗಿಸುವುದು – ಇವುಗಳ ಬಗ್ಗೆ ನಿಜವಾಗಿಯೇ ಫ್ರೆಂಚರು ತೋರಿಸಿಕೊಟ್ಟರು.

ಜಪಾನೀಯರ ಉದ್ಯಾನಗಳು ಬಹಳ ಪ್ರಾಚೀನವಾದುವು ಮತ್ತು ಭೂ ದೃಶ್ಯ ತೋಟಗಾರಿಕೆಯ ಮೂಲರೂಪ. ಅದರಲ್ಲಿ ಕನಿಷ್ಟ ವಾಸ್ತುಶಿಲ್ಪತೆ ಇದೆ. ಅದರ ಕ್ರಮಬದ್ಧತೆ, ನಿಷ್ಠುರ ಪ್ರಯತ್ನಗಳನ್ನು, 'ಅನಿಶ್ಚಿತವಾಗಿ ಕಾಣುವಂತೆ' ಹತೋಟಿಯಲ್ಲಿ ಇಡುವುದರಲ್ಲಿದೆ, ಜಪಾನೀಯರ ಉದ್ಯಾನಗಳು ಶತಮಾನಗಳಿಂದ ಬೆಳೆದು ಬಂದಿವೆ. ಅವುಗಳ ಧ್ಯೇಯ, ದೈವಭಕ್ತಿ ಮತ್ತು ಅಧ್ಯಾತ್ಮಿಕ ಧ್ಯಾನಗಳಿಗೆ ಮೀಸಲಾದ ಸ್ಥಳ ಎನ್ನುವುದರ ಬಗ್ಗೆ ಹೆಚ್ಚು ಹೆಚ್ಚಾಗಿ, ವಿಶದವಾಗಿ ಸ್ಫುಟಗೊಳಿಸಲಾಗಿದೆ. ಸೂಕ್ಷ್ಮವಾದ ಆಕಾರ ಕೊಟ್ಟಿರುವ ಗುಡ್ಡಗಳು, ಚಿತ್ತಾರದ ಗಿಡ್ಡ ಪೊದೆಗಳು, ಜಾಣ್ಮೆಯಿಂದ ಇಟ್ಟ ಕಲ್ಲು ಬಂಡೆಗಳು ಮತ್ತು ನಯವಾದ ಹುಷಾರಾಗಿ ಆರಿಸಿದ ಕಲ್ಲು ಮೆಟ್ಟಲುಗಳು, ಇದರ ಜೊತೆಗೆ ಕಠಿಣ ರೇಖೆಗಳ ಗೈರುಹಾಜರಿ ಮತ್ತು ಕಡಿದಾದ ಕೋನಗಳ ಅಭಾವ – ಇವೆಲ್ಲವೂ ನಿಶ್ಯಬ್ಧತೆಯ ವಾತಾವರಣ ಮತ್ತು ಶಾಂತತೆಯನ್ನು ಸೃಜಿಸುತ್ತವೆ. ಬರೀ ಸಜೀವ ಮತ್ತು ನಿರ್ಜೀವ ಉದ್ಯಾನ ವಸ್ತುಗಳನ್ನು ಚಮತ್ಕಾರಿಕವಾಗಿ ಆಡಿಸುವುದರಿಂದ, ಅಂಥ ಗಂಭೀರ ಪರಿಣಾಮ ಉಂಟಾಗಲಾರದು. ಇದು ನೂರಾರು ವರ್ಷಗಳ ಸೂಕ್ಷ್ಮಾಭಿರುಚಿ ಮತ್ತು ವಿಸರ್ಜನೆಯ ಫಲಿತಾಂಶ, ಭಟ್ಟಿ ಇಳಿಸಿದ ಜೀವನದ ಭ್ರಾಂತಿಗೊಳಿಸುವ ತತ್ವಶಾಸ್ತ್ರ ಭಾವ. ಜಪಾನೀಯರ ಶೈಲಿ, ನೂರಾರು ವರ್ಷಗಳಿಂದ ಒಂದೇ ರೀತಿಯಲ್ಲಿ ಅವಿರುದ್ಧವಾಗಿ ಬೆಳೆದು ಬಂದಿರುವ ಒಂದೇ ಶೈಲಿ. ಇತರೆ ಶೈಲಿಗಳು ಮೂಲಘಟಕದಲ್ಲಿಯ ಬದಲಾವಣೆಗಳನ್ನು ಹೊಂದಿವೆ ಅಥವಾ ಅವಿಶ್ವಾಸಗೊಂಡಿವೆ. ಜಪಾನೀಯರ ಶೈಲಿ ಜೀವಂತವಾಗಿ ಮುಂದುವರಿಯುತ್ತಿದೆ. ಮತ್ತು ಈಗಲೂ ಕೂಡ ರಾಷ್ಟ್ರೀಯ ಸೌಂದರ್ಯೋಪಾಸನೆ ಮತ್ತು ಆಧ್ಯಾತ್ಮಿಕ ಆತ್ಮ ಸಾಕ್ಷಿಯ ಮುಖ್ಯ ಅಂಶವಾಗಿವೆ.

ಜಪಾನಿನ ಸಾಂಪ್ರದಾಯಿಕ ಉದ್ಯಾನ, ಒಂದು ರೀತಿಯಲ್ಲಿ ಅತ್ಯಂತ ನಿಶ್ಚಲ ಉದ್ಯಾನ. ಗೊತ್ತು ಮಾಡಿದ ಸ್ಥಳದಲ್ಲಿ ವಿನಹ ಬೇರೆ ಸ್ಥಳದಲ್ಲಿ ಯಾವ ಎಲೆಯನ್ನೂ ಬೆಳೆಯಲು ಬಿಡುವುದಿಲ್ಲ. ಮತ್ತು ಇನ್ನೂ ಹೆಚ್ಚಾಗಿ ಅಲಂಕಾರಮಯವಾದ ಗಿಡ ರೂಪಗಳು, ಮುಖ್ಯವಾಗಿ ಹೊಳೆಯುವ ಹೂಗಳನ್ನು ಬಿಡುವ ಗಿಡಗಳನ್ನು ಅತಿ ಎಚ್ಚರಿಕೆಯಿಂದ ದೃಷ್ಟಿಗೆ ಬೀಳದಂತೆ ಇಡಲಾಗುವುದು. ಜಪಾನೀಯರ ಉದ್ಯಾನಗಳು ಬದಲಾಗದೆ ಶಕ್ತಿಶಾಲಿಯಾಗಿದೆ. ಏಕೆಂದರೆ ತನ್ನ ರೀತಿಯಲ್ಲಿಯೆ ಅದು ಪರಿಪೂರ್ಣತೆಯನ್ನು ಪಡೆದಿದೆ.

ಶತಮಾನಗಳ ನಿಧಾನ ಮತ್ತು ತೀಕ್ಷ್ಣ ಬೆಳವಣಿಗೆ, ಕೆಲವು ತತ್ವಗಳನ್ನು ಮತ್ತು ಕಟ್ಟಳೆಗಳನ್ನು ಪ್ರತಿಪಾದಿಸಿದೆ. ಇವುಗಳನ್ನು ಅಡ್ಡಮಾರ್ಗಕ್ಕೆ ಹೋಗದೆ ಪಾಲಿಸಿದರೆ ಪರಿಪೂರ್ಣಮಯವಾದ, ಕಲಾತ್ಮಕ ವಸ್ತು ಫಲಿತವಾಗುವುದು. ಜಪಾನಿ ಉದ್ಯಾನ ಕಲೆಯ ಆತ್ಮದಲ್ಲಿ, ಶಾಂತತೆಯ ವಾತಾವರಣಕ್ಕಾಗಿ ಒಂದು ಹೋರಾಟವಿದೆ. ಮತ್ತು ಶಾಂತತೆ, ನಿಜವಾದ ಸಮತೆಯಲ್ಲಿನ ಸ್ಥಿರತೆಯಿಂದ ಬರುತ್ತದೆಯೇ ಹೊರತು

ಎಂದಿಗೂ ಸರಳ ಜಡತೆ ಮತ್ತು ಚಲನೆಯ ಅಭಾವದಿಂದಲ್ಲ.

ಜಪಾನೀಯರ ಉದ್ಯಾನದಲ್ಲಿ ಹಲವು ಪಾಠಗಳಿವೆ, ಅದನ್ನು ನಾವೆಲ್ಲರೂ ಉಪಯೋಗಿಸಬಹುದು. ಬಹಳ ಮುಖ್ಯವಾದುದೆಂದರೆ, ಉದ್ಯಾನದಲ್ಲಿ ಶಾಂತತೆಯ ವಾತಾವರಣ ಇಲ್ಲದಿದ್ದರೆ, ಅದರಲ್ಲಿ ಇನ್ನೇನೂ ಇಲ್ಲ. ಜಪಾನೀಯರ ಉದ್ಯಾನದ ಸಂಪೂರ್ಣ ಗುರಿ, ಮನಸ್ಸಿಗೆ ವಿಶ್ರಾಂತಿ ಮತ್ತು ಶಾಂತತೆಯನ್ನು ಒದಗಿಸುವ ಒಂದು ಸ್ಥಳವಾಗಿರಬೇಕೆಂಬುದು. ಅವರ ಪ್ರಮುಖ ವಿಧಾನಗಳೆಂದರೆ- ಉದ್ದೇಶ ಪೂರಕವಾಗಿ ಮಾಡಿದ ಅಸಮರೂಪ ಭೂಮಿಯ ಆಕಾರಗಳು. ಯಾವುದೂ ಥಟ್ಟನೆ ಕಾಣದಂತೆ ಮಾಡುವುದು, ಎಲ್ಲ ಆಕಾರಗಳು ಗುಂಡಗೆ ಸೌಮ್ಯ ಭಾವವನ್ನು ತಾಳುವಂತೆ ಮಾಡುವುದು, ನಿಶ್ಚಲವಾಗಿರುವ ನೀರನ್ನು ಉಪಯೋಗಿಸುವುದು – ಮುಂತಾದ ಚೆನ್ನಾಗಿ ಪ್ರಯೋಗಿಸಿದ ಎಲ್ಲಾ ತಂತ್ರಗಳು, ಶಾಂತತೆಯ ಮನೋಭಾವವನ್ನು ಸೂಚಿಸುತ್ತವೆ. ಅದೇ, ಬಹಳ ಕಾಲದಿಂದ ನಿರ್ಲಕ್ಷಿಸಿದ ಮೊಗಲರ ಉದ್ಯಾನಗಳನ್ನು, ಕೆಲವು ವರ್ಷಗಳಲ್ಲಿ, ಅವುಗಳ ಕಠಿಣ ಪದಾರ್ಥಗಳ ದರ್ಜೆ ಮತ್ತು ಗಾತ್ರಗಳ ಸಹಾಯದಿಂದ, ಜೀವಿತಗೊಳಿಸಬಹುದು; ಇದರ ವ್ಯತಿರಿಕ್ತತೆ ಜಪಾನೀ ಉದ್ಯಾನಗಳಿಗೆ ಅನ್ವಯಿಸುತ್ತದೆ. ಯಾವ ಉದ್ಯಾನ ಅಷ್ಟೊಂದು ಸ್ವಾಭಾವಿಕ ಆಕಾರಗಳ ಮೇಲೆ ಅವಲಂಬಿಸಿದೆಯೋ, ಎಲ್ಲ ಗಿಡಗಳಿಗೆ ನಿಖರವಾದ ಸಮರಿಕೆ ಮತ್ತು ಆರೈಕೆ ಬೇಕೋ ಅಂಥವನ್ನು ಶಿಥಿಲವಾಗದಂತಿರಲು ಎಚ್ಚರಿಕೆಯಿಂದ ಪೋಷಿಸಬೇಕು. ವರ್ಣ ಚಿತ್ರದಂತೆ, ಜಪಾನಿ ಉದ್ಯಾನಗಳು ಹಲವು ವೇಳೆ ಮಹಾದೊಡ್ಡ ಕಲಾಕಾರನ ಏಕೈಕ ದೃಷ್ಟಿಕೋನ ಒಂದು ಸಲ ಶಿಥಿಲವಾಗುವುದಕ್ಕೆ ಬಿಟ್ಟರೆ, ತನ್ನ ಹಿಂದಿನ ಮೂಲಶಕ್ತಿಯನ್ನು ಸೆರೆಹಿಡಿಯಲು, ಅದನ್ನು ಪುನರ್‌ರಚಿಸಲು ಆಗುವುದಿಲ್ಲ. ಇದು ಜಪಾನೀಯರ ಖ್ಯಾತಿಗೆ ಸಲ್ಲಬೇಕಾದ ಗೌರವ. ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿನವರು ನಿರಂತರವಾಗಿ ಅಪಾರ ಶ್ರದ್ಧೆ ಮತ್ತು ಕಷ್ಟಗಳನ್ನು ಧಾರಾಳವಾಗಿ ತೆಗೆದುಕೊಂಡು, ಆದಿಯಲ್ಲಿ ಅದರ ಕರ್ತೃ ಹೇಗೆ ಭಾವಿಸಿದ್ದನೋ ಅದೇ ರೀತಿಯಲ್ಲಿ ತಮ್ಮ ಮಹಾ ಉದ್ಯಾನಗಳನ್ನು ದುರಸ್ತಿಯಲ್ಲಿಡಲು ಪ್ರಯತ್ನಪಡುತ್ತಾರೆ.

ಜಪಾನಿ ಶೈಲಿಯಲ್ಲಿ ಒಳಹುದುಗಿರುವ ಮೌಲ್ಯಗಳು ನಮ್ಮಿಂದ ನುಸುಳಿಕೊಂಡರೂ ಕೂಡ, ಮಾನವ ನಿರ್ಮಿತ ಉದ್ಯಾನ ವಸ್ತುಗಳ ಭವ್ಯರುಚಿಯನ್ನು ನಾವು ಸ್ವಲ್ಪವಾದರೂ ಅನುಕರಿಸಬಹುದು. ಹೆಬ್ಬಾಗಿಲ ಬೇಲಿ, ಲಾಂದ್ರ ಮತ್ತು ಗ್ರೀಷ್ಮ ಗೃಹಗಳ ರಚನೆ, ವಿವರಗಳ ಬಗ್ಗೆ ಅವರು ತೋರುವ, ಅತ್ಯಂತ ಆಸಕ್ತಿ, ನಮಗೆ ಅದು ಕಲಿಯಲು ಪಾಠವಾಗುತ್ತದೆ. ಅವರ ಉದ್ಯಾನ ರೂಪಗಳು ಪ್ರಕೃತಿಯ ಪ್ರಪಂಚಕ್ಕೆ ಸೇರಿದಂತೆ ಕಾಣುವುದಲ್ಲದೆ, ಸ್ವಾಭಾವಿಕ ಆಕಾರ ಮತ್ತು ಬಂಡೆಗಳಲ್ಲಿ ಲೀನವಾಗುತ್ತವೆ. ಪ್ರಾಸಂಗಿಕವಾಗಿ ಹೇಳುವುದಾದರೆ ಎಂಥದೇ ಬಣ್ಣ ಅಥವಾ ಕೃತಕ ವರ್ಣಗಳನ್ನು ಎಂದಿಗೂ ಉದ್ಯಾನಗಳಲ್ಲಿ ಉಪಯೋಗಿಸುವುದಿಲ್ಲ.

ಇನ್ನುಳಿದ ಒಂದು ಮುಖ್ಯ ಭೂ ದೃಶ್ಯ ಶೈಲಿಯೆಂದರೆ, ವಾಸ್ತವವಾಗಿ

ಆಂಗ್ಲೇಯರದು. ಅನೇಕ ವರ್ಷಗಳ ನಂತರ ತೋಟಗಾರಿಕೆ ಕ್ರೈಸ್ತ ಸನ್ಯಾಸಿ ಮಠಗಳನ್ನು ಬಿಟ್ಟು, ಜಹಗೀರುದಾರನ ಮನೆಯನ್ನು ಹೊಕ್ಕಿತು. ಆಂಗ್ಲೇಯ ಕುಲೀನರು ಯೂರೋಪು ದೇಶಗಳಿಂದ ಎರವಲು ಪಡೆದ ಶೈಲಿಗಳನ್ನು ನಿರ್ವಹಿಸಿದರು. ಸಾಮಾನ್ಯವಾಗಿ, ಹೆಚ್ಚು ವಿಶಿಷ್ಟ ವಾಸ್ತು ಶಿಲ್ಪಗಳುಳ್ಳ ಆಡಂಬರದ ಇಟಾಲಿಯನ್ ಶೈಲಿಯಿಂದ.

ಇವುಗಳಿಗೆ ಫ್ರೆಂಚರಿಂದ ಎರವಲು ಪಡೆದ ಕೆಲವನ್ನು ಸೇರಿಸಿದರು ಉದಾಹರಣೆಗೆ ಅವರ ಕ್ರಮಬದ್ಧ ವಿಸ್ತಾರವಾಗಿ ರಚಿಸಿದ ಪಾತಿಗಳು. ಇಂಥ ಒಂದು ವಿಚಿತ್ರವಾದ, ಪ್ರಕೃತಿ ಸಿದ್ಧ, ಒಂದೇ ಕಾಲದಲ್ಲಿ ಎಲ್ಲಾ ಕಲೆಗಳನ್ನು ಕಲಕುವ, ಭಾವೋದ್ರೇಕ ಆಂದೋಳನ ಹದಿನೆಂಟನೆಯ ಶತಮಾನದಲ್ಲಿ 'ಪ್ರಕೃತಿಗೆ ಹಿಂತಿರುಗಿ' ಎಂಬ ರೂಪದಲ್ಲಿ ಅಲ್ಲೋಲಕಲ್ಲೋಲವನ್ನುಂಟು ಮಾಡಿತು. ಕಲಿಗಳು, ಕರಣಿಕರು ಮತ್ತು ಕಲಾವಿದರು ಪ್ರಕೃತಿಯ ಸ್ವರೂಪಗಳ ಸೌಂದರ್ಯ ಮತ್ತು ಮೌಲ್ಯಗಳನ್ನು ಕಂಡು ಕೊಂಡು ಶ್ಲಾಘಿಸಲು ಹೊರಹೊರಟರು. ಕಂಡುಕೊಂಡ ಇನ್ನಿತರ ವಿಷಯಗಳೆಂದರೆ, ಐಶ್ವರ್ಯವಂತರ ಮನೆಗಳ ಸುತ್ತಲೂ ಅಷ್ಟೊಂದು ಖರ್ಚುಮಾಡಿ ಮತ್ತು ಚತುರತೆಯಿಂದ ನಿರ್ಮಿಸಿದ ಉದ್ಯಾನಗಳಿಗಿಂತ, ಆಂಗ್ಲೇಯ ಗ್ರಾಮೀಣ ಪ್ರದೇಶಗಳು ಬಹಳಷ್ಟು ಸುಂದರವಾಗಿರವುದು ಎಂಬುದು. ರೆಪ್ಟನ್ ಮತ್ತು ಬ್ರೌನ್ ಅಂಥ ವಾಸ್ತುಶಿಲ್ಪಿಗಳು, ಇಂಗ್ಲಿಷ್ ಉದ್ಯಾನಗಳು, ಗ್ರಾಮೀಣ ಪ್ರದೇಶಗಳ ಆದರ್ಶ ರೂಪದಲ್ಲಿ ಕಾಣಬೇಕೆಂಬ ಉದ್ದೇಶವನ್ನು ಕಲ್ಪಿಸಿಕೊಂಡರು. ಅಂತಸ್ತು – ಮೆಟ್ಟಲು ಮತ್ತೂ ನೀರಿನ ಬುಗ್ಗೆಗಳನ್ನು ತೆಗೆದುಹಾಕಿದರು ಮತ್ತು ಇಂಗ್ಲೆಂಡಿನ ಸ್ವಾಭಾವಿಕ ನೆಲಹೊದಿಕೆಯಾದ ಒರಟು ಹುಲ್ಲನ್ನು ಮನೆಯ ಗೋಡೆಗಳವರೆಗೂ ವಿಸ್ತರಿಸಿದರು.

ಉದ್ಯಾನವು ಸ್ವಾಭಾವಿಕ ಭೂ ದೃಶ್ಯದ ಒಂದು ಅಂಶವಾಗಿ ಕಾಣುವಂತೆ ಮಾಡುವ ಪ್ರಯತ್ನಗಳು, ನಿರ್ಮಾಣ ಸುಲಭವೆಂಬ ಅರ್ಥವಲ್ಲ; ವಾಸ್ತವವಾಗಿ ಅದು ಇನ್ನೂ ಕಷ್ಟವಾಯಿತು. ತುಲನಾತ್ಮಕವಾಗಿ, ಹಲವು ಪಡಿಯಚ್ಚು ಮಾದರಿಗಳನ್ನು ಕಟ್ಟುವುದು, ಚಚ್ಚೌಕ ಕ್ರಮಬದ್ಧ ಹುಲ್ಲುಹಾಸಿನ ಮಡಿಗಳನ್ನು ಮತ್ತು ಹೂಪಾತಿಗಳನ್ನು ಅಳತೆ ಮಾಡುವುದು ಸುಲಭ. ಆದರೆ ನಿವೇಶನದಲ್ಲಿ ತೆರಪುಗಳನ್ನು ಸೃಷ್ಟಿಸುವುದು, ದಟ್ಟವಾದ ಕೂಡಣೆ ಮತ್ತು ಬಂಧಗಳನ್ನು ಸಮತೋಲನಗೊಳಿಸುವುದು ಮತ್ತು ಮಾನದಂಡದ ಬಗ್ಗೆ ವ್ಯವಹರಿಸುವಾಗ, ಹೆಚ್ಚು ಪ್ರತಿಭಾ ಶಕ್ತಿ ಮತ್ತು ಯುಕ್ತಾಯುಕ್ತ ಪರಿಜ್ಞಾನವನ್ನು ತೆಗೆದುಕೊಳ್ಳುತ್ತದೆ, ಏಕೆಂದರೆ ಭೂದೃಶ್ಯ ಉದ್ಯಾನ ರಚನೆಯಲ್ಲಿ ಇವೆಲ್ಲವೂ ಅಡಕವಾಗಿವೆ. ತಯಾರಿಸಿದ ಉತ್ತರಗಳು ಇಲ್ಲದಿರುವಾಗ, ಪ್ರತಿಯೊಂದು ನಿವೇಶನದ ಸಮಸ್ಯೆಗಳನ್ನು ಅವ್ಯವಸ್ಥೆಯಿಂದಲೇ ಪ್ರಾರಂಭಿಸಬೇಕು ಮತ್ತು ಅಂತಿಮ ಆಯ್ಕೆಯನ್ನು ಅನೇಕ ಸಾಧ್ಯವಾದ ಸಂಯೋಜನೆ ಮತ್ತು ಪರಿವರ್ತನೆಗಳಿಂದ ಮಾಡಬೇಕು. ಹುಲ್ಲಿನ ಕ್ಷೇತ್ರಗಳನ್ನು ಮತ್ತು ಗಿಡಗಳ ಸೆರಗುಗಳೊಂದಿಗೆ ಪರ್ಯಾಯಗೊಳಿಸಬೇಕು. ವಸಂತ ಋತುವಿನ ಅನೇಕ ಪುಷ್ಪೀಯ, ನೈಜಿಕವಾಗಿ ಸಮೂಹಗಳಲ್ಲಿ ಬೆಳೆಯುವ ಜಾತಿಗಳನ್ನು ಈ ಸೆರಗುಗಳಲ್ಲಿ ಬೆಳೆಯುಲಾಗುವುದು. ಇವು ಇಂಗ್ಲಿಷ್ ಉದ್ಯಾನದ ಸಾಂಪ್ರದಾಯಿಕ ಲಕ್ಷಣಗಳಾಗಿವೆ.

ಆರಾಮವಾಗಿದ್ದ ಆಂಗ್ಲೇಯನು ಉದ್ಯಾನವನ್ನು ಶ್ರದ್ದೆ ವಹಿಸಿ ಮಾಡಿದನೆಂದು ಹೇಳಬೇಕಾಗಿದೆ. ವಿನ್ಯಾಸದ ಸಮಸ್ಯೆಗಳನ್ನು ಜಯಿಸಲು ಮಾಡಿದ ಪ್ರಯತ್ನಗಳ ಜೊತೆಗೆ, ಪ್ರಪಂಚದ ಬೇರೆ ಭಾಗಗಳಿಂದ ನೂರಾರು ಜಾತಿಯ ಗಿಡಗಳನ್ನು ತನ್ನ ದೇಶಕ್ಕೆ ತಂದನು. ಹತ್ತೊಂಬತ್ತನೆಯ ಶತಮಾನದಲ್ಲಿ ಇಂಗ್ಲಿಷ್ ತೋಟಗಳಲ್ಲಿ ಉಳಿದು, ಬೆಳೆಯುಬಲ್ಲ ಪುಷ್ಪೀಯ ಗಿಡಗಳಿಗೋಸ್ಕರ ಬ್ರಿಟಿಷ್ ಸಾಮ್ರಾಜ್ಯದ ಮೂಲೆಮೂಲೆಗಳನ್ನು ಶೋಧಿಸಿದರು. ನಮ್ಮ ಹಿಮಾಲಯ ಪರ್ವತಗಳೂ ಕೂಡ ಅನೇಕ ಗಿಡಗಳನ್ನು ಒದಗಿಸಿವೆ. ಇವು ಆಂಗ್ಲೇಯ ಭೂ ದೃಶ್ಯದಲ್ಲಿ ಸಂತೋಷವಾಗಿ ನೆಲಸಿವೆ. ಬಹಳ ಯಶಸ್ವಿಯಾದವುಗಳ ಪೈಕಿ ರೋಡೋ ಡೆಂಡ್ರಾನ್ ಒಂದು. ಅದರ ಪುಷ್ಪಗಳನ್ನುಳಿದು, ರೋಡೋ ಡೆಂಡ್ರಾನ್, ತನ್ನ ಒಟ್ಟುಗೂಡಿಸಿದ ಆಕಾರಕ್ಕಾಗಿ, ಭೂದೃಶ್ಯ ಉದ್ಯಾನಗಳಲ್ಲಿ ಬಹಳ ಉಪಯೋಗಕಾರಿ.

ಚೆನ್ನಾಗಿ ಪರಿಚಯವಿಲ್ಲದ ಪ್ರಪಂಚದ ಭಾಗಗಳಲ್ಲಿನ ವಿಚಿತ್ರ ಪ್ರಾಣಿಜೀವನ ಚರಿತ್ರೆಯನ್ನು ಅಧ್ಯಯನ ಮಾಡಲು ವಸಾಹತು ಉತ್ತೇಜಿಸಿತು. ಇದರಿಂದಾಗಿ ಸಸ್ಯಶಾಸ್ತ್ರಜ್ಞರು ಮತ್ತು ತೋಟಗಾರರು ತಮ್ಮ ತೋಟಗಳಿಗಾಗಿ ಹೊಸಗಿಡಗಳನ್ನು ಪಡೆದು ಪ್ರಯೋಗಗಳನ್ನು ಮಾಡಿದರು. ಇದು ತೋಟಗಾರಿಕೆ ಮತ್ತು ಉದ್ಯಾನ ಕಲೆಗಳನ್ನು ಎಲ್ಲೆಲ್ಲೂ ಎತ್ತಿ ಹಿಡಿಯುವಂತಾಯಿತು. ನನಗೆ ತಿಳಿದಂತೆ ನಿಜವಾಗಿಯೂ, ಎಲ್ಲರಿಗಿಂತಲೂ ಹೆಚ್ಚಾಗಿ ಆಂಗ್ಲೇಯರು ತೋಟಗಾರಿಕೆಯ ಪ್ರತಿಯೊಂದು ಅಂಶವನ್ನೂ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಪರಿಶೋಧಿಸಿದರು.

ಸ್ಪಷ್ಟವಾಗಿ, ಉದ್ಯಾನದ ಇಂಗ್ಲಿಷ್ ಭೂ ದೃಶ್ಯ ಶೈಲಿ ಪ್ರಪಂಚದಲ್ಲಿನ ಎಲ್ಲ ತೋಟಗಾರರ ಮೇಲೆ ಪ್ರಭಾವ ಬೀರಿತು. ಯಾವುದು ಒಳ್ಳೆಯ ಉದ್ಯಾನವನ್ನು ಮಾಡುತ್ತದೆ ಎಂಬುದರ ನಮ್ಮ ಇಂದಿನ ಭಾವನೆಗಳು, ಹದಿನೆಂಟನೆ ಶತಮಾನದ ಆಂಗ್ಲೇಯನ ಸ್ಪಷ್ಟಭಾವ ರೂಪಗಳ ಮೇಲೆ ಆಧಾರಿತವಾಗಿವೆ. ಅತ್ಯುತ್ತಮ ಮಾದರಿಗಳೆಂದರೆ ದೇವರು ಸೃಷ್ಟಿಸಿದ ಪ್ರದೇಶ ಲಕ್ಷಣ ಮತ್ತು ಭೂ ದೃಶ್ಯಗಳೆಂಬುದನ್ನು ಅವರು ಕಂಡುಕೊಂಡರು.

ಇಂಗ್ಲಿಷ್ ಉದ್ಯಾನದ ನೈಜಿಕ ಮೌಲ್ಯಗಳನ್ನು ಬ್ರಿಟಿಷರು ಭಾರತದಲ್ಲಿ ಆಚರಣೆಗೆ ತಂದರು. ಅನೇಕ ಆಂಗ್ಲ ಮಹಿಳೆಯರು ನಮ್ಮ ಗಿಡ ಸಂಪತ್ತನ್ನು ಇಂಗ್ಲಿಷ್ ಭಾವನೆಗಳೊಡನೆ ಬೆರೆಸಿ, ಸುಂದರವಾದ ಉದ್ಯಾನಗಳನ್ನು ಸೃಷ್ಟಿಸುವುದರಲ್ಲಿ ಜಯಶೀಲರಾದರು. ಆಗ ಯಾವ ನಿರ್ದಿಷ್ಟ ಶೈಲಿಯೂ ಇರಲಿಲ್ಲ. ಆದರೆ ಉತ್ತಮ ದೃಷ್ಟಿ ಮತ್ತು ಸುಖಾನುಭಾವದ ಪರಿಣಾಮಗಳನ್ನು ಸೃಷ್ಟಿಸಲು ಬೇಕಾಗುವ ತಂತ್ರಗಳ ಬಗ್ಗೆ ಅನುಭವ, ಬಹಳ ಯಶಸ್ವಿ ಉದ್ಯಾನಗಳನ್ನು ರಚಿಸಲು ಸಾಕಾಗಿತ್ತು. ಭಾರತದ ತೋಟಗಾರರು ಅನೇಕ ವೇಳೆ ಮನಸ್ಸಿನಲ್ಲಿ ನಿರ್ಧಾರ ಮಾಡದೆ, ಎರಡರ ಮಧ್ಯೆ ತೂಗಾಡುವರು. ಸಮರೂಪ ಮತ್ತು ಚಚ್ಚೌಕದ ಕಟ್ಟಳೆಗಳ ನೆನಪುಗಳು ಸದಾ ಬೆನ್ನು ಹತ್ತಿರುವಾಗ, ಮತ್ತು ಅನಿಶ್ಚಿತ ರೀತಿಯಲ್ಲಿ ತಮ್ಮದೇ ಆದ ವಿನ್ಯಾಸಗಳನ್ನು ರಚಿಸುವುದಕ್ಕೆ ಆವಶ್ಯಕವಾದ ಶಿಕ್ಷಣವಿಲ್ಲದೆ, ಅವರು ಜಗ್ಗದ, ಬೆಡಗಿಲ್ಲದ ತೋಟಗಳನ್ನು ನಿರ್ಮಿಸುತ್ತಾರೆ. ಅವು ತೋಟಗಾರಿಕೆಯ ಮಹಾ ಸಾಧನೆಗಳ

ಅಡಕಗಳಾದರೂ ಕೂಡ ಆಕರ್ಷವಾಗಿ ಕಾಣದೆ ವಿಫಲವಾಗುವವು.

ಯೂರೋಪಿನ ಹಲವಾರು ಇತರೆ ದೇಶಗಳು ತಮ್ಮದೇ ಆದ ನಿರ್ದಿಷ್ಟ ಶೈಲಿಗಳನ್ನು ಬೆಳೆಸಿದವು. ಮುಖ್ಯವಾಗಿ ವಿವರಗಳಲ್ಲಿ ಮಾತ್ರ ಅವುಗಳಲ್ಲಿ ವ್ಯತ್ಯಾಸಗಳಿವೆ. ಇತ್ತೀಚೆಗೆ ಸ್ವಿಡನ್ನಿನವರು ಭೂದೃಶ್ಯ ವಿನ್ಯಾಸದಲ್ಲಿ ತಮ್ಮ ಉಪಾಯ ಕೌಶಲವನ್ನು ತೋರಿಸಿದ್ದಾರೆ. ಇದರಲ್ಲಿ ವಿನ್ಯಾಸದ ಪ್ರತಿ ವಿಧದಲ್ಲೂ, ಸಾರ್ವತ್ರಿಕ ಶ್ರೇಷ್ಠತೆಯನ್ನೂ ಪ್ರತಿಪಾದಿಸಲಾಗಿದೆ. ಅವರ ತದೇಕ ಪ್ರಕೃತಿಯ ಬಗ್ಗೆ ಪ್ರೇಮ, ಪರಿಸರಗಳ ದರ್ಜೆ ಬಗ್ಗೆ ಆಸಕ್ತಿ ಇದರ ಜೊತೆಗೆ ಸೌಂದರ್ಯಾತ್ಮಕ ದೃಷ್ಟಿ – ಇವೆಲ್ಲವೂ ಅವರು ಅತ್ಯಧಿಕವಾಗಿ ಜಯಪ್ರದವಾಗುವುದಕ್ಕೆ ಕಾರಣಗಳು.

ಅನೇಕ ವಿಧಗಳಲ್ಲಿ ಉನ್ನತ ಮಟ್ಟದ ಶೈಲಿಯನ್ನು ಹೊಂದುವುದು ಅಪೇಕ್ಷಣೀಯ. ಪ್ರತಿಯೊಬ್ಬ ತೋಟಗಾರನು ಆಧಾರ ಕಟ್ಟುಗಳನ್ನು ಹೊಂದಿದ್ದರೆ ಮಾತ್ರ ಆಗ ಅವನ ತೋಟ ತನ್ನಷ್ಟಕ್ಕೆ ತಾನೆ ಕನಿಷ್ಠ ಸೊಗಸನ್ನು ಹೊಂದುತ್ತದೆ. ನಮ್ಮಲ್ಲಿ ಈಗ ಸರ್ವಸಮ್ಮತವಾದ ಶೈಲಿ ಇಲ್ಲದಿರುವುದರಿಂದ, ಪ್ರತಿಯೊಬ್ಬರೂ ಪ್ರಯೋಗಗಳನ್ನು ಮಾಡಲು ಮತ್ತು ಭಯಂಕರ ತಪ್ಪುಗಳಿಂದ, ಭೂ ದೃಶ್ಯವನ್ನು ಹಾಳು ಮಾಡಲು ಉತ್ತೇಜನ ಸಿಕ್ಕಿದಂತಾಗಿದೆ. ಸಾರ್ವಜನಿಕ ಭೂಮಿಯ ಮೇಲೆ, ತೆರಿಗೆದಾರನ ಹಣವನ್ನು ಸುರಿದು, ಇಂತಹ ತಪ್ಪುಗಳನ್ನು ಮಾಡಿದಾಗ, ವಿಷಯ ಬಹಳ ಗಹನವಾಗುತ್ತದೆ. ಸಾರ್ವಜನಿಕ ಉದ್ಯಾನಗಳ ರಚನೆಯನ್ನು, ಅನೇಕ ವೇಳೆ, ಹಿಂದೆ ಉದ್ಯಾನ ವಿನ್ಯಾಸದಲ್ಲಿ ಯಾವ ಪರಿಜ್ಞಾನವೂ ಇಲ್ಲದವರಿಗೆ ವಹಿಸುತ್ತಾರೆ; ಇದಕ್ಕಿಂತಲೂ ಕೀಳಾದದ್ದು ಸೌಂದರ್ಯೋಪಾಸನೆಗೆ ನಿಜ ದೃಷ್ಟಿ ಇಲ್ಲದಿರುವವರಿಗೆ ವಹಿಸುವುದು. ಅಂಥವರಿಂದ ನಿರ್ಮಿತವಾದ ಕಣ್ಣು ಬೇನೆಗಳೊಡನೆ ನಾವು ಜೀವಿಸಬೇಕಾಗಿದೆ. ಸಾರ್ವಜನಿಕ ಉದ್ಯಾನಗಳು ಸಾರ್ವತ್ರಿಕ ಅಭಿರುಚಿಯ ಮಟ್ಟವನ್ನು ಏರಿಸುವ ಬದಲು, ಇನ್ನೂ ಕೆಳಗಿಳಿಸುತ್ತವೆ.



## ಉದ್ಯಾನ ವಿನ್ಯಾಸದ ಘಟಕಾಂಶಗಳು

ಭೂಭಾಗದ ರೂಪ ಮತ್ತು ನೆಲ ಹೊದಿಕೆ
ಮರಗಳು
ಹೊದರುಗಳು
ಬಳ್ಳಿಗಳು

## ಜಾಗದ ಪ್ರಾಮುಖ್ಯತೆ



1. ಕಲ್ಲುಗಳಿಂದ ಆವೃತವಾದ ಗುಡ್ಡಗಾಡಿನ ಪ್ರಬಲ ವೈಶಿಷ್ಟ್ಯವನ್ನು ಗಿಡ ನೆಡುವಿಕೆ ಎತ್ತಿಕಾಣುವಂತೆ ಮಾಡುತ್ತದ.



2. ಸಮುದ್ರ ತೀರದ ಉದ್ಯಾನವನ್ನು ರೂಪಿಸಲು [illegible] ಒಂದು ಶ್ರೇಷ್ಠ ವಿಧಾನ. ಸಮುದ್ರದಲ್ಲಿ ಉಬ್ಬರವಾದಾಗ ಅಲೆಗಳು ಎಡಗಡೆ ಇರುವ ಮರಗಳವರೆಗೂ ಬರುತ್ತವೆ.



3. ಸುಂದರ ಭೂದೃಶ್ಯದ ಒಂದು ಮಾದರಿ. ಜಾಗರೂಕತೆಯಿಂದ ಸಿದ್ಧಪಡಿಸಲಾದ ಭೂಮಿಯ ಏರಿಳಿತ ಹಾಗೂ ಗಿಡಗಳ ನೆಡುವಿಕೆ ಸ್ವಾಭಾವಿಕ ಕಡಲು ತೀರದ ಕಲ್ಪನೆ ನೀಡಿದೆ.

ಹೆಚ್ಚು ಜಾಗದ ಭ್ರಮೆ ಉಂಟು ಮಾಡುವುದು



4. ಗಾತ್ರ ಮತ್ತು ತೆರಪಿನ ಮನೋಭಾವವನ್ನು ಮರಗಳ ಅಳತೆ ಸೂಚಿಸುತ್ತದೆ.





5. ಕಬ್ಬನ್‌ಪಾರ್ಕ್ (ಬೆಂಗಳೂರು) : ದೊಡ್ಡ ಮರಗಳನ್ನು ಸಾಮೂಹಿಕವಾಗಿ ಇರಿಸಿ, ಅಲ್ಲಲ್ಲಿ ಅಗಲವಾದ, ಬಹಿರಂಗ ಸ್ಥಳಗಳಿದ್ದರೆ, ತೆರಪಿನ ಭ್ರಮೆಯನ್ನು ನೀಡುತ್ತದೆ.



6. ನೆಡುವಿಕೆಯನ್ನು ಪಾರ್ಶ್ವಗಳಿಗೆ ಸೀಮಿತಗೊಳಿಸಿರುವುದರಿಂದ ಈ ಉದ್ಯಾನ ತಾನಿರುವುದಕ್ಕಿಂತ ಹೆಚ್ಚು ದೊಡ್ಡದಾಗಿ ಕಾಣುತ್ತದೆ.



7. ಅಗಲವಾಗಿ ಹಾಯ್ದಿರುವ ಡೊಂಕು, ತೆರಪಿನ ಮನೋಭಾವವನ್ನು ಹೆಚ್ಚಿಸುತ್ತದೆ. ಅಂತಸ್ತಿನ ಅಂಚಿನಲ್ಲಿ ನೆಡುವಿಕೆ ಇನ್ನೂ ಕೆಳಗಿರಿಸಿದ್ದರೆ, ಭ್ರಾಂತಿಯ ಭಾವ ಇನ್ನೂ ಹೆಚ್ಚಾಗಬಹುದಾಗಿತ್ತು.



8. ಇಲ್ಲಿ ಬಂಡೆಗಳ ಮಾನದಂಡ ತೆರಪಿನ ಮನೋಭಾವವನ್ನು ಮೂಡಿಸುತ್ತದೆ.



10. ಕೊಂಬೆ, ಎಲೆಗಳಿಗೆ ಆಕಾಶವು ಒಂದು ಒಳ್ಳೆಯ ಹಿನ್ನಲೆ.



11. ನೈಸರ್ಗಿಕ ಜಲದ ಅಧ್ಯಯನವು ಉದ್ಯಾನ-ಕೊಳ ನಿರ್ವಹಣೆಯ ಬಗ್ಗೆ ತಿಳಿಸಿಕೊಡುತ್ತದೆ.



12. ಸ್ವಾಭಾವಿಕ ಕಲ್ಲು ಪುಷ್ಪಗಳ ರಚನಾ ನಿರೂಪಣಕ್ಕೆ ನೆರವಾಗುತ್ತವೆ.



13. ನಯವಾದ ಹುಲ್ಲು ಎಂತಹ ಗಿಡ ವಸ್ತುವನ್ನಾದರೂ ಉತ್ತಮ ಸ್ಥಿತಿಯಲ್ಲಿ ಕಾಣುವಂತೆ ಮಾಡುತ್ತದೆ.

## ಮರ ನೆಲವನ್ನು ಸಂಧಿಸುವಲ್ಲಿ...



14. ಕಾಂಡದ ಸುತ್ತಲೂ ಯಾವುದನ್ನೂ ನೆಡದಿರುವುದು ಅತ್ಯಂತ ಉತ್ತಮ ವ್ಯವಸ್ಥೆ. ಈ ಚಿತ್ರ ಸ್ಥಳೀಯ ಜಾತಿ ಮರಗಳ ಕಾಂಡಗಳು ಸ್ವಾಭಾವಿಕ ನೆಲಹೊದಿಕೆಯಾದ ಒರಟು ಹುಲ್ಲಿನಿಂದ ಏಳುತ್ತಿರುವುದನ್ನು ತೋರಿಸುತ ದೆ.



15. ಇಲ್ಲಿ ವಿಶಿಷ್ಟವಾಗಿ ನೆಟ್ಟ ಹಣ್ಣಿನ ಮರಗಳು, ಒಳ್ಳೆ ದುರಸ್ತಿಯಲ್ಲಿಟ್ಟ ಹುಲ್ಲು ಹಾಸಿನ ಮೇಲೆ ನೆಲಸಿವೆ.



16. ಮರದ ಸುತ್ತಲೂ ಆಕರ್ಷಕ ರೀತಿಯಲ್ಲಿ ಗಿಡಗಳನ್ನು ನೆಟ್ಟಿರುವುದನ್ನು ಇಲ್ಲಿ ಕಾಣಿಸಿದೆ ಒಂದು ದೊಡ್ಡ ಹಳೆಯ ಮಾವಿನ ಮರದ ಅಡಿಯಲ್ಲಿ ಅಗಲವಾದ ಕ್ಷೇತ್ರದಲ್ಲಿ ಸ್ಪೈಡರ್ ಲಿಲ್ಲಿಗಳನ್ನು ನೆಡಲಾಗಿದೆ. ಇವುಗಳ ಹೊಳೆಯುವ ಎಲೆಗಳು, ಒರಟು ತೊಗಟೆಯನ್ನು ಎದ್ದು ಕಾಣುವಂತೆ ಮಾಡುತ್ತದೆ. ನೆಡುವಿಕೆಯ ಅಡ್ಡಳತೆ ಮರದ ಹರವಿನಷ್ಟು ಅಗಲವಾಗಿದೆ.



17. ಒಂದು ಸಣ್ಣ ಕಡಿದಾದ ಚಿಕ್ಕಗುಡ್ಡೆಯನ್ನು ಮರದ ಅಡಿಯಲ್ಲಿ ಹಾಕಿ, ಅದರಲ್ಲಿ ಮುಳ್ಳಿನ ನಾಶಮಾಡಲಾಗದ ವಸ್ತುಗಳನ್ನು ನೆಡುವುದು ಸಾಮಾನ್ಯವಾಗಿ ಮಾಡುವ ಒಂದು ತಪ್ಪು



18. ಮರದ ಸುತ್ತಲೂ ಸೂಕ್ತವಾದ ನೆಡುವಿಕೆಯ ಇನ್ನೊಂದು ದೃಷ್ಟಾಂತವನ್ನು ಇಲ್ಲಿ ಚಿತ್ರಿಸಲಾಗಿದೆ. ಈ ಸಡಿಲವಾದ, ನೈಜಿಕ ವ್ಯವಸ್ಥೆ, ಒಂದು ಚಿಕ್ಕ ಕಾಂಡದ ಸುತ್ತಲೂ ಸೂರ್ಯನ ಬೆಳಕನ್ನು ಸರಿಯಾದ ಕಾಲದಲ್ಲಿ ಹೀರುತ್ತದೆ.



19. 17 ರಲ್ಲಿ ತೋರಿಸಿದ ತಪ್ಪಿನ ಹೆಚ್ಚು ನೈಜತೆಯನ್ನು ಕೆಡಿಸುವ ಪರಿವರ್ತನೆ. ಗುಡ್ಡೆ ಇನ್ನೂ ಎತ್ತರ ಮತ್ತು ಗಾತ್ರದಲ್ಲಿ ಚಿಕ್ಕದು.



20. ಈ ಮರ ಒಂದನ್ನ ನೆಟ್ಟಾಗ ಅಷ್ಟು ಆಕರ್ಷಕವಾಗಿರುವುದಿಲ್ಲ. ಆದರೆ ಒತ್ತಾಗಿ ಒಂದು ಸಾಲಿನಲ್ಲಿ ನೆಟ್ಟರೆ, ಒಳ್ಳೆಯ ಗೋಡೆಯನ್ನು ಮಾಡಬಲ್ಲದು.



21. ಅನೇಕ ರೂಪ ಮತ್ತು ರಚನೆಗಳ ಸಂತುಷ್ಟಮಯ ಕೂಟ ಪಕ್ಕದ ಕಟ್ಟಡವನ್ನು ಮರೆಮಾಚುತ್ತದೆ.



22 ಛಾಯೆಯನ್ನು ಇಚ್ಛಿಸುವ ಏರು ಬಳ್ಳಿಗಳು ಮತ್ತು ಪೊದರುಗಳು ಒಂದಕ್ಕೊಂದು ಹೋರಾಡುತ್ತಾ ಕೆಲವು ಅನಿಷ್ಟ ಕಲ್ಲಿನ ಕಂಬಗಳನ್ನು ಸಂಪೂರ್ಣವಾಗಿ ಮರೆಮಾಚಿವೆ.



23. ಈ ಉದ್ಯಾನಗಳು ಅವುಗಳ ವರಿಣಾಮಕ್ಕೋಸ್ಕರ, ಮಾನದಂಡ, ಪ್ರಮಾಣ, ನಾಮಂಜಸ್ಯ ಮತ್ತು ಕುಶಲಕರ್ಮಿಯ ಕೆಲಸದ ಮೇಲೆ ಆಧಾರಿತವಾಗಿವೆ ಋತುಮಾನಗಳ ಬದಲಾವಣೆಗಳು ಅಲ್ಪ ಮಹತ್ವವುಳ್ಳದ್ದು.

24. ಗುಲಾಬಿಗಳನ್ನು ನೆಡಲು ನೆಲಗಟ್ಟು.



25 ಪ್ರಾಚೀನ ಉದ್ಯಾನ ಬೆಂಚು.



26. ನೀರಿನ ಕೊಳದ ಅಂಚಿನ ವಿವರಗಳು. ಕೊಳವನ್ನು ತುಂಬಿದರೆ ಸೆರಗಿನಲ್ಲಿ ಸೊಗಸಾದ ಚಿತ್ರ ವಟ್ಟಿಯ ಮಗ್ಗಲುಗಳು ಕಂಡುಬರುತ್ತವೆ.



27. ನಿರ್ಲಕ್ಷತೆಯ ನೋಟ.



8. ಮೊಗಲರ ಕೊನೆದಿನಗಳ ಉದ್ಯಾನ. ಔರಂಗಾಬಾದ್ ಜಿಲ್ಲೆಯಲ್ಲಿ ಸಮಗ್ರವಾಗಿ ಸುರಕ್ಷಿತವಾಗಿಡಲಾಗಿದೆ. ಈಗ ಇದನ್ನು ಪೌರಸಂಸ್ಥೆಯ ಉರ್ದು ಪಾಠಶಾಲೆಯನ್ನಾಗಿ ಉಪಯೋಗಿಸಲಾಗಿದೆ.



29. ಬಿಜಾಪುರದ ಸ್ಮಾರಕಗಳು ಮತ್ತು ಅವಶೇಷಗಳು. ಗಿಡ್ಡ ಹಸಿ ಬೇಲಿ ಮತ್ತು ಸರಳ ಸಸ್ಯ ಅಲಂಕರಣ ಕಲೆಯಿಂದ ಒಗ್ಗೂಡಿಸಲಾಗಿದೆ.

## ಸಾರ್ವಜನಿಕ ಜಾಗಗಳು



30. ಹಳೆಯ ಸಾರ್ವಜನಿಕ ಉದ್ಯಾನ.



31. ಈಗಿನ ಉದ್ಯಾನ.



32. ಒಂದು ಹಳೆಯ ರಸ್ತೆ...



33. ಈಗಿನ ರಸ್ತೆ... ಬಹು ಬೇಗ ಬೆಳೆಯುವ ಮರಗಳು ಆಲದಮರಕ್ಕೆ ಸಮನಾಗಲಾರವು.

# ಉದ್ಯಾನದ ಆರಂಭ



34. 1976ರಲ್ಲಿ ಇದ್ದ ಖಾಲಿ ಜಾಗ.



35. ಅದೇ ಜಾಗ ಆರು ವರ್ಷಗಳ ನಂತರ.



36. ಅದೇ ಜಾಗ 1984ರಲ್ಲಿ.



37. ಗಿಡ್ಡಾದ ಅಸಮತೆಯ ಗಿಡ ಸಮೂಹ, ಮನೆಯಿಂದ ಹೊರಡುವ ಹಾದಿಯನ್ನು ಸೂಚಿಸುತ್ತದೆ ಮತ್ತು ಹಣ್ಣಿನ ತೋಟಕ್ಕೆ ಬಲಗಡೆಗೆ ತಿರುಗುತ್ತದೆ.



38. ಹೆಚ್ಚು ಗಮನ ಬೇಕಿಲ್ಲದ ಲಂಟಾನ, ತೋಟದಲ್ಲಿ ಬಹಳ ಉಪಯುಕ್ತ.



39. ಈ ಚಿತ್ರದಲ್ಲಿ ಒಂದು ನೆರಳು ಗಡಿಯಾರ ಮತ್ತು ನಾಲ್ಕು ವಿಧವಾದ ಬಿಳಿ ಪುಷ್ಪಗಳಿವೆ. ಮುಂಭಾಗದಲ್ಲಿ ಒಂದು ಶ್ವೇತ ಲಂಟಾನ, ಮಧ್ಯದಲ್ಲಿ ಬೊಗೆನ್‌ವಿಲಿಯ ಮತ್ತು ಅದರ ಕೆಳಗೆ ಬಿಳಿ ವರ್ಬಿನದ ಡೊಂಕುಪಾತಿ, ಬಲಭಾಗದ ಮಧ್ಯದಲ್ಲಿ ಸ್ಪೈಡರ್ ಲಿಲ್ಲಿಗಳಿವೆ. ಹತ್ತಿರದಲ್ಲಿಯೇ (ಚಿತ್ರದಲ್ಲಿ ಕಾಣಲಾಗದ) ದೇವಕಣಿಗಲು ಮರಗಳ ಸಮೂಹ ಬಿಳಿ ಹೂಗಳಿಂದ ತುಂಬಿದೆ. ಜಾಣ್ಮೆಯಿಂದ ಯೋಜಿಸಿದ ವರ್ಣ ಸಂಯೋಜನೆ ಯಾವಾಗಲೂ ಮೆಚ್ಚುವಂತಿರುತ್ತದೆ.



40. ವಿವಿಧ ಗಿಡಗಳನ್ನು ಒಟ್ಟಾಗಿ ಬೆಳೆಸಿ ದಟ್ಟ ಕಾಡಿನ ಭ್ರಮೆಯನ್ನು ಉಂಟುಮಾಡಲಾಗಿದೆ. ಮರಗಳ ಹಿಂದೆ ಬಸ್ಸು ಓಡಾಡುವ ರಸ್ತೆ ಇದೆ.



41. ದಟ್ಟ ಕಾಡಿನ ಭ್ರಮೆಯನ್ನು ಉಂಟುಮಾಡುವ ಇನ್ನೊಂದು ಚಿತ್ರ.



42. ಮರಗಳನ್ನು ಜಾಗರೂಕತೆಯಾಗಿ ನೆಡುವುದರಿಂದ ಅರ್ಧ ಎಕರೆ ಜಾಗವನ್ನು ಇನ್ನೂ ವಿಶಾಲವಾಗಿ ಕಾಣುವಂತೆ ಮಾಡಬಹುದು.

# ಉದ್ಯಾನ ವಿನ್ಯಾಸದ ಘಟಕಾಂಶಗಳು

## ಭೂಭಾಗದ ರೂಪ ಮತ್ತು ನೆಲ ಹೊದಿಕೆ

ಮಕ್ಕಳು ವರ್ಣ ಚಿತ್ರಗಳನ್ನು ಬರೆದು ಯಾವ ಕಡೆಯಾದರೂ ತಗುಲಿ ಹಾಕುವುದಕ್ಕೆ ಉತ್ತೇಜನ ಕೊಡುವುದು ಸಂಪ್ರದಾಯವಾಗುವ ಮೊದಲು, ಭೂದೃಶ್ಯ ಚಿತ್ರಗಳನ್ನು ಬರೆಯುವಾಗ, ಕೆಳಗಿನ ರೇಖೆಯ ಡೊಂಕು ಬಹಳ ಮುಖ್ಯವಾದುದೆಂದು ನಮಗೆ ಕಲಿಸಲಾಗಿತ್ತು. ಇದು ಪ್ರತಿಯೊಬ್ಬ ತೋಟಗಾರನೂ ತಿಳಿಯಬೇಕಾದ ವಿಷಯ. ಇದನ್ನು ಅವನಿಗೆ ಮೊದಲು ಕಲಿಸಲಿಲ್ಲವಾದುದರಿಂದ, ನಿಧಾನವಾಗಿ, ಬಹಳ ಕಷ್ಟದಿಂದ ತನ್ನಷ್ಟಕ್ಕೆ ತಾನೆ ಕಂಡುಕೊಳ್ಳುತ್ತಾನೆ. ಭೂಮಿಯ ಮೇಲ್ಭಾಗದ ರೇಖೆಗಳು ಮೊದಲನೆಯದಾಗಿ ಬಹಳ ಮುಖ್ಯ. ಬಹಳ ಕಡಿದಾದ ಇಳಿಜಾರು, ಭೂಪಾತದೆಡೆ ಒಂದು ಅವ್ಯವಸ್ಥಿತ ಡೊಂಕು, ಸುಂದರವಾಗಬಲ್ಲ ಉದ್ಯಾನವನ್ನು ನಾಶ ಮಾಡಬಲ್ಲದು. ಭೂಮಿಯ ಮೇಲ್ಭಾಗದ ಆಕಾರ ಎಷ್ಟರಮಟ್ಟಿಗೆ ಉದ್ಯಾನದ ಸೊಗಸನ್ನು ಉಂಟು ಮಾಡಬಹುದು ಅಥವಾ ಹಾಳು ಮಾಡಬಹುದು ಎಂಬುದನ್ನು ನಾವು ನಂಬುವುದು ಕಷ್ಟ. ಅನೇಕ ವೇಳೆ ಅನುಭವ ಪಡೆದ ಮೇಲೆ, ಅಷ್ಟೊಂದು ಖರ್ಚು ಮಾಡಿ ನೆಲವನ್ನು ಶಿಲ್ಪಿಗೆ ಬೇಕಾಗುವ ಹಾಗೆ ಆಕಾರ ಮತ್ತು ಮಟ್ಟ ಮಾಡಿದ್ದು ಎಷ್ಟು ಅವಶ್ಯಕವೆಂಬುದು ಗೊತ್ತಾಗುತ್ತದೆ. ಬಹಳ ಚಿಕ್ಕ ಡೊಂಕುಗಳು, ಸಣ್ಣ ಗುಡ್ಡೆಗಳು ಮತ್ತು ಉಬ್ಬುಗಳನ್ನು ಒಂದು ಉದ್ಯಾನ, ಉದ್ಯಾನವಾಗಿ ಕಾಣಿಸಬೇಕಾದರೆ – ತಕ್ಕಮಟ್ಟಿಗೆ ಓರಣಗೊಳಿಸಬೇಕು.

ಸಂಪೂರ್ಣ ಮಟ್ಟವಾಗಿರುವ, ಯಾವ ಅಳತೆಯದೆ ಆಗಲಿ ಇರುವ ಉದ್ಯಾನ ಅಸಂಭವ. ಏಕೆಂದರೆ ಸಂಪೂರ್ಣ ಮಟ್ಟವಾಗಿರುವ ಭೂ ಪ್ರದೇಶ ಕೂಡ ಅಸಂಭವ. ಜಮೀನಿನ ಮಟ್ಟಗಳಲ್ಲಿ ವ್ಯತ್ಯಾಸಗಳು, ಅದು ಸಣ್ಣದಾಗಿರಬಹುದು ಮತ್ತು ನೋಡುವುದಕ್ಕೆ ಅಷ್ಟು ಪ್ರಾಮುಖ್ಯವಾಗಿಲ್ಲದಿರಬಹುದಾದರೂ ಇದ್ದೇ ಇರುತ್ತದೆ. ಎಲ್ಲಿ ಜಮೀನು, ಒಂದು ನಿರ್ದಿಷ್ಟ ದಿಕ್ಕಿಗೆ ಇಳಿಯುತ್ತದೋ, ಅಲ್ಲಿ ವಾಸ್ತವಿಕವಾಗಿ ಅದನ್ನು ಅಂತಸ್ತುಗಳನ್ನಾಗಿ ಕಡಿಯಬೇಕೋ ಅಥವಾ ಸುಂದರವಾದ ದುಂಡನೆಯ ಇಳಿಜಾರುಗಳನ್ನು ಮಾಡಬೇಕೋ ಅಥವಾ ಇವರೆಡನ್ನೂ ಸೇರಿಸಿ ಮಾಡಬೇಕೋ ಎಂಬುದರ ಬಗ್ಗೆ ತೀರ್ಮಾನ ಮಾಡಬೇಕಾಗುತ್ತದೆ. ಬಳ್ಳಿಯ ಇಳಿಜಾರು ಅಥವಾ ಪ್ರವಣತೆಯನ್ನು ಸೃಷ್ಟಿಸುವುದಕ್ಕೆ ಚತುರತೆಬೇಕು. ಅಂತಿಮವಾಗಿ ಪ್ರವಣತೆ

ಯಶಸ್ವಿಯಾಗಿದೆಯೋ ಇಲ್ಲವೋ ಎಂಬುದು ನೋಡುವವನ ದೃಷ್ಟಿಯಲ್ಲಿದೆ. ನನಗೆ ಇದರ ಬಗ್ಗೆ ಕಟ್ಟುನಿಟ್ಟಾದ ಕಾನೂನುಗಳ ವಿಷಯ ಗೊತ್ತಿಲ್ಲ. ಆದರೆ, ಇದು ಬಹಳ ಕಡಿದಾಗಿ, ಹಾಗೂ ಕೋನಯುತವಾದುದಾಗಿದ್ದರೆ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ.

ಜೀವ ಪರಿಸರ ಶಾಸ್ತ್ರಜ್ಞರು ನಮಗೆ ತಿಳಿಸುವಂತೆ 30 ಡಿಗ್ರಿ ಕೋನಕ್ಕಿಂತಲೂ ಕಡಿಮೆ ಇರುವ ಇಳುಕಲುಗಳಲ್ಲಿ ಹುಲ್ಲು ಬೆಳೆಸುವುದರಿಂದ ಮಣ್ಣನ್ನು ಹಿಡಿತದಲ್ಲಿ ಇಡಬಹುದು. ಆದರೆ ಬಹಳ ಕಡಿದಾದ ಇಳಿಜಾರುಗಳನ್ನು ಸುಧಾರಿಸಲು ಮರಗಳನ್ನೇ ಬೆಳಸಬೇಕು. ಪ್ರಾಯಶಃ ಈ ಸತ್ಯಾಂಶವನ್ನು ಅಭ್ಯಾಸದ ನೆಪ್ಪಾಗಿ ಉಪಯೋಗಿಸಬಹುದು ಮತ್ತು 30 ಡಿಗ್ರಿಗಳಿಗಿಂತಲೂ ಕಡಿಮೆ ಇರುವ ಇಳಿಜಾರುಗಳನ್ನು ಅಂತಸ್ತುಗಳನ್ನಾಗಿ ಮಾಡದೆ ಅವುಗಳ ಮೇಲೆ ಹುಲ್ಲನ್ನು ಬೆಳೆಸಿ ಸುರಕ್ಷಿತವಾಗಿಡಬಹುದು.

ಕಡಿದಾದ ಗುಡ್ಡಗಾಡಿನಲ್ಲಿ ಉದ್ಯಾನ ರಚಿಸುವ ಪ್ರಯತ್ನಗಳು ಕಷ್ಟಕರ ಮತ್ತು ನಿರಾಶಾದಾಯಕ. ಸಾಮಾನ್ಯವಾಗಿ ತೃಪ್ತಿಕರವಾದ ಪರಿಹಾರವೆಂದರೆ ಟೀ ತೋಟಗಳಲ್ಲಿ ಅನುಸರಿಸುವಂತೆ, ಸಮಗ್ರ ಇಳಿಜಾರನ್ನು ಒಂದೇ ಜಾತಿಯ ಗಿಡ್ಡ ಹೊದರುಗಳಿಂದ ಮುಚ್ಚುವುದು. ಮುಖ್ಯವಾದ ತೊಂದರೆಗಳ ಪೈಕಿ ಒಂದು, ದಾರಿ ಮತ್ತು ಮೆಟ್ಟಲುಗಳನ್ನು ಬಹಳ ಕಡಿದಾಗಿ ಮಾಡದಂತೆ ಪ್ರಯತ್ನಿಸುವುದು. ನಿವೇಶನ ಎಷ್ಟೇ ಕಡಿದಾಗಿದ್ದರೂ, ದಾರಿಗಳು ಉದಾರವಾಗಿ ಏರಬೇಕು. ಬಾಹ್ಯ ರೂಪಕ್ಕೆ ಅನುಗುಣವಾಗಿ, ಗುಡ್ಡದ ಕಡೆಯಲ್ಲಿ ಗೂಡುಗಳು ಎದ್ದು ಕಾಣದಂತಿರಬೇಕು. ಅನೇಕ ವೇಳೆ ಗುಡ್ಡಗಾಡಿನ ನಿವೇಶನ ಬಹಳ ಪ್ರಾಮುಖ್ಯವಾದ ಪ್ರತಿಫಲಗಳನ್ನು ಹೊಂದಿರುತ್ತದೆ – ಒಂದು ದೃಶ್ಯ, ಗುಪ್ತ ಅನಿರೀಕ್ಷಿತ ಮೂಲೆಗಳು – ಇವು ಅನಾನುಕೂಲಗಳನ್ನು ಸರಿದೂಗಿಸುತ್ತವೆ. ಮೇಜುಗೋಲಿಯಂತಿರುವ ಉದ್ಯಾನವನ್ನು ಗಮನಾರ್ಹವಾಗಿ ವ್ಯವಸ್ಥಿತಗೊಳಿಸದಿದ್ದರೆ, ಬಹಳ ಮಂಕಾಗಿ ಕಾಣುವುದು.

ಜಮೀನನ್ನು ಅಂತಸ್ತುಗಳಾಗಿ ಕತ್ತರಿಸಬೇಕಾದರೆ, ಮುಖ್ಯವಾಗಿ ಜ್ಞಾಪಕದಲ್ಲಿಡಬೇಕಾದ ಅಂಶ, ಮಟ್ಟದಲ್ಲಿನ ವ್ಯತ್ಯಾಸಗಳು ಆದಷ್ಟೂ ಮಟ್ಟಿಗೂ ಕಡಿಮೆಯಾಗಿರಬೇಕು. ನೋಡುವುದಕ್ಕೆ ತಗ್ಗಾಗಿ ಕಾಣುವ ಮಟ್ಟದಲ್ಲಿನ ಸುಲಭ ಬದಲಾವಣೆಗಳು ಕಣ್ಣಿಗೆ ಶಾಂತದಾಯಕವಾಗಿರುವುದು; ಅದೇ ಎತ್ತರವಾದ ಮಟ್ಟಗಳು ವಕ್ರವಾಗಿರುವುದಲ್ಲದೆ ಎದೆಗುಂದಿಸುವುದು. ಅಲ್ಲದೆ, ಉದ್ಯಾನದ ಪ್ರತಿಯೊಂದು ಭಾಗ, ಕನಿಷ್ಠ ದೈಹಿಕ ಶ್ರಮದಿಂದ, ಸುಲಭವಾಗಿ ಪ್ರವೇಶಿಸುವಂತಿರಬೇಕೆನ್ನುವುದು ಬಹಳ ಮುಖ್ಯ. ಹಾದಿಯು ಸುಲಭ ಮತ್ತು ನಿರಾತಂಕವಾಗಿದ್ದರೆ, ಜನರು ಉದ್ಯಾನದ ಕೆಳಭಾಗದವರೆವಿಗೂ ನಡೆದುಹೋಗುವರು. ಕಡಿದು ಅಥವಾ ಒರಟಾಗಿದ್ದರೆ, ತಿರುಗಾಡುವುದನ್ನು ತೊರೆಯುತ್ತಾರೆ. ಇರುವ ನಾಲ್ಕು ಅಂಗುಲ ಎತ್ತರದ ಮೆಟ್ಟಲು ಇರುವ ಶ್ರೇಣಿಗೂ, ಆರು ಅಂಗುಲದಕ್ಕೂ, ಪ್ರಚಂಡಕರ. ಜನರು ಮೊದಲಿನದನ್ನು ಉಪಯೋಗಿಸುತ್ತಾರೆ ಮತ್ತು ತರುವಾಯದರಿಂದ ಹೊರಗಿರುತ್ತಾರೆ.

ಹಲವು ವೇಳೆ ಉದ್ಯಾನದ ಹಾದಿ ಮತ್ತು ಮೆಟ್ಟಿಲುಗಳನ್ನು, ಎಷ್ಟು ಒರಟಾಗಿದ್ದರೆ ಅಷ್ಟು ಕಲಾತ್ಮಕವಾಗಿ ಕಾಣುತ್ತದೆ ಎಂಬ ನಂಬಿಕೆಯು ಮೇಲೆ ಕಡಿದಾಗಿಯೂ ಮತ್ತು ಒರಟಾಗಿಯೂ ಮಾಡುತ್ತಾರೆ. ಅಹಿತವಾದದ್ದು ಕಲಾತ್ಮಕವಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಉದ್ಯಾನದಲ್ಲಿನ ಸೌಂದರ್ಯ ಗುಣಗಳು, ಸೂಕ್ತ ಪ್ರಮಾಣಗಳ, ಯುಕ್ತ ವಸ್ತುಗಳ ಮತ್ತು ಕಾರ್ಯತತ್ಪರತೆ ಇವುಗಳೆಲ್ಲದರ ಫಲಿತಾಂಶ. ತೋಟಗಾರನು ಪ್ರಾಯೋಗಿಕ ಮತ್ತು ಕ್ರಿಯಾತ್ಮಕವಾದ ಸಮಸ್ಯೆಗಳನ್ನು ಬಗೆಹರಿಸಬೇಕು. ಉಳಿದೆಲ್ಲದರ ಜೊತೆಗೆ, ಸೌಂದರ್ಯ ತತ್ವಕ್ಕನುಸಾರವಾಗಿ ಮನೋಹರವಾಗಿರುವಂತಹ ಉತ್ತರವನ್ನು ಕಂಡು ಹಿಡಿಯಬೇಕು.

ಒಂದು ನಿವೇಶದಲ್ಲಿನ ಸ್ವಾಭಾವಿಕ ಬಂಡೆಯ ಚಾಚುಗಳು, ಆಗಲೇ ಸಮಸ್ಯೆಯನ್ನು ಬಗೆಹರಿಸದಂತೆ ಕಾಣುತ್ತದೆ. ಮಣ್ಣಿನ ಡೊಂಕುಗಳನ್ನು ನಯಗೊಳಿಸಿ ಓರಣಗೊಳಿಸಬೇಕು ಮತ್ತು ಹುಲ್ಲಿನ ಬೀಜವನ್ನು ಸಂಪೂರ್ಣ ಕ್ಷೇತ್ರದ ಮೇಲೆ



ಚಿತ್ರ 5. ಉದ್ಯಾನಗಳಲ್ಲಿ ಮೆಟ್ಟಲುಗಳಾಗಲಿ ಅಥವಾ ಅಂತಸ್ತುಗಳಾಗಲಿ ಸಾಧ್ಯವಾದಷ್ಟೂ ತಗ್ಗಾಗಿರಬೇಕು. ಎತ್ತರವಾದ ಮೆಟ್ಟಲುಗಳು ನೋಡುವುದಕ್ಕೆ ಚೆನ್ನಾಗಿರುವುದಿಲ್ಲ ಮತ್ತು ದೇಹಕ್ಕೆ ಸುಸ್ತು ಮಾಡುತ್ತವೆ.

ಚೆಲ್ಲಬೇಕು. ಇಳಿಜಾರಿನ ಕೋನ ಹೇಗಿದೆ, ಅದು ಮಟ್ಟವಾಗಿದೆಯೆ ಅಥವಾ ಕಡಿದಾಗಿದೆಯೆ ಎಂಬುದು ಗಮನಿಸುವ ವಿಷಯವಲ್ಲ; ಹುಲ್ಲಿನ ಕ್ಷೇತ್ರ, ಬಂಡೆಯ ಮೇಲ್ಪದರದ ದೊಡ್ಡ ಮಡಿಗಳಿಂದ ಹಿಡಿದಿರುವಾಗ, ಅದನ್ನು ಉತ್ತಮಗೊಳಿಸಲಾಗುವುದಿಲ್ಲ. ಇಂತಹ ಭೂ ಪ್ರದೇಶದಲ್ಲಿ, ಕಲ್ಲುಗಳನ್ನು ತಂದು ಮಣ್ಣಿನಲ್ಲಿ ಹೂಳುವುದರಿಂದ ಅನುಕರಿಸಲಾಗುವುದಿಲ್ಲವೆಂಬುದನ್ನು ಇಲ್ಲಿ ಹೇಳಲೇಬೇಕು. ಪ್ರಕೃತಿಯಲ್ಲಿ ಕಾಣುವ ಪ್ರತಿ ಕಾಲುಭಾಗಕ್ಕೆ, ಮುಕ್ಕಾಲು ಭಾಗ ಕಲ್ಲು ಹೂಣಲ್ಪಟ್ಟಿರುವುದು. ಸರಿಯಾದ ಪರಿಣಾಮವನ್ನು ಹೊಂದಲು ಸರಿ ಅಳತೆಯ ಬಂಡೆಗಳನ್ನು ಸಾಗಿಸುವುದು ಅಸಾಧ್ಯ.

ಬಹಳವಾಗಿ ಮಟ್ಟವಾಗಿರುವ ಉದ್ಯಾನಕ್ಕೆ ಕೃತಕವಾಗಿ, ಮಟ್ಟಗಳಲ್ಲಿ

ಬದಲಾವಣೆಗಳನ್ನು ಹುಟ್ಟಿಸಬೇಕಾಗುತ್ತದೆ. ಮನೆಯ ಮಗ್ಗುಲಲ್ಲಿ ಎತ್ತರಿಸಿದ ಅಂತಸ್ತು, ವಾತಾವರಣ ಅವಕಾಶಕೊಟ್ಟಲ್ಲಿ, 'ಕುಳಿಬಿದ್ದ ವನ' ಅಥವಾ ಎಲ್ಲಿ ಸಾಧ್ಯವೋ ಅಲ್ಲಿ ಎತ್ತರಿಸಿದ ಗುಪ್ಪೆ – ಇವೆಲ್ಲಾ ಕೃತಕ ಬದಲಾವಣೆಗಳು. ಗುಪ್ಪೆಯ ಅಪಾಯವೆಂದರೆ, ಅದು ಚಿಕ್ಕದಾಗಿ ಕಾಣುವ ಸಂಭವ. ಅರ್ಥಪೂರ್ಣವಾಗಿರುವುದಕ್ಕೆ, ಅದು ದೊಡ್ಡದಾಗಿಲ್ಲದಿದ್ದರೆ, ಅಂತಹುದನ್ನು ಮಾಡದಿರುವುದು ಒಳ್ಳೆಯದು. ಗಂಭೀರತೆ ಮತ್ತು ವ್ಯಕ್ತಿತ್ವ ಇಲ್ಲದ ಕಡಿದಾದ ಗುಡ್ಡೆಗಳಿಗಿಂತ ಬೇರಾವುದೂ ಕೀಳಾಗಿ ಕಾಣುವುದಿಲ್ಲ.

ವರ್ಷಾದ್ಯಂತ ಸ್ಥಿಮಿತವಾಗಿ ಮಳೆ ಬೀಳುವ ದೇಶಗಳಲ್ಲಿ, ಹುಲ್ಲಿನ ಹೊದಿಕೆಯ ದುರಸ್ತಿ ಒಂದು ಸಮಸ್ಯೆಯಲ್ಲ. ಒಂದು ವಿಶಾಲವಾದ ಕ್ಷೇತ್ರದಲ್ಲಿ ಒರಟಾದ ಹಸಿರಿನ ಹೊದಿಕೆ ಚೆನ್ನಾಗಿಯೇ ಕಾಣುತ್ತದೆ ಮತ್ತು ಬಹಳ ತೊಂದರೆ ಇಲ್ಲದೆ ದುರಸ್ತಿಗೊಳಿಸಬಹುದು. ಆದರೆ ಭಾರತದ ಮೈದಾನಗಳ ಅನೇಕ ಭಾಗಗಳಲ್ಲಿ, ಒಂದು ಕಡೆ, ವರ್ಷದಲ್ಲಿ ಎಂಟು ತಿಂಗಳು ಹುಲ್ಲಿಗೆ ನೀರು ಕೊಡುವ ಸಮಸ್ಯೆ; ಇನ್ನೊಂದು ಕಡೆ, ಭಾರಿ ಮಳೆಗಳಿಂದ ಮಣ್ಣು ಕೊಚ್ಚಿ ಹೋಗದಂತೆ ನೆಲವನ್ನು ಹೊದಿಸಿ ಇಡಬೇಕು. ಇಲ್ಲದಿದ್ದರೆ ಜಾಗರೂಕತೆಯಿಂದ ರಚಿಸಿದ ಭೂಮಿಯ ಆಕಾರದಲ್ಲಿ ಅವಲಕ್ಷಣದ ಏಣುಗಳು ಕಾಣುತ್ತವೆ.

ಇಂಗ್ಲೆಂಡಿನಲ್ಲಿ ಸ್ವಾಭಾವಿಕ ಹೊದಿಕೆ–ಹುಲ್ಲನ್ನು ವರ್ಷಾದ್ಯಂತ ಲಘುವಾದ ಮಳೆ, ಹಸುರಾಗಿ ಇಡುತ್ತದೆ ಮತ್ತು ಮೃದುವಾದ ದುಂಡಾಗಿರುವ ಏರಿಳಿತಗಳಲ್ಲಿ ಮಣ್ಣನ್ನು ಹುಲ್ಲು ಬಿಗಿಯಾಗಿ ಹಿಡಿದಿಟ್ಟಿರುತ್ತದೆ. ಭಾರತದಲ್ಲಿ ಸ್ವಾಭಾವಿಕ ಹೊದಿಕೆ, ಮರಗಳಾಗಿರಬೇಕು. ಇವುಗಳ ಬೀಜಗಳು ಮಳೆಗಾಲದಲ್ಲಿ ಮೊಳೆತು, ಆಮೇಲೆ ಉಬ್ಬುಗಳಲ್ಲಿ ಥಟ್ಟನೆ ಬೆಳೆಯುತ್ತಾ, ಮುಂಗಾರಿನ ಒಂದು ಅವಧಿಯೊಡನೆ ವೇಗವಾಗಿ ಬೆಳೆದು, ಬೇಸಿಗೆಯ ಸಮಯಕ್ಕೆ ಸ್ಥಿಮಿತ ಸ್ಥಿತಿಗೆ ಬರುತ್ತವೆ. ಎಲ್ಲಿ ಮರಗಳು – ಮಾನವನಿಂದಾಗಲೀ, ದನಗಳಿಂದಾಗಲೀ ಅಥವಾ ಸ್ವಾಭಾವಿಕ ದುಷ್ಪರಿಣಾಮಗಳಿಂದಾಗಲಿ ಹಾಳಾಗಿವೆಯೋ ಅಲ್ಲಿ ಭೂಮಿ ಮೊದಲು ಭಾಗಶಃ ಬಂಜರಾಗಿದ್ದು, ಸ್ವಲ್ಪ ಕಾಲದ ನಂತರ ಪೂರ್ಣವಾಗಿ ಬಂಜರಾಗುತ್ತದೆ. ಭಾರತದಲ್ಲಿ ಮರಗಳು ಮಣ್ಣನ್ನು ಸ್ವಸ್ಥಳಗಳಲ್ಲಿ ಹಿಡಿದಿಡಬೇಕು ಮತ್ತು ಮಣ್ಣಿನ ಸವೆತವನ್ನು ತಡೆಯಬೇಕು. ಉದ್ಯಾನದಲ್ಲಿ ಮರಗಳ ಮಧ್ಯದಲ್ಲಿರುವ ಭೂಮಿ, ಧೂಳುಭರಿತ, ಒರಟು ಮತ್ತು ಅಹಿತಕರವಾಗುವುದುಂಟು. ಆದುದರಿಂದ ಪ್ರತಿ ಅಂಗುಲ ಭೂಮಿಗೂ ಒಂದು ನಿರ್ದಿಷ್ಟ ಹೊದಿಕೆಬೇಕು. ಇದು ಉದ್ಯಾನ ವಿನ್ಯಾಸದ ಒಂದು ಮುಖ್ಯ ಅಂಶವಾಗಿರಬೇಕು.

ಅತ್ಯಂತ ಸುಂದರವಾದ ಮತ್ತು ಅಪೇಕ್ಷಣೀಯ ನೆಲಹೊದಿಕೆ, ವಾಸ್ತವವಾಗಿ 'ಹುಲ್ಲುಹಾಸು'. ಇದರ ದುರಸ್ತಿಗೆ ಎಲ್ಲಿ ನೀರು ಯಥೇಚ್ಛವಾಗಿ ಒದಗುತ್ತೋ, ಅಲ್ಲಿ ತೋಟಗಾರನು ಮುಂದಕ್ಕೆ ನೋಡಬೇಕಾಗಿಲ್ಲ. ಚೆನ್ನಾಗಿ ಕತ್ತರಿಸಿದ ಹುಲ್ಲಿಗೆ ಎಲ್ಲಾ ಶಕ್ಯವಾದ ಗುಣಗಳಿವೆ – ತಂಪಾಗಿ ಮತ್ತು ಆಕರ್ಷಕವಾಗಿ ಕಾಣುತ್ತದೆ; ಗಿಡಗಳಿಗೆ ಮತ್ತು ಹೂಗಳಿಗೆ ಅದ್ಭುತವಾದ ಹಿನ್ನಲೆಯನ್ನು ಒದಗಿಸುತ್ತದೆ ಮತ್ತು ಜಿಗಿಯುವ,

ನಯವಾದ ಹುಲ್ಲಿನ ಸ್ಪರ್ಶತೆ ಪಾದಗಳ ಕೆಳಗೆ ಸಂತೋಷಪಡುವ ಸುಖಾನುಭವವನ್ನು ನೀಡುತ್ತದೆ. ಕೆಲವು ವೇಳೆ ಸಿಮೆಂಟು ಅಥವಾ ಕಾಂಕ್ರೀಟನ್ನು ಕಷ್ಟಕರವಾದ ಸ್ಥಳಗಳ ಮೇಲೆ ಹಾಕುವುದರಿಂದ, ಈ ಸಮಸ್ಯೆಯನ್ನು ಉಂಟುಮಾಡಿದಂತಾಗುತ್ತದೆ. ಒಂದು ರೀತಿಯಲ್ಲಿ ಇದು ಪ್ರಾಯೋಗಿಕ ಆದರೆ ನಿಸ್ಸತ್ವವಾದ ಪರಿಹಾರ ಮತ್ತು ಯಾರು ಇದನ್ನು ಅನುಸರಿಸುತ್ತಾರೋ ಅಂತಹವರು ತಾವು ತೋಟಗಾರರೆಂದು ಹೇಳಿಕೊಳ್ಳುವ ಅರ್ಹತೆಯನ್ನು ಬಿಟ್ಟುಕೊಡಬೇಕು.

ವಸ್ತುಗಳ ಆಯ್ಕೆಯಲ್ಲಿ, ಸಜೀವ ಮತ್ತು ಜಡ ವಸ್ತುಗಳನ್ನು ನೆಲ ಹೊದಿಕೆಯಾಗಿ ಉಪಯೋಗಿಸಲು ಬಹಳಷ್ಟು ಅವಕಾಶಗಳಿವೆ ಮತ್ತು ಕಲ್ಪನಾಶಕ್ತಿಯುಳ್ಳ ವ್ಯಕ್ತಿ ಹೊಸ ವಸ್ತುಗಳನ್ನು ಚೆನ್ನಾಗಿ ಪ್ರಯೋಗಿಸಿ ವಿವಿಧ ಮಿಶ್ರಣಗಳಲ್ಲಿ



ಚಿತ್ರ 6. ಒಂದು ತುಣುಕು ಭೂಮಿ ಬಹಳ ಚಿಕ್ಕದಾಗಿದ್ದರೆ ಒಂದು ಸಣ್ಣ ಮಣ್ಣು ಗುಡ್ಡೆಯನ್ನು ಹಾಕಿ, ಭೂದೃಶ್ಯಗೊಳಿಸಲು ಪ್ರಯತ್ನಪಡಬೇಡಿ.

ಉಪಯೋಗಿಸುವುದರಿಂದ, ಇದರ ವ್ಯಾಪ್ತಿಯನ್ನು ಇನ್ನೂ ಹೆಚ್ಚಿಸಬಹುದು. ಉದಾಹರಣೆಗೆ ದುಂಡಗಿರುವ ಕಲ್ಲುಗಳು ಷಹಬಾದ್ ಅಥವಾ ಕೋಟೆ ಕಲ್ಲುಗಳು, ಅಲಂಕಾರಮಯವಾದ ಇಟ್ಟಿಗೆ ವಿನ್ಯಾಸಗಳು, ನದಿ ಮರಳು, ಉರುಟು ಕಲ್ಲುಗಳು ಮತ್ತು ಮರ – ಇವುಗಳು ಕೆಲವಾರು ವಾಸ್ತವಿಕ ಜಡ ವಸ್ತುಗಳು; ಇವುಗಳನ್ನು ಒತ್ತಾಗಿ ನೆಲದ ಮೇಲೆ ಹೂಳುವುದರಿಂದ, ಇದರ ವ್ಯಾಪ್ತಿಯನ್ನು ಹೆಚ್ಚಿಸಬಹುದು. ಸಜೀವ ವಸ್ತುಗಳನ್ನು ಅನೇಕ ಹರಡುವ ಗಿಡಗಳಲ್ಲಿ ಕಾಣಬಹುದು. ಇವು ನೆಲವನ್ನು ಅಪ್ಪಿಕೊಂಡು ಎಲ್ಲಾ ದಿಕ್ಕುಗಳಲ್ಲಿ ಹಬ್ಬುತ್ತವೆ. ಒಂದೆರಡು ವಸ್ತುಗಳನ್ನು ಮಿಲನ ಮಾಡಿ ಒಂದು ವಿನ್ಯಾಸವನ್ನು ಉಂಟು ಮಾಡಿದರೆ ಆತನ ಚಮತ್ಕಾರ ಬುದ್ಧಿಯನ್ನು

ತೋರಿಸಿಕೊಳ್ಳುವುದಕ್ಕೆ ಒಂದು ಅವಕಾಶ. ಕೆಲವು ಮಾದರಿ ಅಥವಾ ವಿನ್ಯಾಸಗಳು, ಉದ್ಯಾನದ ಬೇರೆ ಭಾಗಗಳಲ್ಲಿ ಪ್ರತಿಧ್ವನಿಸಿ ಅದಕ್ಕೆ ಸಂಬದ್ಧತೆ ಕೊಡಬೇಕು. ಭೂಮಿಯ ಪ್ರತಿಯೊಂದು ಬಿಡಿರೂಪವೂ, ತನ್ನಷ್ಟಕ್ಕೆ ತಾನೆ ಫಲಪ್ರದವಾಗಿರಬೇಕು. ಅಲ್ಲದೆ ಅಖಂಡದ ಅವಶ್ಯಕವಾದ ಸಮಗ್ರ ಭಾಗವಾಗಿರಬೇಕು.

ಪ್ರತಿಯೊಬ್ಬ ಗೃಹಸ್ಥನು, ಒಂದು ಕೋಣೆಯಲ್ಲಿ ಸಂಬದ್ಧತೆಯನ್ನು ತರಲು, ಜಮಖಾನೆ ಅವಶ್ಯಕವೆಂಬುದನ್ನು ಬಲ್ಲನು. ಉದ್ಯಾನದ ಸಂಪೂರ್ಣ ಮೇಲ್ಮೈ ಒಂದು ವಿಶಾಲವಾದ ಜಮಖಾನೆಯೆಂದು ಯೋಚಿಸುವುದು ಸಹಾಯಕರ; ಆದಾಗ್ಯೂ ಅದು ಒಂದು ಅಸಮತೆಯ ರೂಪ. ಕೆಲವು ಮಾದರಿಗಳು ಪುನರಾವೃತ್ತಿಯಾಗುತ್ತವೆ; ಕೆಲವು ಬಣ್ಣಗಳು ಮತ್ತು ರಚನೆಗಳು ಸ್ವರೂಪವನ್ನು ಎತ್ತಿಕಟ್ಟುತ್ತವೆ ಮತ್ತು ಪ್ರತಿ ಅಂಗವೂ ನಿಸ್ಸಂದೇಹವಾಗಿಯೂ ಅಖಂಡತೆಗೆ ಸಂಬಂಧಿಸಿರುತ್ತದೆ. ಒಂದು ವೇಳೆ, ಉದಾಹರಣೆಗಾಗಿ, ಉರುಟು ಕಲ್ಲುಗಳ ಹಾದಿ ಮನೆಯಿಂದ ಹೊರಗೆ ಹಾದು ಹೋಗುತ್ತಿದೆ ಎಂದುಕೊಳ್ಳಿ ಅಂಥದೇ ಉರುಟು ಕಲ್ಲುಗಳನ್ನು, ಒಂದು ಪ್ರಾಮುಖ್ಯವಾದ ಮರದ ಅಡಿಯಲ್ಲಿ, ಪೋರ್ಟುಲಕಗಳನ್ನು ಗುಂಪು ಗುಂಪಾಗಿ, ಕಲ್ಲುಗಳ ಮಧ್ಯೆ ನೆಡುವುದರಿಂದ ಅನುಕರಿಸಬಹುದು; ಇನ್ನೂ ಆಚೆ ಅದೇ ಉರುಟು ಕಲ್ಲುಗಳನ್ನು ಕುಳಿತುಕೊಳ್ಳುವ ಸ್ಥಳಕ್ಕಾಗಿ ಉಪಯೋಗಿಸಬಹುದು.

ಅಥವಾ ಪುನಃ, ಕೆಲವು ದೊಡ್ಡ ಕಲ್ಲುಗಳನ್ನು ಉಪಯೋಗಿಸುವುದರಿಂದ, ಮಟ್ಟವಾದ ಮೇಲ್ಪದರಿನ ಏಕ ರೀತಿಯನ್ನು ಹೋಗಲಾಡಿಸಬಹುದು. ಕಲ್ಲುಗಳ ಗುರಿಯನ್ನು, ಕೊಳದ ಅಂಚಿನಲ್ಲಿ, ಅಥವಾ ಒಂದು ಕಮಾನಿನ ಪ್ರಾಧಾನ್ಯತೆ ಅಥವಾ ಭೂಮಿಯ ಮೇಲಿನ ಇಳಿತವನ್ನು ತೋರಿಸಲು ಅನುಕರಿಸಬಹುದು. ಪ್ರತಿಯೊಂದು ಗುರಿಯಲ್ಲೂ ಸ್ಥಳೀಯ ವಸ್ತುಗಳನ್ನು ಉಪಯೋಗಿಸುವುದಕ್ಕಾಗಿ, ಕೂಲಂಕಷವಾಗಿ ಯೋಚಿಸಬೇಕು. ಪ್ರತಿಯೊಂದು ಅಂಶವೂ ತನ್ನಷ್ಟಕ್ಕೆ ತಾನೆ ಒಂದು ಸಂಯೋಜನೆಯಂತಿರಬೇಕು. ಅಂತಹ ಸಂಯೋಜನೆ, ತನ್ನ ಸಹಿತ ಪರಿಸರದೊಂದಿಗೆ ಲೀನವಾಗಬೇಕು ಮತ್ತು ಉದ್ಯಾನದ ಸಮಗ್ರ ಧ್ಯೇಯದೊಂದಿಗೆ ಮಿಳಿತಗೊಂಡಿರಬೇಕು.

ಭೂಮಿಯ ರೂಪ ಮತ್ತು ನೆಲಹೊದಿಕೆಗಳು ಮುಖ್ಯವಾಗಿ, ಸಮಗ್ರ ಉದ್ಯಾನದಲ್ಲಿ ಐಕ್ಯತೆಯನ್ನು ಉಂಟು ಮಾಡಲು ನಿಯೋಗಿಗಳಂತೆ ಕೆಲಸ ಮಾಡಬೇಕು. ಅವು ಏಕೈಕ ರೂಪಗಳನ್ನು ತಂಡಗಳನ್ನಾಗಿ ಒಗ್ಗೂಡಿಸುವಂತೆ, ತಂಡಗಳು ಇನ್ನೊಂದು ತಂಡಗಳೊಂದಿಗೆ, ಅಂತಿಮದಲ್ಲಿ ಉದ್ಯಾನವು, ಇತರ ಭಾಗಗಳೆಲ್ಲವೂ ಕೂಡಿದ ಸಮಗ್ರ ಸಂಯೋಜನೆಯಾಗಬೇಕು. ಇಲ್ಲದಿದ್ದರೆ ಹೇಗೆ ತಾನೇ ಮರ, ಕೊಳ, ಹಾದಿ, ಹೊದರು ಮತ್ತು ಹೂಪಾತಿಗಳಲ್ಲಿ ಸಂಬಂಧ ಕಲ್ಪಿಸುವುದು ಸಾಧ್ಯ ? ಒಂದು ವೇಳೆ ಉದ್ಯಾನ ತುಣುಕುಗಳಾಗಿ, ಬೆದರಿದಂತೆ ಕಂಡರೆ, ಇದರ ದೋಷವನ್ನು ತೃಪ್ತಿಕರವಲ್ಲದ ನೆಲಹೊದಿಕೆಯ ರಚನೆ, ಭೂ ಸ್ವರೂಪ ಅಥವಾ ಇವುಗಳೆರಡರ ಮೇಲೆ ಹೊರಿಸಬಹುದು. ಇವುಗಳೆರಡರ ಬಗ್ಗೆ

ಲೆಕ್ಕಚಾರಗಳು ಸರಿಯಾಗಿದ್ದ ಪಕ್ಷದಲ್ಲಿ, ಉತ್ತರವೂ ಸರಿಯಾಗಿ ಇರಲೇಬೇಕು.

## ಮರಗಳು

ಮರಗಳ ಬಗ್ಗೆ ಬಹಳ ಅಸಾಧ್ಯವಾದ ಮುಖ್ಯ ಸತ್ಯಾಂಶವೊಂದಿದೆ ಮತ್ತು ತಿಳಿಗೇಡಿ ಜನರು ಮಾತ್ರ ಅದನ್ನು ಸ್ಪಷ್ಟವಾಗಿ ಪದಗಳಲ್ಲೂ ಹೇಳುತ್ತಾರೆ. ತಿಳಿಗೇಡಿಯಂತೆ ಕಾಣುವ ಅಪಾಯವಿದ್ದರೂ ಕೂಡ, ಈ ಪ್ರಮುಖ ಸತ್ಯಾಂಶದ ಬಗ್ಗೆ ನಾನು ಹೇಳಲೇಬೇಕು. ಆದರ್ಶ ಪರಿಸ್ಥಿತಿಗಳಲ್ಲಿ ಕೂಡ ಪ್ರತಿಯೊಂದು ಮರವೂ ತನ್ನ ಸಂಪೂರ್ಣ ಗಾತ್ರವನ್ನು ಪಡೆಯಲು ಹಲವಾರು ವರ್ಷಗಳು ಬೆಳೆಯಬೇಕು. ವಿಜ್ಞಾನವು, ವಸ್ತುತಃ ಈ ಸಾಗಣೆಯನ್ನು ತ್ವರಿತಗೊಳಿಸಲು ಯಾವ ವಿಧಾನವನ್ನೂ ಕಂಡು ಹಿಡಿದಿಲ್ಲ. ಪ್ರತಿಯೊಂದು ಮರವೂ ಪ್ರತ್ಯಕ್ಷವಾಗಿ ಉಪಯೋಗವಿಲ್ಲದಿದ್ದರೂ, ಕಾಲದ ವೆಚ್ಚವನ್ನು ಪ್ರತಿನಿಧಿಸುತ್ತದೆ. ಕಾಲಹರಣ ಮಾಡದೆ ಇನ್ನೇನು ಮಾಡಲು ಆಗುವುದಿಲ್ಲ. ಕಾಲವನ್ನು ಪುನಃ ಹಿಡಿಯಲಾಗುವುದಿಲ್ಲ. ಮತ್ತು ಕಳೆದುಹೋದ ಪ್ರತಿಯೊಂದು ಕ್ಷಣವೂ ಎಂದೆಂದಿಗೂ ಕಳೆದು ಹೋದಂತೆ. ಇದನ್ನು ಒತ್ತಿ ಹೇಳುವುದರ ಅವಶ್ಯಕತೆ ಇದೆ. ಏಕೆಂದರೆ ಭಾರತದಲ್ಲಿ ಬಹಳ ಆತುರದಿಂದ ಮರಗಳನ್ನು ಧ್ವಂಸ ಮಾಡುವ ಮತ್ತು ಅವುಗಳನ್ನು ಪುನಃ ಸ್ಥಾಪನೆ ಮಾಡುವುದರ ಬಗ್ಗೆ ಸಂಪೂರ್ಣ ಅಸಡ್ಡೆ, ಜನತೆಯ ಮನಸ್ಸಿನಲ್ಲಿದೆ.

ಉದ್ಯಾನವನ್ನು ರಚಿಸುವುದಕ್ಕೆ ಮುನ್ನ, ಯೂರೋಪು ಮತ್ತು ಅಮೇರಿಕಾದ ತೋಟಗಾರರು, ಮೊದಲು ನಿವೇಶದಲ್ಲಿನ ಅನಗತ್ಯವಾದ ಎಲ್ಲ ವಸ್ತುಗಳನ್ನು ನಾಶ ಮಾಡುತ್ತಾರೆ. ಎಲ್ಲಾ ಅತೃಪ್ತಿಕರವಾಗಿ ಬೆಳೆಯುತ್ತಿರುವ, ಕುಂಠಿತ ಮತ್ತು ಸರಿಬೀಳದ ಮರಗಳನ್ನು, ಬೇರೆಯುದನ್ನು ನೆಡುವುದಕ್ಕೆ ಮೊದಲು, ನಾಶ ಮಾಡುತ್ತಾರೆ. ಇದು ತರ್ಕಬದ್ಧವಾಗಿ ಮಾಡಬೇಕಾದ ಸರಿಯಾದ ಕೆಲಸ. ಆದರೆ ಭಾರತದಲ್ಲಿ ಪರಿಸ್ಥಿತಿಗಳು ಬೇರೆಯಾಗಿವೆ. ಮರಗಳ ಕೊರತೆ ಇದೆ ಮತ್ತು ಅವುಗಳ ಅತ್ಯವಶ್ಯಕತೆಯೂ ಇದೆ; ಇದನ್ನು ಪ್ರತಿಯೊಬ್ಬರೂ ಪರಿಗಣಿಸಬೇಕು. ಅಲ್ಲದೆ ಅರ್ಧ ಬೆಳೆದ ಮರಗಳನ್ನು ಪಡೆಯುವುದು ಕಷ್ಟ. ಆದುದರಿಂದ ಸಣ್ಣ ಸಸಿಗಳಿಂದ ಪ್ರಾರಂಭಿಸಬೇಕಾಗಿದೆ. ಇನ್ನೊಂದು ಕಡೆ, ಈ ಕಾರ್ಯಾಚರಣೆಯಲ್ಲಿ ಹಿಂದೆ ಬೀಳದಂತೆ ಎಚ್ಚರಿಕೆಯಿಂದಿರಬೇಕು. ಒಂದು ಮರವು ಅವಶ್ಯಕವಾದುದಕ್ಕಿಂತ ಅಧಿಕವಾಗಿದೆಯೇ, ಇನ್ನೊಂದು ಪ್ರಾಮುಖ್ಯವಾದ ಮರದ ಬೆಳವಣಿಗೆಗೆ ಕುಂದು ತರುತ್ತಿದೆಯೇ ಇತ್ಯಾದಿ ವಿಷಯಗಳ ಬಗ್ಗೆ ಕರಾರುವಾಕ್ಕಾಗಿ ತೀರ್ಮಾನಿಸುವುದನ್ನು ಕಲಿಯಬೇಕು. ಪ್ರತಿಯೊಂದು ಗಿಡವು ತಡೆಯಿಲ್ಲದೆ ಬೆಳೆಯುವ ಆಧಾರದ ಮೇಲೆ, ಯಾವ ಉದ್ಯಾನವನ್ನು ರಚಿಸಲಾಗದು. ನನ್ನ ಸಲಹೆ ಏನೆಂದರೆ, ಭಾರತದಲ್ಲಿ, ಮರಗಳನ್ನು ನಾಶ ಮಾಡುವ ವಿಷಯದಲ್ಲಿ, ಮುಂದಾಲೋಚನೆ ಇಲ್ಲದೆ ದುಡುಕುವ ಬದಲು, ಸಾವಧಾನವಾಗಿರುವುದು ಮೇಲು.

ತೋಟಗಾರನಿಗೆ ಪ್ರತಿಯೊಂದು ಮರವು ಕಾಲಕ್ರಮೇಣ ಬಂಡವಾಳವಾಗುತ್ತದೆ.

ಮರಗಳು ಉಷ್ಣವಲಯದಲ್ಲಿ ಸಮಶೀತೋಷ್ಣ ವಲಯಕ್ಕಿಂತ ಹೆಚ್ಚು ವೇಗವಾಗಿ ಬೆಳೆಯುತ್ತವೆ; ಮೃದು ತಾಳಿನ ಗಿಡಗಳು, ಗಟ್ಟಿತಾಳಿನ ಗಿಡಗಳಿಗಿಂತ ವೇಗವಾಗಿ ಬೆಳೆಯುತ್ತವೆ. ಆದರೂ, ಬಹು ವೇಗವಾಗಿ ಬೆಳೆಯುವ ಮರಗಳು ಕೂಡ ಆರು ಏಳು ವರ್ಷಗಳಿಗಿಂತ ಕಡಿಮೆ ಕಾಲದಲ್ಲಿ ಯುಕ್ತವಾದ ಅಳತೆಯನ್ನು ಪಸರಿಸಬಹುದೆಂಬುದನ್ನು ಎಣಿಸಬಾರದು. ನಿಧಾನವಾಗಿ ಬೆಳೆಯುವ ಮರಗಳು ಅಂದರೆ, ಉದ್ಯಾನಕ್ಕೂ ಮತ್ತು ಭೂಮಿಗೂ ಸ್ಥಿರತ್ವವನ್ನು ಕೊಡುವಂತಹ ಆಲದ ಮರಗಳ ವಿಷಯದಲ್ಲಿ, ತಾಳ್ಮೆಯಿಂದ ನಾವು ಇಪ್ಪತ್ತು ವರ್ಷ ಅಥವಾ ಅದಕ್ಕಿಂತ ಹೆಚ್ಚಾಗಿ ಕಾಯಬೇಕಾಗುತ್ತದೆ.

ನಾವು ಯಾವಾಗಲೂ, ಭಾರತದ ಸ್ವಾಭಾವಿಕ ಹೊದಿಕೆ ಅರಣ್ಯವೆಂಬುದನ್ನು ಜ್ಞಾಪಿಸಿಕೊಳ್ಳುತ್ತಿರಬೇಕು ಮತ್ತು ನಮ್ಮ ವಾಯುಗುಣ, ಭೌಗೋಳಿಕ ಪರಿಸರಗಳಲ್ಲಿ, ಮರಗಳು ನೈಸರ್ಗಿಕ ಹೊದಿಕೆಯಲ್ಲದೆ, ಅವುಗಳ ಅವಶ್ಯಕ ಹೊದಿಕೆಯೂ ಕೂಡ. ಮಣ್ಣನ್ನು ನಿಯತಸ್ಥಾನದಲ್ಲಿ ಹಿಡಿದಿಟ್ಟುಕೊಳ್ಳುವುದರಿಂದ, ಅದನ್ನು ಸಸ್ಯಜನ್ಯವಾದ ಗೊಬ್ಬರದಿಂದ ವೃದ್ಧಿಪಡಿಸುವುದರಿಂದ, ನೆಲದಲ್ಲಿ ನೀರಿನ ಮಟ್ಟವನ್ನು ಸರಿಯಾಗಿಡುವುದರಿಂದ, ಆಮ್ಲಜನಕವನ್ನು ಹೊರಗೆಡುವುದರಿಂದ, ಮರಗಳು, ಜನರು ಯೋಚಿಸದಷ್ಟೂ ಕಾರ್ಯಗಳನ್ನು ನಿರ್ವಹಿಸುತ್ತವೆ. ಹಿಂದಿನ ಗುಜರಾತ್ ಸಂಸ್ಥಾನದ ದೊರೆ, ಮರ ನೆಡುವ ಒಂದು ಭಾರಿ ಯೋಜನೆಯಿಂದಾಗಿ, ತನ್ನ ಸಂಸ್ಥಾನದಲ್ಲಿ ಮಳೆ ಮೂವತ್ತು ವರ್ಷಗಳಲ್ಲೂ, ಸರಾಸರಿ ಹದಿಮೂರು ಅಂಗುಲದಷ್ಟು ಹೆಚ್ಚಾಯಿತೆಂದು ಸಾರಿ ಹೇಳಿದ್ದಾನೆ.

ವಾಯುಗುಣವನ್ನು ನಿಗ್ರಹಿಸಲು ಮರಗಳು ನಮಗೆ ಸಹಾಯ ಮಾಡಿದರೆ, ಅದನ್ನು ಸಹಿಸಿಕೊಳ್ಳುವುದಕ್ಕೂ ಸಹಾಯ ಮಾಡುತ್ತವೆ. ಭಾರತದ ಕೆಲವು ಸ್ಥಳಗಳಲ್ಲಿ, ವರ್ಷದ ಬಹುಭಾಗದಲ್ಲಿ ನೆರಳು ಅಷ್ಟು ಅಮೂಲ್ಯವಲ್ಲ. ಆದರೆ, ಯಾವುದೋ ಒಂದು ರಹಸ್ಯ ರೀತಿಯಲ್ಲಿ, ನಾವು ಮರಗಳಿಲ್ಲದೆ ಛಾಯೆಯನ್ನು ನಿರೀಕ್ಷಿಸುತ್ತೇವೆ. ದೇಶಾದ್ಯಂತ ಹೆದ್ದಾರಿಗಳಲ್ಲಿ ನಾವು ಮರಗಳನ್ನು ನಾಶ ಮಾಡುತ್ತೇವೆ ಅಥವಾ ನಾಶವಾಗಲಿಕ್ಕೆ ಬಿಡುತ್ತೇವೆ; ಪಟ್ಟಣಗಳಲ್ಲಿನ ಮರಗಳನ್ನು ಕಡಿಯುತ್ತೇವೆ, ನಾವು ಗುಡ್ಡದ ತಪ್ಪಲುಗಳನ್ನು ಮತ್ತು ಅರಣ್ಯಗಳನ್ನು ಕಡಿದು ಹಾಕುತ್ತೇವೆ. ಆದರೂ ಕೆಳಗೆ ನಿಂತುಕೊಳ್ಳುವುದಕ್ಕೆ ಕಿಂಚಿತ್ತು ನೆರಳಿಲ್ಲವೆಂದು ಆಶ್ಚರ್ಯ ಪಡುತ್ತೇವೆ. ಹೆದ್ದಾರಿಗಳಲ್ಲಿ ಮರಗಳನ್ನು ಬಿಟ್ಟಿದ್ದರೆ, ನೆರೆಹೊರೆಯ ಹಳ್ಳಿಯವರು, ಟಾರು ರಸ್ತೆಯ ಮೇಲೆ ಕುಳಿತುಕೊಂಡು ತಮ್ಮ ವಿರಾಮವನ್ನು ಕಳೆಯುತ್ತಾರೆ. ಇದು ಏತಕ್ಕೆಂದರೆ, ಅವರು ಹಳ್ಳಿಗಳ ಸಮೀಪದಲ್ಲಿರುವ ಎಲ್ಲ ಮರಗಳನ್ನೂ ಕಡಿದು ಹಾಕಿದ್ದಾರೆ ಮತ್ತು ನೇರ ಸಂಚಾರ ಮಾರ್ಗಗಳ ಮಧ್ಯೆ ನೆರಳನ್ನು ಕಾಣಬೇಕಾಗಿದೆ. ಹಿಂದಿನ ಕಾಲದ ರಾಜರನ್ನು, ಸಾರ್ವಜನಿಕ ಸ್ಥಳಗಳಲ್ಲಿ ಮರಗಳನ್ನು ನೆಟ್ಟ ಮಹತ್ಕಾರ್ಯಕ್ಕಾಗಿ ಶ್ಲಾಘಿಸಿದ್ದಾರೆ.

ಎರಡು ಅನುಸಿದ್ಧಾಂತಗಳನ್ನು ಇದರಿಂದ ನಿರ್ಧರಿಸಬಹುದು. ಇವು ಉದ್ಯಾನ ರಚನೆಯಲ್ಲಿ ಬಹಳ ಪ್ರಾಮುಖ್ಯವಾದುವು. ಮೊದಲನೆಯದು, ರಕ್ಷಿಸಬಹುದಾದ

ಯಾವ ಮರವನ್ನೂ ಕಡಿಯಬಾರದು. ಒಂದು ಕಟ್ಟಡವನ್ನು ಕಟ್ಟುವಾಗ, ನೆಲವನ್ನು ಮಟ್ಟ ಮಾಡಲು ಆದರ ಮೇಲೆ ಬೆಳೆಯುತ್ತಿರುವ ಎಲ್ಲವನ್ನೂ ತೆಗೆಯುವುದು ಸಾಮಾನ್ಯ ಅಭ್ಯಾಸ. ನ್ಯಾಯವಾಗಿ ಇದರ ವ್ಯತಿರಿಕ್ತವಾಗಿ ಯೋಚಿಸಬೇಕು. ನಿವೇಶನದ ಮೇಲಿರುವ ಮರವನ್ನೂ ಉಳಿಸುವುದಕ್ಕೆ ಎಲ್ಲ ಪ್ರಯತ್ನಗಳನ್ನೂ ಮಾಡಬೇಕು; ಬೇಕಾದರೆ ಕಟ್ಟಡದ ನಕ್ಷೆಯಲ್ಲಿ ಮಾರ್ಪಾಡುಗಳನ್ನು ಕೂಡ ಮಾಡಬೇಕು. ಒಂದು ಕುಂಠಿತ ಮರವನ್ನೂ ಸಂರಕ್ಷಿಸುವುದು ಅರ್ಹ. ಏಕೆಂದರೆ ಸ್ವಲ್ಪ ಗಮನ ಕೊಟ್ಟಲ್ಲಿ ಅದು ದೊಡ್ಡ ಮರವಾಗಿ ಬೆಳೆದು ನೆರಳನ್ನು ನೀಡಬಹುದು. ಒಂದು ವೇಳೆ ನಿವೇಶನದಲ್ಲಿ ಒಂದು ಅಥವಾ ಹೆಚ್ಚು ದೊಡ್ಡ ಅಥವಾ ಹಳೆಯ ಮರಗಳಿದ್ದರೆ, ಅವುಗಳು ಪ್ರಾಮುಖ್ಯವಾದ ನಾಭಿ ಬಂಧಗಳಾಗುವಂತೆ, ಕಟ್ಟಡವನ್ನು ಯೋಜಿಸಬಹುದು. ನಿವೇಶದಲ್ಲಿನ ಮರಗಳು ಅಷ್ಟು ಆಕರ್ಷಕವಾಗಿಲ್ಲದಿದ್ದರೂ, ಅವುಗಳನ್ನು ಪ್ರಥಮದಲ್ಲಿ ಕೆಲವು ವರ್ಷಗಳಾದರೂ, ಅಂದರೆ ಹೊಸ ಮರಗಳು ಸಾಕಷ್ಟು ಬೆಳೆಯುವ ತನಕ ಅವುಗಳನ್ನು ರಕ್ಷಿಸಬೇಕು.

ಎರಡನೆ ಅನುಸಿದ್ಧಾಂತ, ಪ್ರತಿಯೊಂದು ಮರವೂ 'ಕಾಲದ' ಪ್ರಮಾಣದಲ್ಲಿ ಬಹಳ ದುಬಾರಿಯಾದುದರಿಂದ, ಸರಿಯಾದ ಜಾತಿಯನ್ನೇ ಆರಿಸಬೇಕು. ಅನೇಕ ವೇಳೆ ಅವಸರದಲ್ಲಿ ಮರವನ್ನು ನೆಡುತ್ತಾರೆ ಮತ್ತು ಅದು ಪಕ್ವ ಸ್ಥಿತಿಗೆ ಬಂದಾಗ, ಆ ನಿರ್ದಿಷ್ಟ ಜಾತಿಗೆ ಅನೇಕ ಅನಾನುಕೂಲಗಳಿವೆಯೆಂದು ಕಂಡುಕೊಳ್ಳುತ್ತಾರೆ.

ಆದರ್ಶವಾಗಿ, ಹೊಸ ಉದ್ಯಾನವನ್ನು ನಿರ್ಮಿಸುವಾಗ ಎರಡು ಅವಧಿಗಳಲ್ಲಿ ನೆಡಬೇಕು. ಮೊದಲನೆಯ ಹಂತದಲ್ಲಿ ತ್ವರಿತವಾಗಿ ಬೆಳೆಯುವ, ತತ್ಕಾಲಕ್ಕಾಗಿ ಆದರೆ ಆದಷ್ಟು ಜಾಗ್ರತೆಯಾಗಿ, ಉದ್ಯಾನಕ್ಕೆ ಕಾರ್ಯದ ನೋಟವನ್ನು ಕೊಡುವಂತಿರುವವುಗಳನ್ನು ನೆಡಬೇಕು. ಇದರ ಜೊತೆಗೆ ಎರಡನೆಯ ಹಂತದಲ್ಲಿ, ದೊಡ್ಡದಾದ, ನಿಧಾನವಾಗಿ ಬೆಳೆಯುವ ಮರಗಳನ್ನು ಅಂದರೆ ಉದ್ಯಾನದ ಚಿರಸ್ಥಾಯಿ ಉಪಕರಣಗಳಾಗುವಂತಹದನ್ನು ನೆಡಬೇಕು. ಇದನ್ನು ಹೇಳುವುದು ಪ್ರಾರಂಭದಲ್ಲಿ ಬಹಳ ಸುಲಭವಾದ ಕೆಲಸ ಮತ್ತು ನೆರವೇರಿಸುವುದು ಬಹಳ ಕಷ್ಟವೆಂದು ನಾನು ಚೆನ್ನಾಗಿಬಲ್ಲೆ. ಅದನ್ನು ಸಂಪೂರ್ಣವಾಗಿ ನೆರವೇರಿಸುವುದರಲ್ಲಿ ಅಯಶಸ್ವಿಯಾದರೂ, ಸಮಸ್ಯೆಗಳ ಬಗ್ಗೆ ಅರಿವಿದ್ದರೆ ಹೇಗಾದರೂ, ಯಾರೊಬ್ಬನ ವ್ಯಕ್ತಿತ್ವಕ್ಕೆ, ತೋಟಗಾರನಾಗಲು ಮೆರುಗು ಕೊಡುತ್ತದೆ.

ಹೇಗೆ ದೂರದಿಂದಲೇ ನಡಿಗೆಯ ರೀತಿಯಿಂದ ಸ್ನೇಹಿತನನ್ನು ಗುರುತಿಸಬಲ್ಲೆವೋ ಅಥವಾ ಪಕ್ಷಿ ವೀಕ್ಷಕನು, ಹಾರುವ ರೀತಿ ಮತ್ತು ಚಲನೆಗಳಿಂದ ಪಕ್ಷಿಗಳನ್ನು ಕಂಡುಕೊಳ್ಳುತ್ತಾನೋ, ಹಾಗೆಯೆ ಉದ್ಯಾನ ಪ್ರೇಮಿಯು ಪ್ರತಿಯೊಂದು ಮರದ ರೂಪದಿಂದಲೇ ಗುರುತಿಸುವಂತಾಗಬೇಕು. "ರೂಪ" ಅಂದರೆ ನನ್ನ ಅರ್ಥದಲ್ಲಿ, ಅದು ಕಾಣುವುದಕ್ಕಿಂತ ಸ್ವಲ್ಪ ಹೆಚ್ಚಾಗಿ, ಅಂದರೆ ಅದರ ಲಕ್ಷಣ ಅಥವಾ ವೈಶಿಷ್ಟ್ಯ ಮತ್ತು ರೇಖೆಗಳು. ಸಾಮಾನ್ಯ ಉದ್ಯಾನ ಮರಗಳ ಬಗ್ಗೆ, ಭೂದೃಶ್ಯಗಾರನು ತಿಳಿದುಕೊಳ್ಳಬೇಕಾದ ಕೆಲವು ಟಿಪ್ಪಣಿಗಳನ್ನು ಕೆಳಗೆ ಕೊಡಲಾಗಿದೆ.

***ಮಳೆ ಮರ:*** ಎತ್ತರ ಹಿತಕರ, ಸುಂದರವಾದ, ಮೇಲಕ್ಕೆ ಡೊಂಕಾಗಿ ಹೋಗುವ

ಟೊಂಗೆಗಳುಳ್ಳ ಸ್ತಪ್ಪಾಕಾರದ, ಛತ್ರಿಯ ಮೇಲ್ಕಟ್ಟನ್ನು ಹೊಂದಿರುವ ಆಶ್ರಯದಾತ.

*ಕತ್ತಿಕಾಯಿ ಮರ:* ರೂಪ ಮತ್ತು ಎಲೆಗಳಲ್ಲಿ, ಮಳೆ ಮರಕ್ಕಿಂತಲೂ ಹಗುರವಾಗಿದ್ದರೂ ಉಜ್ವಲ ವರ್ಣದ ಪುಷ್ಪಗಳಿಂದ ತುಂಬಿರುತ್ತದೆ; ಅಲ್ಪಕಾಲ ಜೀವಿತ, ಸುಮಾರು ಅರ್ಧ ವರ್ಷ ಎಲೆ ರಹಿತವಾಗಿರುವುದು.

*ಗುಲಾಬಿ ಕ್ಯಾಷ:* ಸರಿಯಾಗಿ ಉಪಯೋಗಿಸಿದರೆ, ಜಪಾನೀಯರ ಚೆರ್ರಿ ಬ್ಲಾಸಮ್‌ನ ಹಾಗೆ ಇರುವುದು, ಆದರೆ ನಿರ್ಬಲ ಮತ್ತು ಅಲ್ಪ ಜೀವಿ.

*ಕಕ್ಕೆ:* ತುಲನಾತ್ಮಕವಾಗಿ ಚಿಕ್ಕದು ಮತ್ತು ನಿಕೃಷ್ಟ; ಆದರೆ ಏಪ್ರಿಲ್-ಮೇ ತಿಂಗಳುಗಳಲ್ಲಿ ಹಳದಿ ಹೂಗಳಿಂದ ಚಿಮ್ಮುತ್ತದೆ.

*ದೇವ ಗಣಗಲೆ:* ಇದನ್ನು ಒಂದು ಶಿಲ್ಪದಂತೆ ಪರಿಗಣಿಸಬಹುದು.

ರಸ್ತೆ ಉದ್ದಕ್ಕೂ, ತೋಟಗಳಲ್ಲಿ, ಪಾರ್ಕುಗಳಲ್ಲಿ, ಬಹಿರಂಗ ಸ್ಥಳಗಳಲ್ಲಿ, ಕಾಡುಗಳಲ್ಲಿ ಗಮನವಿಟ್ಟು ನಡೆಯುತ್ತಿದ್ದರೆ, ಸ್ಥಳೀಯ ಸಾಮಾನ್ಯ ಮರಗಳ ಬಗ್ಗೆ ಬಹಳ ಬೇಗ ತಿಳಿದುಕೊಳ್ಳಬಹುದು. ಮರಗಳ ಬಗ್ಗೆ ಇಂಥ ಸೂಕ್ಷ್ಮಜ್ಞಾನ ಸರಿಯಾದ ಮರಗಳನ್ನು ಆರಿಸಲಿಕ್ಕೆ ಸಹಾಯ ಮಾಡುತ್ತದೆ. ಸುಂದರ ಮುಖವನ್ನು ನೋಡಿ ನವಯುವಕರು ಹೇಗೆ ಮಾರುಹೋಗುತ್ತಾರೋ ಹಾಗೆ ಒಬ್ಬ ಅನನುಭವಿ ಬೆಡಗಿನ ಪುಷ್ಪಗಳಿಗೆ ಮಾರು ಹೋಗುತ್ತಾನೆ. ಚೆನ್ನಾಗಿ ಪರಿಚಯವಾದ ನಂತರ ವರ್ಷಾದ್ಯಂತ ಸುಂದರವಾಗಿರುವ, ಛಾಯೆ ನೀಡುವ ಮತ್ತಿತರ ಗುಣಗಳ ಕಡೆ ಗಮನ ಹರಿಸುತ್ತಾನೆ. ಹೊಸ ಉತ್ಸಾಹಿಗಳಿಗೆ ಇನ್ನೊಂದು ದೌರ್ಬಲ್ಯವೆಂದರೆ, ಪರದೇಶಿ ಗಿಡಗಳ ಹಿಂದೆ ಬೀಳುವುದು. ಒಂದು ಅಪರೂಪವಾದ ಜಾತಿಯನ್ನು ಹೊಂದುವ ಮತ್ತು ಅದನ್ನು ಬೆಳೆಯುವುದನ್ನು, ಮಹಾಸಾಧನೆಯೆಂದು ಪರಿಗಣಿಸಲಾಗಿದೆ; ವಾಸ್ತವವಾಗಿ ಇದು ನಿಜವೆ. ಆದರೆ ಅನೇಕ ವಿಷಯಗಳಲ್ಲಿ, ಯಾವುದಾದರೂ ಜಾತಿ ಅಪರೂಪವಾಗಿದ್ದರೆ, ಅಂಥ ಸಾಧನೆ ಒಳ್ಳೆಯದೆ. ಚಪಲಚಿತ್ತರನ್ನು ತೃಪ್ತಿಪಡಿಸಲು ಬೇಕಾದ ಅನೇಕ ಜಾತಿಗಳು ಹೆಚ್ಚುಕಡಿಮೆಯಾಗಿ ಭಾರತದ ಎಲ್ಲಾ ಭಾಗಗಳಲ್ಲೂ ವಿಪುಲವಾಗಿವೆ. ಸಾಮಾನ್ಯ ಮರಗಳನ್ನು ಉಪಯೋಗಿಸಿ ಭವ್ಯವಾದ ಉದ್ಯಾನಗಳನ್ನು ರಚಿಸಬಹುದಾಗಿರುವಾಗ, ಕಾಲವ್ಯಯ ಮಾಡಿ ಅಪರಿಚಿತ ಮತ್ತು ಅಸಾಮಾನ್ಯ ಜಾತಿಗಳನ್ನು ಹೊಂದುವುದು ದುಬಾರಿ ಮತ್ತು ಅವುಗಳು ಬದುಕದೆ ಇರಬಹುದು. ನೆನೆಸಿಕೊಳ್ಳಬೇಕಾದ ಬಹಳ ಪ್ರಾಮುಖ್ಯವಾದ ವಿಷಯವೇದರೆ ಬಹಳ ಅಪರೂಪವಾದ ಮರಗಳು ಯಾವಾಗಲೂ ಅಪರೂಪವಲ್ಲ ಅಥವಾ ಅಸಾಮಾನ್ಯವೂ ಅಲ್ಲ. ಅವುಗಳು ಚೆನ್ನಾಗಿ ಬೆಳೆಯುತ್ತವೆ ಮತ್ತು ಆರೋಗ್ಯಕರವಾಗಿರುತ್ತವೆ. ಪ್ರತಿದಿನ ನೋಡುವ ಬಹಳ ಸಾಮಾನ್ಯ ಗಿಡಗಳು ಕೂಡ ಅಷ್ಟೇ ಮೋಹಕವಾಗಿರುತ್ತವೆ.

ಮರಗಳನ್ನು ನೆಡುವಾಗ ಗಮನಿಸಬೇಕಾದ ಒಂದು ಪ್ರಾಯೋಗಿಕ ವಿಷಯವೆಂದರೆ ನಮ್ಮಲ್ಲಿನ ಅನೇಕ ಹೂ ಬಿಡುವ ಮರಗಳು ನೀರನ್ನು ಬಯಸುವುದಿಲ್ಲ ಮತ್ತು ಅಂಥವನ್ನು ನೀರು ಕೊಡುವ ಸ್ಥಳಗಳಿಂದ ದೂರವಾಗಿ ಇಡಬೇಕು. ಹುಲ್ಲುಹಾಸಿನ ಮೇಲೆ ಹೂ ಬಿಟ್ಟಿರುವ ಕಕ್ಕೆ ಮರದ ದೃಶ್ಯ ಆಹ್ಲಾದಕರ, ಆದರೆ ಹುಲ್ಲುಹಾಸಿಗೆ

ನೀರು ಕೊಡಬೇಕಾದ ಪಕ್ಷದಲ್ಲಿ ಕಕ್ಕೆ ಚೆನ್ನಾಗಿ ಹೂ ಬಿಡುವುದಿಲ್ಲ; ಆಕಸ್ಮಿಕವಾಗಿ ನೀರು ಕೊಟ್ಟರೂ ಕೂಡ.

ತಾಳೆಗಳ ವರ್ಗ, ಯಾವಾಗಲೂ ಇತರ ಜಾತಿಯ ಮರಗಳೊಂದಿಗೆ ಲೀನವಾಗುವುದಿಲ್ಲ. ಅವುಗಳ ಲಕ್ಷಣಗಳು ಬಹಳ ಭಿನ್ನ ಮತ್ತು ಅದೇ ಸಮಯದಲ್ಲಿ ಮಿಶ್ರ ಸಮೂಹದಲ್ಲಿ ಬಹಳ ಪ್ರಾಧಾನ್ಯತೆಯನ್ನು ಹೊಂದುತ್ತವೆ. ತಾಳೆಯ ತಂಡ ಕಡಲಿನ ತೀರದ ಉದ್ದಕ್ಕೆ ಅಥವಾ ತಮ್ಮಷ್ಟಕ್ಕೆ ತಾವೆ ನಿಂತಿರುವಾಗ ಪರಿಣಾಮಕಾರಿಯಾಗಿರುತ್ತವೆ. ಆದರೆ ಎತ್ತರವಾದ, ನೆಟ್ಟಗಿರುವ ಕಾಂಡಗಳು ಮತ್ತು ದೃಢವಾದ, ಸ್ಪಷ್ಟವಾದ ಎಲೆಗಳು, ಇತರ ಎಲೆಗಳೊಡನೆ ಬೆರೆಯುವುದಿಲ್ಲವಾದುದರಿಂದ ಜಾಗರೂಕತೆಯಿಂದ ನಿರ್ವಹಿಸಬೇಕಾಗುತ್ತದೆ. ದುರಸ್ತಿಯಲ್ಲಿನ ದೊಡ್ಡ ಸಮಸ್ಯೆಯೆಂದರೆ, ಅವುಗಳ ಎಲೆಗಳು ಒಣಗಿದಾಗ ಅಸಹ್ಯವಾಗುವುದರಿಂದ ಕತ್ತರಿಸಬೇಕು. ಸಾರ್ವಜನಿಕ ಪಾರ್ಕುಗಳಲ್ಲಿ ತಾಳೆಗಳು ಅತಿ ಅಚ್ಚುಮೆಚ್ಚಿನವಾದುದರಿಂದ, ನಿಸ್ಸಂದೇಹವಾಗಿಯೇ ಶ್ರೇಷ್ಠ ಗುಣಗಳನ್ನು ಹೊಂದಿವೆ. ಚಿಕ್ಕ ಉದ್ಯಾನಗಳಲ್ಲಿ, ಅವುಗಳನ್ನು ಬಹಳ ಜಾಗರೂಕತೆಯಿಂದ ಅನುಗೊಳಿಸಬೇಕಾಗಿದೆ. ಆದರೂ ದೊಡ್ಡ ಸಾರ್ವಜನಿಕ ಸ್ಥಳಗಳಿಗೂ, ನಾನು ಒಂದು ಎಚ್ಚರಿಕೆಯನ್ನು ಕೊಡಬೇಕಾಗಿದೆ. ಕೆಲವು ತಾಳೆಗಳು, ದೃಷ್ಟಾಂತಕ್ಕೆ, ಭಗಿನಿ ಜಾತಿಯ ತಾಳೆಯನ್ನು ಹತೋಟಿಯಲ್ಲಿಡದಿದ್ದರೆ, ಇತರ ಒಳ್ಳೆಯ ಮರಗಳಿಗೂ ಅವಕಾಶಕೊಡದಂತೆ ಬೆಳೆದು ಹೊರಗಿಡುತ್ತದೆ. ಅವು ಅನಾಕರ್ಷಣೀಯ ಸ್ಥಳಗಳಲ್ಲಿ, ಅನೇಕ ಹೊಸ ಕಂದಗಳನ್ನು ಅಥವಾ ಮರಗಳನ್ನು ಹೊರಗೆಡುವುತ್ತವೆ.

ಒಂದು ಎಳೆಯ ಭಗಿನಿ ತಾಳೆಗೆ, ಮಾವಿನ ಅಥವಾ ಇತರ ಅಮೂಲ್ಯ ಗಿಡಗಳಲ್ಲಿ ತೂರಿಕೊಂಡು ಹೋಗುವ ಸಾಮರ್ಥ್ಯವಿದೆ ಮತ್ತು ಅದರ ಸ್ಥಳವನ್ನು ಆಕ್ರಮಿಸಿಕೊಳ್ಳುತ್ತವೆ. ಇಂಥ ಕೆಲವು ತಾಳೆಗಳು ತಮ್ಮ ಸ್ವಸ್ಥಾನಗಳಲ್ಲಿಯೆ ಇರುವಂತೆ ಎಚ್ಚರಿಕೆ ವಹಿಸಬೇಕು.

ಮರಗಳ ನೆಡುವಿಕೆಯಲ್ಲಿ ಅಸಂಖ್ಯಾತ ಸಂಯೋಜನೆ ಮತ್ತು ಪರಿವರ್ತನೆಗಳು ಸಾಧ್ಯ. ಇಂಗ್ಲಿಷ್ ಭೂದೃಶ್ಯಗಾರನು ಮರಗಳನ್ನು ದೊಡ್ಡ ತಂಡಗಳಲ್ಲಿ, ಮಧ್ಯೆಮಧ್ಯೆ ವಿಶಾಲ ಹುಲ್ಲಿನ ಕ್ಷೇತ್ರವನ್ನು ಬಿಟ್ಟು ನೆಡುವುದನ್ನು ಇಷ್ಟಪಡುತ್ತಾನೆ. ಇಂತಹ ಭೂದೃಶ್ಯಗಳಲ್ಲಿ ಒಂದು ತರಹ ನೈಜಿಕ ಮತ್ತು ಕ್ರಮಬದ್ಧ ಸೌಂದರ್ಯತೆ ಇದೆ; ಇದು ಸಾಮಾನ್ಯ ತೋಟಗಾರನಿಗೆ ಒಳ್ಳೆಯ ಅಭ್ಯಾಸದ ನಿಯಮವಾಗಿ ಕಾಣುತ್ತದೆ. ಅರ್ಥದಾಯಕ ತಂಡಗಳಲ್ಲಿ ನೆಡಿರಿ, ಬಹಿರಂಗ ಸ್ಥಳಗಳೊಡನೆ ಪರ್ಯಾಯಗೊಳಿಸಿ. ರೂಢಿಯಲ್ಲಿ ಆಕಸ್ಮಿಕ ರೀತಿಯ ನೆಡುವಿಕೆಗೆ ಒಲವು ಹೆಚ್ಚು. ಎಲ್ಲಿ ಸ್ಥಳವಿದೆಯೋ ಅಲ್ಲಿ ಒಂದು ಮರವನ್ನು ಇರಿಸುವುದು, ಅದರ ಎತ್ತರ, ಹರವು ಮತ್ತು ಲಕ್ಷಣಗಳು ಒಬ್ಬನು ಸಾಧಿಸಬೇಕೆಂದಿರುವ ಪರಿಣಾಮಗಳನ್ನು ಸೃಜಿಸುತ್ತದೋ ಇಲ್ಲವೋ ಎಂಬುದನ್ನು ಯೋಚಿಸುವುದಕ್ಕೂ ಅವಕಾಶವಿಲ್ಲದೆ ನೆಡುತ್ತಾನೆ. ವಾಸ್ತವವಾಗಿ ಸಾಧಿಸಬೇಕೆಂದಿರುವ ಪರಿಣಾಮದ ಬಗ್ಗೆ ಗಾಢ ಮನೋಭಾವ ಅಪರೂಪ.

ಒಂದು ಬಹು ಚಿಕ್ಕ ಸ್ಥಳದಲ್ಲಿ, ಪಾಶ್ಚಿಮಾತ್ಯ ದೇಶಗಳಲ್ಲಿ ಯೋಚಿಸದೆ

ಅನುಸರಿಸುವ ಆದರ್ಶಮಯ ರಚನೆಯೆಂದರೆ, ನೈಜಿಕ ರೀತಿಯಲ್ಲಿ ಮರಗಳನ್ನು ಉದ್ಯಾನದ ಸೆರಗುಗಳ ಸುತ್ತಲೂ, ದೊಡ್ಡ ಮರಗಳು ಹಿಂಭಾಗದಲ್ಲಿರುವಂತೆ ಮತ್ತು ಬಹಳ ಚಿಕ್ಕವು (ಅಂದರೆ ಹೊದರುಗಳು) ಮುಂಭಾಗದಲ್ಲಿರುವಂತೆ ನೆಡುವುದು. ಚಿಕ್ಕ ತೋಟಗಳಲ್ಲಿ, ಮಧ್ಯದಲ್ಲಿರುವ ಸ್ಥಳವನ್ನು ತಡೆ ಇಲ್ಲದೆ ಹೂ ರಾಶಿಗಳಿಗಾಗಿ ಮತ್ತು ತಗ್ಗಾದ ಗಿಡಗಳ ನೆಡುವಿಕೆಗೆ ಬಿಡುವುದು. ತನ್ನ ತೀರ್ಮಾನ ಮತ್ತು ಕಲ್ಪನಾಶಕ್ತಿಯ ಬಗ್ಗೆ ನಂಬಿಕೆ ಇಲ್ಲದಿರುವವನು ಅನುಸರಿಸಲು ಇದು ಅಂಥ ಕೆಟ್ಟ ಮಾದರಿ ಎನಿಸಿಕೊಳ್ಳುವುದಿಲ್ಲ. ಆದರೆ ನಿವೇಶನಕ್ಕನುಸಾರವಾಗಿ ಯುಕ್ತವಾದ ರೀತಿಯಲ್ಲಿ ಮಾರ್ಪಡಿಸಿಕೊಳ್ಳಬೇಕು. ಪಟ್ಟಣದಲ್ಲಿನ ಒಂದು ಚಿಕ್ಕ ನಿವೇಶನದಲ್ಲಿ ಮರಗಳಿಗೆ ಬದಲಾಗಿ ಹೊದರುಗಳನ್ನು ಉಪಯೋಗಿಸುವುದರಿಂದ, ಅಳತೆಯನ್ನು ಕಡಿಮೆ ಮಾಡುತ್ತಾನೆ.

ಇಂಥ ರಚನೆ ನೆರೆಹೊರೆಯವರಿಂದ ಮರೆಯಾಗಲು ಅನುಕೂಲವಾಗುತ್ತದೆ. ಒಂದು ಚಿಕ್ಕ ಖಾಸಗಿ ಹಸಿರಿನ ಪ್ರಪಂಚವನ್ನು ಸೃಷ್ಟಿಸಿಕೊಂಡು, ಬಿಸಿಲಿನ ತಾಪ ಹೆಚ್ಚಿದಾಗ ಮರಗಳ ನೆರಳಿನ ಕೆಳಗಿದ್ದು, ಮಿಕ್ಕ ಕಾಲಗಳಲ್ಲಿ ಆಕಾಶ, ನಕ್ಷತ್ರ ಅಥವಾ ಚಂದ್ರನ ಬಿಂಬವನ್ನು ಆನಂದಿಸುತ್ತಾ ಇರಬಹುದು. ನಿವೇಶನದ ಎಲ್ಲ ಕಡೆಯೂ ಚೆಲ್ಲಾಪಿಲ್ಲಿಯಾಗಿ ಹರಡಿರುವ ಮರಗಳು, ಅವ್ಯವಸ್ಥಿತ ಸಂಯೋಜನೆಯ ಜೊತೆಗೆ ಗಾಢ ಛಾಯೆಯ ಅಥವಾ ತೆರೆದ ಆಕಾಶದ ಅನುಕೂಲಗಳನ್ನು ಹೊಂದಿರುವುದಿಲ್ಲ. ನೆಟ್ಟಗಿರುವ ಮರದ ಕಾಂಡದ ಲಂಬ ರೇಖೆಗಳು ಎಲೆ ಗುಂಪುಗಳ ಮುಖಾಂತರ ನೋಡಿದಾಗಲೂ ಕೂಡ, ಮೇಲೇರುವ ರೇಖೆಗಳ ಸಮರ್ಥ ಮಾದರಿಯನ್ನು ಉಂಟು ಮಾಡುತ್ತವೆ ಮತ್ತು ಅವುಗಳನ್ನು ಸರಿದೂಗಲು ಯುಕ್ತವಾದ ಸಮತಲ ರೇಖೆಗಳನ್ನು ಕಂಡು ಹಿಡಿಯುವುದು ಒಂದು ಕಷ್ಟವಾದ ಸಮಸ್ಯೆ. ಸ್ವೀಡನ್ನಿನ ಒಂದು ಹೊಸ ಸಮಾಧಿ ಭೂಮಿಯಲ್ಲಿ ಚೊಕ್ಕಟವಾದ ಎತ್ತರವಾದ ಪೈನ್ ಮರಗಳ ಮಧ್ಯೆ, ತಗ್ಗಾದ ಗೋರಿಗಳು, ಉಚಿತವಾದ ಸಮತಲ ವೈಲಕ್ಷಣಗಳನ್ನು ತೋರಿಸುವ ಒಂದು ಸೊಗಸಾದ ದೃಷ್ಟಾಂತ. ಈ ಸ್ಮಶಾನ ಭೂಮಿಯ ಯಶಸ್ವಿಯನ್ನು ಕಂಡು ಸಂಕುಚಿತ ರಚನೆಗಳಲ್ಲಿ, ಮರದ ಕಾಂಡಗಳ ವ್ಯತಿರಿಕ್ತ ಪ್ರಭಾವವನ್ನು ತಗ್ಗಿಸಲು, ತಗ್ಗಾದ ಆಯಾಕಾರ ಸ್ವರೂಪಗಳಿಗಾಗಿ ನೋಡಬೇಕೆಂದು ಗ್ರಹಿಸಿದೆ. ಸರಳ ಸಮಾಧಿಯ ಆಕಾರ ಮತ್ತು ಅಳತೆಯನ್ನು ಬಹುಮಟ್ಟಿಗೆ ಹೋಲುವ ವಸ್ತು ಎಂದರೆ, ತಗ್ಗಾದ ಮಟ್ಟವಾದ ಮತ್ತು ಆಯಾಕಾರದ ಎಂಟು ಅಂಗುಲ ಎತ್ತರವಿರುವ ಬೆಂಡು. ಇದು ಬರೀ ಸಿಮೆಂಟಿನ ಅಥವಾ ಕಾಂಕ್ರೀಟಿನ ದಪ್ಪವಾದ ಹಲಗೆ. ಬಹು ಮಟ್ಟಿಗೆ ಕಾಣದಿರುವ ಕಾಲುಗಳ ಮೇಲೆ ನಿಂತಿರುವ, ಯಾವುದಾದರೂ ಮಾನವ ನಿರ್ಮಿತ ವಸ್ತುಗಳಂತೆ, ನಾಶಗೊಳಿಸಲಾಗದ, ಸಾರ್ವಜನಿಕರು ಉಪಯೋಗಿಸುವ ವಸ್ತು.

ಕ್ಷಮಿಸಲಾಗದ ತಪ್ಪೆಂದರೆ, ಬಹಳ ಪ್ರಾಧಾನ್ಯವಾಗಿರುವ ರೇಖೆಗಳುಳ್ಳ ಹೊದರುಗಳನ್ನು ಮರಗಳ ಮಗ್ಗುಲುಗಳಲ್ಲಿ ನೆಡುವುದು. ಮುಂಬೈನಲ್ಲಿ ಸಾಮಾನ್ಯವಾಗಿ ಕ್ರೋಟನ್ನುಗಳನ್ನು ಮರಗಳ ಮಧ್ಯೆ ನೆಡುವುದು ವಾಡಿಕೆ. ಏಕೆಂದರೆ ಅವು ಅಷ್ಟಾಗಿ ಚೆನ್ನಾಗಿ ಕಾಣುವುದಿಲ್ಲವಾದರೂ, ಅವುಗಳು ಸಾಯುವುದಿಲ್ಲವೆಂಬ

ನಂಬಿಕೆ. ಈಗ ಎತ್ತರವಾದ, ನೇರವಾದ ಮರಗಳು ಮತ್ತು ಪಕ್ಕದಲ್ಲಿಯೆ ಪುಕ್ಕಗಳಿಂತಿರುವ ಕ್ರೋಟನ್‌ಗಳು – ಅಂಥ ಸಂಯೋಜನೆಯನ್ನು ಊಹಿಸಿಕೊಂಡರೆ, ಅವುಗಳ ಒಳ್ಳೆ ರೂಪಗಳ ಬಗ್ಗೆ, ಒಂದು ಇನ್ನೊಂದನ್ನು ಕುಂದಿಸುತ್ತದೆ ಎಂಬುದರ ಬಗ್ಗೆ ಒಂದು ಕಲ್ಪನೆಯನ್ನು ಪಡೆಯಬಹುದು. ಇದು ಒಬ್ಬ ಸ್ತ್ರೀ ತನ್ನ ಬಗ್ಗೆ ಮತ್ತು ತನ್ನ ಅತ್ತೆ ಬಗ್ಗೆ ಹೇಳಿದಂತೆ ಅಂದರೆ – ಇಬ್ಬರಲ್ಲಿಯ ಅತ್ಯಂತ ಕೆಟ್ಟದನ್ನು ಹೊರಗೆಡಹುವಂತೆ ಕಾಣುತ್ತದೆ. ಇಲ್ಲಿ ಕೂಡ, ಒಂದು ಮರ, ಅದರ ಪಕ್ಕದಲ್ಲಿ ತೆಳುವಾದ ಒಂದು ಚಿಕ್ಕ ಹೊದರು – ಇವೆರಡರಲ್ಲಿಯ ಅತ್ಯಂತ ಕೆಟ್ಟದನ್ನು ಹೊರಗೆಡಹುವಂತೆ ಇರುತ್ತದೆ. ಮರಗಳ ಮಧ್ಯೆ ಚೆನ್ನಾಗಿ ಕಾಣುವ ಏಕಮಾತ್ರ ಹೊದರುಗಳೆಂದರೆ, ವ್ಯಾಪಕವಾದ, ಸಮತಲವಾಗಿರುವ ಹರವು ಅಥವಾ ತಗ್ಗಾಗಿರುವ ದುಂಡನೆಯ ಆಕಾರಗಳನ್ನು ಹೊಂದಿರುವವು. ಇಂಥ ಗುರಿಯನ್ನು ಸಾಧಿಸಲು ಮೇಲ್ನಾಡಿನಲ್ಲಿ ರೋಡೋಡೆಂಡ್ರಾನ್ ಮತ್ತು ಅಜೇಲಿಯಾಗಳು ಬಹಳ ಶ್ಲಾಘನೀಯ. ಎತ್ತರವಾದ ಮತ್ತು ನೇರವಾದ ಮರಗಳಿಗೆ ಅದ್ಭುತವಾದ ವರ್ತಿ ರೇಖೆಗಳಾಗುತ್ತವೆ; ನೆಲ ಮತ್ತು ಮರಗಳ ಕಾಂಡಗಳ ಮಧ್ಯದ ತೆರಪನ್ನು ತುಂಬುವ ಸಮಸ್ಯೆಗೆ ಇವು ಪರಿಪೂರ್ಣ ಉತ್ತರವನ್ನು ನೀಡುತ್ತವೆ. ಒಂದು ಪ್ರಖ್ಯಾತ ಇಂಗ್ಲಿಷ್ ಉದ್ಯಾನ ಸ್ವಾರ್ ಹೆಡ್, ಪರಿಣಾಮಕ್ಕೋಸ್ಕರ ದುಂಡನೆ ಛಾವಣಿಯ ಆಕಾರದ ರೋಡೋಡೆಂಡ್ರಾನ್ ಪೊದೆಗಳನ್ನು ಅವಲಂಬಿಸಿದೆ. ಇವು ನಿವೇಶನದ ದುಂಡನೆಯ ಡೊಂಕುಗಳನ್ನು ಅನುಕರಣ ಮಾಡುತ್ತವೆ.

ಭಾರತದ ಮೈದಾನ ಪ್ರದೇಶಗಳ ಕೆಲವು ಹೊದರುಗಳು ಸ್ವಾಭಾವಿಕವಾಗಿಯೆ ಇಂಥ ರೂಪವನ್ನು ತಾಳುತ್ತವೆ, ಆದರೆ ಅನೇಕವನ್ನು ಸಮರಿಕೆಯಿಂದ ಮತ್ತು ಇತರೆ ಒತ್ತಡಗಳಿಂದ, ಇಂಥ ಆಕಾರವನ್ನು ಹೊಂದುವಂತೆ ಪ್ರೇರೇಪಿಸಬಹುದು. ಉದಾಹರಣೆಗೆ ಥನ್‌ಬರ್ಜಿಯ ಎರೆಕ್ಟ್, ಹೋಮ್ಸ್ ಕಿಯಾಲ್ಡಿಯ, ಸಾಮಾನ್ಯ ಗುಂಡು ಮಲ್ಲಿಗೆಯಲ್ಲಿ ಕೂಡ ಉಂಟುಮಾಡಬಹುದು.

ಯಾವ ಭೂದೃಶ್ಯದಲ್ಲಿಯೇ ಆಗಲಿ, ಸಮತಲ ರೇಖೆ ಯಾವಾಗಲೂ ಲಂಬ ರೇಖೆಗಿಂತ ಪ್ರಬಲವಾಗಿರುತ್ತದೆ. ಅಂತಿಮ ರೇಖೆ ಬಂದು ಆಕಾಶ; ದೂರದಿಂದ ನೋಡಿದಾಗ ಎತ್ತರವಾದ ಪರ್ವತಶ್ರೇಣಿ ಕೂಡ ಉದ್ದನೆಯ ಮಟ್ಟವಾದ ಆಕಾರವನ್ನು ಹೊಂದಿರುತ್ತದೆ. ತಗ್ಗಾದ ಮಟ್ಟವಾಗಿರುವ ಸಪಾಟಗಳು, ಮರಗಳ ಸೌಂದರ್ಯವನ್ನು ಎದ್ದು ಕಾಣುವಂತೆ ಮಾಡಲು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ ಮತ್ತು ನ್ಯಾಯವಾದ ರೀತಿಯಲ್ಲಾಗಲೀ ಅಥವಾ ಹೊಲಸು ರೀತಿಯಿಂದಾಗಲಿ ಇದನ್ನು ಚಿತ್ರದಲ್ಲಿ ಸೇರಿಸಬೇಕು. ತಗ್ಗಾದ ಮತ್ತು ಅಗಲವಾದ ಹೂ ಪಾತಿ, ಮಟ್ಟವಾದ ರೇಖೆಗಳುಳ್ಳ ಬೇಲಿ, ಭೂಮಿಯಲ್ಲಿ ಹೂತಲ್ಪಟ್ಟು ತಗ್ಗಾದ ಮತ್ತು ಅಗಲವಾದ ಆಕಾರಗಳನ್ನು ಹೊಂದಿರುವ ದೊಡ್ಡ ಕಲ್ಲುಗಳು, ಎರಡು ಬಗೆ ನೆಲಹೊದಿಕೆಗಳ ಮಧ್ಯೆ ಇರುವ ಸ್ಪಷ್ಟವಾದ ಎಲ್ಲೆಗೆರೆ ಕೂಡ, ಸ್ಪಷ್ಟವಾದ ನಿರುಪದ್ರವ ರೇಖೆಯನ್ನು ಕೊಡುತ್ತವೆ.

ಎತ್ತರವಾದ ಮರಗಳು ಮತ್ತು ತಗ್ಗಾದ ರೇಖೆಗಳಿರುವ ಉದ್ಯಾನ ಒಂದು

ನಿರುಪದ್ರವ ಉದ್ಯಾನ. ಆದೇ ಮನುಷ್ಯನ ಎತ್ತರವಿರುವ ಹೊದರುಗಳಿಂದ ತುಂಬಿದ್ದರೆ ಅಸ್ತಮಿತ ಉದ್ಯಾನವಾಗುವುದು. ಇದರಿಂದಾಗಿ ಕುಂಡಗಳಿಂದ ತುಂಬಿರುವ ಉದ್ಯಾನ ಸಾಮಾನ್ಯವಾಗಿ ಅತೃಪ್ತಿಕರ. ಭೂಮಿಯಲ್ಲಿ ಬೆಳೆಯುವ





ಚಿತ್ರ 7 ಮರದ ಕಾಂಡದ ಸಮೀಪದಲ್ಲಿ ಸಜೀವ ಅಥವಾ ನಿರ್ಜೀವ ವಸ್ತುಗಳ ಲಂಬರೇಖೆಗಳು ಮರದ ಸೌಂದರ್ಯವನ್ನು ಕುಂದಿಸುತ್ತವೆ. ಮರದ ಪಕ್ಕದಲ್ಲಿ ಸಮತಲರೇಖೆಗಳನ್ನು ಅನುಗೊಳಿಸುವುದು ಉತ್ತಮ

ಹೊದರುಗಳನ್ನು ಒಂದು ತಂಡವಾಗಿರುವಂತೆ ಅನುಗೊಳಿಸಬೇಕು. ಆದರೆ ಒಂದು ಕುಂಡದ ಗಿಡ ವೈಯಕ್ತಿಕವಾಗಿಯೆ ಕುಂಡದಲ್ಲಿ ಪ್ರತ್ಯೇಕವಾಗಿ ಇರಬೇಕಾಗುತ್ತದೆ. ಅನವಶ್ಯಕವಾದ ಎತ್ತರವನ್ನು ಕುಂಡದಲ್ಲಿರುವುದರಿಂದ ತಡೆಯುತ್ತದೆ. ಉದ್ಯಾನಶಾಸ್ತ್ರದ ಪ್ರಕಾರ ಅದು ಎಷ್ಟೇ ಯಶಸ್ವಿಯಾಗಿರಲಿ, ಭೂದೃಶ್ಯದ ಒಂದು ಘಟಕಾಂಶದ ಪ್ರಕಾರ ಸಾಮಾನ್ಯವಾಗಿ ಮನಸ್ಸಿಗೆ ಸಂಕೋಚವನ್ನುಂಟು ಮಾಡುತ್ತದೆ.

ಅದೃಷ್ಟವಶಾತ್ ಕುಂಡಗಳ ಬೆಲೆ ಬಹಳ ಏರಿರುವುದರಿಂದ, ಜನರು ಅವುಗಳನ್ನು ಹೆಚ್ಚಾಗಿ ಹೊಂದಲು ಹಿಂಜರಿಯುತ್ತಾರೆ. ಇದೆಲ್ಲಾ ಒಳ್ಳೆಯದೆ. ಆದರೆ ಕೆಲವು ಸ್ಥಳಗಳಲ್ಲಿ ಕುಂಡಗಳಲ್ಲಿ ಗಿಡಗಳು ಚೆನ್ನಾಗಿ ಬೆಳೆಯುವುದು ದಿಟವೆ. ಅಂದರೆ ಎಲ್ಲಿ ಕುಂಡಗಳ ವಿನಃ ಬೇರೆ ಗತಿ ಇಲ್ಲವೋ, ಆಗ ದಟ್ಟವಾಗಿ ಕುಂಡಗಳನ್ನು ಕೂಡಿಸುವುದರಿಂದಾಗಲಿ ಅಥವಾ ಒಂದೇ ಜಾತಿಯ ಅನೇಕ ಕುಂಡಗಳನ್ನು ಜೋಡಿಸಿಯೋ ಅಥವಾ ಆಳವಲ್ಲದ ಹಳ್ಳಗಳನ್ನು ತೋಡಿ, ಅವುಗಳಲ್ಲಿ ಹಲವನ್ನು ಇಡುವುದರಿಂದಲೋ ಅಂಥ ಸಂದರ್ಭಗಳನ್ನು ತೃಪ್ತಿಕರವಾಗಿ ನಿರ್ವಹಿಸಬಹುದು. ಹೂಳುವುದರಿಂದ ಜಿಗುಪ್ಸೆ ಹುಟ್ಟಿಸುವ ಅವುಗಳ ಎತ್ತರ ಮತ್ತು ಜಿಗುಪ್ಸೆಗೊಳಿಸುವ ಧಾರಕಗಳು ಕಣ್ಣಿಗೆ ಬೀಳದಂತಿರುತ್ತವೆ. ಇಂತಹ ಕುಂಡಗಳ ನಿರ್ವಹಣೆಯಿಂದ ಅನೇಕ ಅನುಕೂಲಗಳಿವೆ. ಏಕೆಂದರೆ, ಆಳವಿಲ್ಲದೆ ಗುಂಡಿಗಳನ್ನು ವರ್ಷಾದ್ಯಂತ ಪುಷ್ಪಭರಿತವಾಗಿರುವಂತೆ ಮಾಡಬಹುದು.

ಒಂದು ನಿರ್ದಿಷ್ಟ ಉದ್ಯಾನ ಮರವನ್ನು ಆಯ್ಕೆ ಮಾಡಲು ಕಾರಣ ಹಣ್ಣಿಗಾಗಿ ಅಥವಾ ಹೂವಿಗಾಗಿ. ಮಹತ್ವಪೂರ್ಣ ಹಣ್ಣುಗಳಾದ ಮಾವು, ಲಿಚ್ಚಿ, ಸೇಬು, ಮರಸೇಬು ಮತ್ತು ಪೀಜುಗಳನ್ನು ಬಿಟ್ಟು (ಅವು ಚೆನ್ನಾಗಿ ಬೆಳೆಯುವ ಸ್ಥಳಗಳಲ್ಲಿ) ಇನ್ನೂ ಅನೇಕ ಹಣ್ಣು ಮತ್ತು ಕಾಯಿಗಳನ್ನು ಮಕ್ಕಳ ಮನರಂಜನೆಗಾಗಿ ನೆಡಬಹುದು. ಮರದಿಂದ ನೇರವಾಗಿ ಕಿತ್ತು ತಿನ್ನುವುದರಲ್ಲಿ ಬಹಳ ಆನಂದವಿದೆ. ತಿನ್ನಲಾರದಷ್ಟು ಹುಳಿಯಾಗಿದ್ದರೂ ಕೂಡ ಉಪ್ಪು ನೇರಳೆ, ಕಿರುನೆಲ್ಲಿ, ಕೊಮ್ರಕ್, ಬಿಳಿಂಬಿ, ಕರುಂಡ, ಎಲಚಿ ಇವೆಲ್ಲವೂ ಚಿಕ್ಕದಾದರೂ, ತ್ವರಿತವಾಗಿ ಬೆಳೆಯುವ, ಅಷ್ಟು ಸೊಗಸಲ್ಲದಿದ್ದರೂ, ಮಕ್ಕಳ ತಂಡಗಳನ್ನು ಸಂತೋಷವಾಗಿಡುತ್ತವೆ. ಇವುಗಳನ್ನು ಸ್ವಲ್ಪ ಹೆಚ್ಚಾಗಿ ತಿಂದರೂ ಹೊಟ್ಟೆ ನೋವಿಗಿಂತಲೂ ಇನ್ನೇನು ಹೆಚ್ಚು ತೊಂದರೆ ಆಗಲಾರದು. ಆದುದರಿಂದ ದೊಡ್ಡ ನಿವೇಶನಗಳಲ್ಲಿ, ಮುಂದಿನ ಜನಾಂಗದವರ ಉಪಯೋಗಕ್ಕಾಗಿ, ದೃಷ್ಟಿಗೆ ಬೀಳದ ಒಂದು ಮೂಲೆಯನ್ನು ಇದಕ್ಕಾಗಿಯೆ ಮೀಸಲಿಡುವುದು ಒಳ್ಳೆಯದು. ಹೂ ಬಿಡುವ ಮತ್ತು ಅಲಂಕಾರಿಕ ಮರಗಳು ಬಹಳ ಇವೆ. ಅವುಗಳನ್ನು ಇಲ್ಲಿ ವಿವರಿಸುವುದು ಅಸಾಧ್ಯ.

ಸಾಮಾನ್ಯವಾಗಿ ಹೂ ಬಿಡುವ ಜಾತಿಗಳನ್ನು, ಬೇರೆ ಇತರೆ ಲಕ್ಷಣಗಳನ್ನು ಅವಗಾಹನೆಗೆ ತೆಗೆದುಕೊಳ್ಳದೆ, ಕೇವಲ ಅವುಗಳ ಬಣ್ಣ ಮತ್ತು ಪುಷ್ಪಗಳ ರೂಪಗಳ ಆಧಾರದ ಮೇಲೆ ಆಯ್ಕೆ ಮಾಡುತ್ತಾರೆ. ಇದು ಯಥಾರ್ಥವಾಗಿ ಗ್ರಹಿಸತಕ್ಕ ವಿಷಯವೆ ಮತ್ತು ಒಂದು ರೀತಿಯಲ್ಲಿ ಅದು ಹಾಗೆಯೇ ಇರಬೇಕು. ಗುಲ್‌ಮೊಹರ್ ಅನ್ನು ನೆಡುವಾತನು, ತನ್ನ ತೋಟದಲ್ಲಿ ಗಾಢ ಕಡುಗೆಂಪು

ಬಣ್ಣವನ್ನು ನೋಡುವ ಬಯಕೆಯಿಂದ ನೆಡುತ್ತಾನೆ. ಆ ಮರವು ದುರ್ಬಲ, ಹೆಚ್ಚು ಬಾಳಲಾರದು, ನಿರ್ದಿಷ್ಟವಾಗಿ ನೆರಳನ್ನು ನೀಡಲಾರದು, ಅದರ ಎಲೆಗಳು ಸದಾ ಉದುರುತ್ತಿರುವುದರಿಂದ, ಅದು ಕೆಲವು ತಿಂಗಳು ಕಾಲ ಬತ್ತಲೆಯಾಗಿರುವುದಷ್ಟೇ ಅಲ್ಲದೆ ಇನ್ನಾವ ಗಿಡವನ್ನೂ ಅದರ ಕೆಳಗೆ ಬೆಳೆಯಲು ಕಷ್ಟ ಎಂಬುದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಪ್ರಾಯಶಃ ಒಂದು ಅಸಾಧ್ಯವಾದ ಗುಣಕ್ಕೋಸ್ಕರವಾಗಿಯೇ ಮರವನ್ನು ಆಯ್ಕೆ ಮಾಡುವುದು ಮತ್ತು ಅವುಗಳ ಇತರ ಅವಗುಣಗಳ ಬಗ್ಗೆ ಶಾಂತತೆಯಿಂದ ಇರುವುದನ್ನು ಕಲಿಯುವುದು ಒಳ್ಳೆಯದು. ಪ್ರತಿಯೊಂದು ಮರವೂ ಸದ್ಗುಣಗಳಿಂದಲೇ ಆಗಲಿ ಅವಗುಣಗಳಿಂದವೇ ಆಗಲಿ ತುಂಬಿಲ್ಲ. ಆದರೆ ಅವುಗಳ ಅವಗುಣಗಳ ಬಗ್ಗೆ ವಿಚಾರಿಸುವುದು ಉತ್ತಮ. ಏಕೆಂದರೆ ಅವುಗಳ ಅತ್ಯಂತ ಕೀಳು ಸ್ವಭಾವವನ್ನು ಮೊದಲೇ ತಿಳಿದುಕೊಳ್ಳುವುದು ಬುದ್ಧಿವಂತಿಕೆ. ಆದರೆ ಒಬ್ಬ ಉತ್ಸಾಹಿ ತೋಟಗಾರನು, ಅವುಗಳ ಅವಗುಣಗಳನ್ನು ತಿಳಿದೂ, ತಾನು ಕಾಣುವ ಸುಂದರವಾದುದನ್ನು ಬೆಳೆಯುತ್ತಾನೆಂಬುದು ಸಂದೇಹಾಸ್ಪದ.

ಅದೇ ವೇಳೆಯಲ್ಲಿ, ಕೆಲವು ಮರಗಳು ಕೆಲವು ನಿರ್ದಿಷ್ಟ ಕಾರ್ಯಗಳನ್ನು, ಇತರೆ ಮರಗಳಿಗಿಂತ ಹೆಚ್ಚು ಯಶಸ್ವಿಯಾಗಿ ಮಾಡಬಲ್ಲವೆಂಬುದನ್ನು ತಿಳಿದು ಮನಸ್ಸಿನಲ್ಲಿಟ್ಟುಕೊಳ್ಳುವುದು ಉಪಯೋಗಕರ. ಉದಾಹರಣೆಗೆ ಕೆಲವು ಮರಗಳು, ಅವುಗಳ ಕೆಳಗೆ ಕುಳಿತುಕೊಳ್ಳುವುದಕ್ಕೋಸ್ಕರವಾಗಿಯೆ ಸೃಷ್ಟಿಸಲ್ಪಟ್ಟಿವೆ. ಕೆಲವು ನೆರೆಹೊರೆಯುವರನ್ನು ಮರೆಮಾಚಲು, ಕೆಲವಂತೂ ದೂರದಿಂದಲೇ ಆಕರ್ಷಕವಾಗಿರುವಂತೆ ಕಾಣಲು ಮತ್ತು ಇನ್ನೂ ಕೆಲವು ಪ್ರಾಧಾನ್ಯತೆ ಕೊಡುತ್ತಾ, ಪಹರೆಯುವರಂತೆ ನಿಂತಿರುತ್ತವೆ.

ದೃಷ್ಟಾಂತರಕ್ಕಾಗಿ, ಸೈಪ್ರೆಸ್, ಸಾಂಪ್ರದಾಯಕವಾಗಿ ಪ್ರಾಧಾನ್ಯತೆ ಕೊಡುತ್ತದೆ. ಅದರ ಬೆಡಗಿನ ಆಕಾರ ಮತ್ತು ಅಡಕಗಳಲ್ಲಿ ಬದಲಾವಣೆಗಳನ್ನು ಹೊಂದುವುದಿಲ್ಲವೆಂದು ನಂಬಬಹುದು. ಸೈಪ್ರೆಸ್‌ಗಳನ್ನು ದಾರಿಯುದ್ದಕ್ಕೂ ಸಾಲು ಮರಗಳಂತೆ ನೆಟ್ಟಾಗ ಕೂಡ, ನಿರಂತರ ಶ್ರೇಣಿಯಾಗಿ ಕಾಣುವ ಬದಲು, ಸೈನಿಕರು ಎಚ್ಚರಿಕೆಯಿಂದ ನಿಂತಿರುವ ಹಾದಿಯು ಪರಿಣಾಮವನ್ನು ನೀಡುತ್ತದೆ. ಎಲ್ಲಾ ಎತ್ತರವಾಗಿ ಬೆಳೆಯುವ ಮರಗಳನ್ನು, ನಮಗೆ ತೋಚಿದಂತೆ, ಕಡಿಮೆ ಅಂತರದಲ್ಲಿ ನೆಡಬೇಕು. ಏಕೆಂದರೆ ನೀವೇನಾದರೂ ಮರದ ಕೆಳಗಿದ್ದರೆ ಪುಷ್ಪಗಳು ದೃಷ್ಟಿ ಬಾಹಿರವಾಗಿರುತ್ತವೆ.

ಹಲವು ವೇಳೆ ಅಕ್ಕಪಕ್ಕದವರು ಅದರ ಆನಂದವನ್ನು ಪಡೆಯುತ್ತಾರೆ. ಆದರೆ ಅದು ತಮ್ಮ ಸ್ವತ್ತೆಂದು ಅದನ್ನು ನೆಟ್ಟು ದುರಸ್ತಿ ಮಾಡುತ್ತಿರುವವೆಂಬ ಸಮಾಧಾನ ಮಾತ್ರ ಪಡೆಯಬಹುದು. ಕೆಳಗೆ ಕುಳಿತುಕೊಳ್ಳುವುದಕ್ಕೆ ಅತ್ಯಂತ ಸೂಕ್ತವಾದ ಮರಗಳು, ಸ್ವಾಭಾವಿಕವಾಗಿ ಎರಡು ಸದ್ಗುಣಗಳನ್ನು ಹೊಂದಿರಬೇಕು – ವಿಶಾಲವಾದ ಹರವು ಮತ್ತು ಅತ್ಯಲ್ಪಕಾಲ ಬರಡಾಗಿರುವಿಕೆ. ಮಳೆಮರ ಬಹುಮಟ್ಟಿಗೆ ಆದರ್ಶ ಪ್ರಾಯವಾದದ್ದು. ಇದು ಬಹಳ ಎತ್ತರವಾಗಿರುತ್ತದೆ. ತಲೆಗೆ ಹೊಡೆಯುವಂತೆ ತಗ್ಗಿನಲ್ಲಿ ಕೊಂಬೆಗಳಿಲ್ಲ. ಎಂದಿಗೂ ಎಲೆ ಇಲ್ಲದಿರುವುದಿಲ್ಲ.

ಭಾರತದ ಉಪಖಂಡದಲ್ಲಿ ಇದು ಅತ್ಯಂತ ಸೊಬಗಿನ ಮರಗಳ ಪೈಕಿ ಒಂದು ಎಂದು ಹೇಳಬಹುದು. ಇದರ ಮತ್ತೊಂದು ವಿಶೇಷತೆ ಎಂದರೆ ಇದರ ಪುಷ್ಪಗಳು ಸುಂದರವಾಗಿದ್ದರೂ ಅವುಗಳು ದೊಡ್ಡ ಆಕರ್ಷಣೆಯಲ್ಲ. ಆದ್ದರಿಂದ ಕೆಳಗೆ ಕುಳಿತ ಜನರು ಪುಷ್ಪಗಳನ್ನು ನೋಡಲಾಗದಿದ್ದಲ್ಲಿ ದುಃಖಪಡಬೇಕಾಗಿಲ್ಲ.

ಕೆಳಗೆ ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ಮತ್ತೊಂದು ಮರ ಹಳದಿ ಗುಲ್‌ಮೊಹರ್ ಅಥವಾ ಕೆಲ್ಟೋ ಫೋರಮ್, ಅದರ ಟೊಂಗೆಗಳು ಕೆಳಗೆ ಬಾಗುವ ಸಂಭವವಿರುವುದರಿಂದ ಆಗಾಗ್ಗೆ ಹಿಂದಕ್ಕೆ ಕತ್ತರಿಸುತ್ತಿರಬೇಕು. ವರ್ಷದಲ್ಲಿ ಸುಮಾರು ಮೂರು ವಾರಗಳ ಕಾಲ ಎಲೆ ಶೂನ್ಯವಾಗಿರುತ್ತದೆ. ಗಾಢವಾದ ದೊಡ್ಡ ಮಾವಿನ ನೆರಳು, ವಾಸ್ತವವಾಗಿ ಕುಳಿತುಕೊಳ್ಳುವ ಸ್ಥಳಕ್ಕೆ ಆದರ್ಶಪ್ರಾಯವಾದದ್ದು. ವಿಶೇಷ ಸಂದರ್ಭಗಳಲ್ಲಿ, ಒಂದೇ ಕೊರತೆಯೆಂದರೆ ಇರುವೆಗಳು ಅದರ ಪರಿಸರಗಳಲ್ಲಿ ಮನೆ ಮಾಡುತ್ತವೆ. ಕಂತ್ರಿ ಬಾದಾಮಿ, ಒಡೆಯನಿಗೆ ನೆರಳು ನೀಡುವುದಕ್ಕಾಗಿಯೆ ರಚಿಸಲ್ಪಟ್ಟಿದೆಯೆಂಬಂತೆ ಕಾಣುತ್ತದೆ. ರಾಜ್ಯದ ಛತ್ರಿಯಂತೆ ಕಾಣುತ್ತದೆ. ದೊಡ್ಡ ನೆರಳು ಬೀರುವ ಎಲೆಗಳು ಅಂತಸ್ತುಗಳ ಮೇಲೆ ಅಂತಸ್ತುಗಳಂತೆ, ಸರ್ವೋತ್ತಮವಾದ ಉದ್ಯಾನ ಛತ್ರಿಯ ಹಾಗೆ ಮಾದರಿಗೊಂಡಿವೆ. ಆದರೆ ಈ ರಚನೆಗೆ ಒಂದು ಹಾನಿಕಾರಕ ದೋಷವಿದೆ. ಪ್ರತಿವರ್ಷ ನೆರಳು ಬೀರುವ ಎಲೆಗಳು, ಉಜ್ವಲ ಕೆಂಪಿಗೆ ತಿರುಗಿ ಬಿದ್ದು ಹೋಗುತ್ತ ಛತ್ರಿಯ ಪಕ್ಕೆಲುಬುಗಳನ್ನು ಹೊರತೋರಿಸುತ್ತವೆ. ಇದರಿಂದಾಗಿ ಸಂಸ್ಥಾನಾಧೀಶರು, ವರ್ಷದ ಮೂರು ನಾಲ್ಕು ತಿಂಗಳು ಛಳಿಗಾಲದಲ್ಲಿ ಅಸಮಾಧಾನದಿಂದ ಕುಳಿತು, ಸೂರ್ಯನ ತಾಪಕ್ಕೆ ಮೈ ಒಡ್ಡಬೇಕಾಗುತ್ತದೆ.

ಬೊಂಬಿನ ಮೆಳೆಯು ಯುಕ್ತವಾದ ಸ್ಥಳಗಳಲ್ಲಿ ಯಾವಾಗಲೂ ನೆರಳನ್ನು ಕೊಡಲಾರದು. ಆದರೆ ಒಂದು ರಮ್ಯವಾಗ ವಾತಾವರಣವನ್ನು ಸೃಜಿಸುತ್ತದೆ. ಉದ್ಯಾನದ ದೂರದ ಅಂಚಿನಲ್ಲಿ ಬೊಂಬುಗಳನ್ನು ಬಹಳ ಯುಕ್ತವಾಗಿ ಅನುಗೊಳಿಸಬಹುದು. ಅವು ಅಲ್ಲಿ ನೈಜಿಕವಾಗಿಯೆ ಹುಟ್ಟಿವೆ ಎಂಬಂತೆ ನಟಿಸಬಹುದು. ಅದು ಹೇಗೋ ಕ್ರಮಬದ್ಧ ಹುಲ್ಲುಹಾಸಿನ ಮೇಲೆ ಒಂದು ಬೊಂಬಿನ ಮೆಳೆಯು ಅಸಮಂಜಸವಾಗಿ ಕಾಣುತ್ತದೆ ಆದರೆ ಬೆರಳು ತೋರಿಸಿ ಇದೇ ಕಾರಣವೆಂದು ಹೇಳುವುದು ಬಹಳ ಕಷ್ಟ. ಬೊಂಬಿನ ಸಮಗ್ರ ಹೊರ ಎಲ್ಲೆ ಸಾಮಾನ್ಯ ಮರಗಳಿಗಿಂತ ವಿಭಿನ್ನ. ಇದು ಪ್ರಯೋಜನಕಾರಿಯೂ ಹೌದು. ಅಪ್ರಯೋಜನಕಾರಿಯೂ ಹೌದು. ದೇವಗಣಗಲೆ ಹೇರಳ ವಾತಾವರಣವನ್ನು ಹೊಂದಿರುವ ಇನ್ನೊಂದು ಮರ. ಆದರ ಹೂ ಮತ್ತು ಎಲೆಗಳು, ಚೀನಿಯರ ಚಿತ್ರಪಠ ಎದ್ದು ಬರುವಂತೆ ಮಾಡುತ್ತವೆ.

ಟ್ಯೂಲಿಪ್ ಮರ ಅಥವಾ ನೀರುಕಾಯಿಯಂಥ ಮರಗಳು ಬಹಳ ಎತ್ತರವಾಗಿರುತ್ತವೆ. ಆದರೆ ಅದರ ಹರವು ಚಿಕ್ಕದು. ಕೆಳಗೆ ಕುಳಿತುಕೊಳ್ಳುವುದಕ್ಕೆ ಅವು ಅಷ್ಟು ಪ್ರಯೋಜನವಲ್ಲ. ಆದರೆ ಕೆಲ ಸಸ್ಯಗಳನ್ನು ಕೆಳಗೆ ಅಥವಾ ಅಡಿಯಲ್ಲಿ ಬೆಳೆಯುವುದಕ್ಕೆ ಬಿಡುತ್ತವೆ. ಇದು ಕೆಲವು ವಿಶೇಷ ಸನ್ನಿವೇಶಗಳಲ್ಲಿ ಬಹಳ ಪ್ರಯೋಜನಕಾರಿ. ವಾಸ್ತವವಾಗಿ ಕೆಳಗಿನ ಟೊಂಗೆಗಳನ್ನು ಹಿಂದಕ್ಕೆ ಕತ್ತರಿಸಬಹುದು

ಮತ್ತು ಕತ್ತರಿಸಬೇಕು. ಕಾಂಡದ ಅಡಿಯಲ್ಲಿ ಬೆಳವಣಿಗೆ ಸುಗಮವಾಗಲು ಮತ್ತು ಇನ್ನು ಮುಖ್ಯವಾಗಿ ಉದ್ದನೆಯ ಸಾಲು ಬೀದಿಗಳ ದೃಷ್ಟಿಯನ್ನು ಸೃಷ್ಟಿಸಲು ಮತ್ತು ಶಾಂತ ವಿಶಾಲತೆಯ ಭಾವ ಮೂಡಿಸಲು, ಸಂಕ್ಷಿಪ್ತವಾಗಿ ಹೇಳಬೇಕಾದರೆ, ಇದು ಸಮರ್ಪಕವಾದ ಮತ್ತು ಸರಿಯಾದ ಮರವೆಂದು ತೋರುತ್ತದೆ. ಹೆಚ್ಚು ಹಣವನ್ನು ವ್ಯಯ ಮಾಡುವಾಗ ಎಷ್ಟು ಯೋಚಿಸಿ ಹುಷಾರಾಗಿರುತ್ತೇವೆಯೋ, ಹಾಗೆಯ ಮರವನ್ನು ನೆಡುವಾಗ ಅಷ್ಟೇ ಹುಷಾರಾಗಿರಬೇಕು. ಅನೇಕ ವೇಳೆ ಅದರ ಮುಗ್ಧ ಮುಖಕ್ಕಾಗಿ ಒಂದು ಮರವನ್ನು ಆಯ್ಕೆ ಮಾಡಿ, ಎಲ್ಲ ಖಾಲಿ ಸ್ಥಳವಿದೆಯೋ ಅಲ್ಲಿ ನೆಡುವುದುಂಟು. ಯಾರೂ ಒಂದು ಆಭರಣವನ್ನು ಅಚಾತುರ್ಯ ಮತ್ತು ಅವಸರವಾಗಿ ಆಯ್ಕೆ ಮಾಡುವುದಿಲ್ಲ, ಹಾಗೆಯೇ ಆರಿಸಿದ ಮೇಲೆ ಅನುಚಿತ ರೀತಿಯಲ್ಲಿ ಕಟ್ಟಿಸುವುದಿಲ್ಲ. ಒಂದು ಮರವನ್ನು ಕೂಡ ಆಯ್ದುಕೊಳ್ಳಬೇಕು ಮತ್ತು ಅದರ ಮುಖ ಬಹಳ ಚೆನ್ನಾಗಿ ಕಾಣುವಂತಿರುವ ಸ್ಥಳದಲ್ಲಿ ನೆಡಬೇಕು.

ಅನೇಕ ಸಂದರ್ಭಗಳಲ್ಲಿ ಉದ್ಯಾನ ಬಹಳ ದೊಡ್ಡದಾಗಿಲ್ಲದ ಪಕ್ಷದಲ್ಲಿ, ಮರಗಳು ಪಹರೆಯ ಕೆಲಸವನ್ನೂ ಮಾಡಬೇಕಾಗುತ್ತದೆ. ಎಲ್ಲೆಗಳನ್ನು ಸಂರಕ್ಷಿಸುತ್ತಾ, ಏಕಾಂತತೆಯನ್ನು ನಿಶ್ಚಿತಗೊಳಿಸುತ್ತಾ ಉದ್ಯಾನ ಎಲ್ಲೆ ಮತ್ತು ವಿಸ್ತೀರ್ಣವನ್ನು, ಗೋಡೆ ಅಥವಾ ಬೇಲಿಯಿದ್ದರೂ ಕೂಡ, ನಿರ್ವಹಿಸಬೇಕಾಗುತ್ತದೆ. ಸೂಕ್ತವಾದ ಮರಗಳ ಆಯ್ಕೆಯಲ್ಲಿ ಎಲ್ಲಾ ಲೆಕ್ಕಾಚಾರಗಳ ಜೊತೆಗೆ ಮುಖ್ಯವಾಗಿ ಗಮನಿಸಬೇಕಾದ ವಿಷಯವೆಂದರೆ, ಕೆಲವು ಟೊಂಗೆಗಳು ಸಾರ್ವಜನಿಕ ರಸ್ತೆ ಅಥವಾ ಅಕ್ಕಪಕ್ಕದವರ ಆಸ್ತಿಯ ಮೇಲೆ ಹೊರದಾಟುವುದರಿಂದ ಇದು ಹಣ್ಣಿನ ಮರಗಳಿಗೆ ವಿಪತ್ತು ಒದಗಿಸುತ್ತದೆ. ಹಣ್ಣುಗಳು ನಿಶ್ಚಯವಾಗಿ ಕಳ್ಳತನವಾಗಬಹುದು ಮತ್ತು ಈ ಕಾರ್ಯದಲ್ಲಿ ಮರಕ್ಕೆ ಜಖಂ ಆಗಬಹುದು. ಹೂಗಳು ಕೂಡ ಕೆಳಗೆ ಬಿಟ್ಟರೆ ಕೀಳಲ್ಪಡಬಹುದು. ತಗ್ಗಿನಲ್ಲಿ ಬೆಳೆಯುವ ಟೊಂಗೆಗಳನ್ನು ಸೀಳಿ ಸೌದೆಗಾಗಿ ಸಂಗ್ರಹಿಸಬಹುದು. ವಿಧ್ವಂಸಕಾರಿ ಅಕಾರ್ಯಗಳನ್ನು ಬಿಟ್ಟರೆ, ಮಾವಿನಂಥ ದೊಡ್ಡ ಮರಗಳು ಆದರ್ಶನೀಯ ಎಲ್ಲೆ ಮರಗಳಾಗಬಹುದು. ನಮ್ಮ ಸ್ವಂತ ನಿರ್ದಿಷ್ಟ ಸನ್ನಿವೇಶಗಳಿಗೆ ಸೂಕ್ತವಾಗಿ, ಕನಿಷ್ಟ ಸಮಸ್ಯೆಗಳನ್ನು ಒಡ್ಡಿ ಅತ್ಯಂತ ಹೆಚ್ಚಿನ ಸಂತೋಷವನ್ನು ನೀಡುವ ಯುಕ್ತ ಜಾತಿಗಳನ್ನೇ ಆರಿಸಬೇಕು. ಅನೇಕ ವೇಳೆ ನಿವೇಶನಗಳು ದೊಡ್ಡದಾಗಿದ್ದರೆ ಪೆಟ್ರೋಫೋರಮ್ ಮತ್ತು ಮಳೆ ಮರಗಳು ಬಲು ಸೂಕ್ತ. ಅವು ಸ್ವಲ್ಪ ಮಟ್ಟಿಗೆ ದುರ್ವ್ಯವಹಾರಗಳನ್ನು ಸಹಿಸಿಕೊಳ್ಳುತ್ತವೆ ಮತ್ತು ಉದಾರವಾಗಿ ಉದ್ಯಾನದ ಹೊರಗಿನ ಎಲ್ಲೆಗೂ ನೆರಳನ್ನು ನೀಡಬಲ್ಲವು.

ಎಲ್ಲೆ ಮರಗಳ ಬಗ್ಗೆ ಎರಡನೆಯ ವಿಷಯವೆಂದರೆ ಒಂದೇ ಸಾಲಿನಲ್ಲಿ ಒಂದೇ ಆಕಾರದ ಮರಗಳನ್ನು ನೆಡಬಾರದು. ಮರಗಳನ್ನು ಒಂದೆರಡು ಸಾಲುಗಳಲ್ಲಿ, ಕ್ರಮವಿಲ್ಲದೆ, ಕೆಲವು ಸ್ಥಳಗಳಲ್ಲಿ ಹೆಚ್ಚು ಸಾಮೂಹಿಕವಾಗಿರುವಂತೆ, ಕೆಲವೆಡೆ ಕಮ್ಮಿ ಇರುವಂತೆ ನೆಡಬೇಕು. ಮೂಲೆಗಳಲ್ಲಿ ಸ್ಪಷ್ಟವಾಗಿ, ನೆಡುವಿಕೆ ಹೆಚ್ಚು ಅಗಲದಲ್ಲಿರಬೇಕು. ಇದು ಮೊನಚಾದ ಎಲ್ಲೆಯ ಕೋನಗಳನ್ನು ಮರೆಮಾಚುತ್ತದೆ. ಇವುಗಳೆಲ್ಲದರ ಮುಖ್ಯ ಧ್ಯೇಯವೆಂದರೆ, ದೃಷ್ಟಿಗೆ ಗೋಚರವಾಗುವ ತೆರವು

ಹಿತವಾದ ಮತ್ತು ಕುತೂಹಲಕರವಾದ ಆಕಾರದಂತಿರಬೇಕು. ಒತ್ತಾಗಿ ಬೆಳೆದ, ತಾರತಮ್ಯನುಸಾರವಾಗಿ ಇರುವ ಗಿಡ ಸಂಗ್ರಹಗಳಿರಬೇಕು. ಹೊರಗಿನ ಪ್ರಪಂಚವನ್ನು ಬಹಿಷ್ಕರಿಸುವಂತಿದ್ದು, ಆದರೆ ಒಳಗಿನ ಪ್ರಪಂಚದಲ್ಲಿ ಹಲವಾರು ಅತ್ಯಂತ ಸುಂದರವಾದ ಮತ್ತು ಕುತೂಹಲಕರವಾದ ಸಜೀವ ವಸ್ತುಗಳ ಮತ್ತು ನೈಜಿಕ ವಸ್ತುಗಳ ಅಡ್ಡ ಕೊಯ್ತುವನ್ನು ಪ್ರತಿಬಿಂಬಿಸುವಂತಿರಬೇಕು.

## ಹೊದರುಗಳು

ಮರ ಮತ್ತು ಹೊದರುಗಳನ್ನು ನಿಖರವಾಗಿ ಪ್ರತ್ಯೇಕಿಸುವ ರೇಖೆಯನ್ನು ನಾನು ಕಂಡುಕೊಳ್ಳಲು ಇನ್ನೂ ಆಗಿಲ್ಲ. ಒಟ್ಟಿನಲ್ಲಿ ಚಿಕ್ಕದಾಗಿರುವ ಮರವನ್ನು ಹೊದರು ಎಂದು ಕರೆಯಬಹುದು. ಆದರೂ ಅನೇಕ ಹೊದರುಗಳಲ್ಲಿ ರೆಂಬೆಯೊಡೆಯುವಿಕೆ ಮತ್ತು ಸಾರ್ವತ್ರಿಕ ಬೆಳವಣಿಗೆಯ ಸ್ವಭಾವಗಳು ಮರಗಳಿಗಿಂತ ಭಿನ್ನವಾಗಿವೆ. ವೈಜ್ಞಾನಿಕವಾಗಿಯೂ ಮತ್ತು ಭಾಷಾಶಾಸ್ತ್ರದ ಅನುಗುಣವಾಗಿಯೂ ಮರ ಮತ್ತು ಹೊದರುಗಳ ಮಧ್ಯೆ ಏನೇ ವ್ಯತ್ಯಾಸಗಳಿರಲಿ, ಇಲ್ಲದಿರಲಿ ಭೂದೃಶ್ಯ ಶಿಲ್ಪಿ ಅವೆರಡೂ ಬೇರೆ ಬೇರೆ ಎಂಬುದನ್ನು ತಿಳಿಯಲು ಕಲಿಯುತ್ತಾನೆ. ಎತ್ತರ, ಸ್ಥೂಲತ್ವ ಮತ್ತು ಹೊದರಿನ ಸಾಂದ್ರತೆ, ಮರದಿಂದ ಎಷ್ಟು ಭಿನ್ನವಾಗಿದೆಯೆಂದರೆ, ಅವೆರಡರ ಮಧ್ಯೆ ಬದಲಾವಣೆಗಳಾಗುವ ಸಮಸ್ಯೆಯೇ ಏಳುವುದಿಲ್ಲ. ಒಂದು ತೆರಪು, ಸ್ವಭಾವ ಸಿದ್ಧವಾಗಿ ಮರ ಅಥವಾ ಹೊದರಿಗೆ ಸೇರಬೇಕು.

ಭೂದೃಶ್ಯ ಶಿಲ್ಪಿಗೆ ಒಂದು ಸಾಮಾನ್ಯ ಹೊದರಿನ ವಿವರಣೆ ಹೀಗಿರುತ್ತದೆ: ತಕ್ಕ ಮಟ್ಟಿಗೆ ಘನೀಕೃತ, ಎಲೆಗಳ ಸಾಂದ್ರತೆ ಇದ್ದು, ಮನುಷ್ಯನ ಎತ್ತರದಷ್ಟು ಮತ್ತು ಎಷ್ಟು ಎತ್ತರವಾಗಿದಿಯೋ ಅದರ ಅರ್ಧದಷ್ಟು ಅಗಲವಾಗಿರುವ ವಸ್ತು. ಇದು ಕಣ್ಣಿನ ಮಟ್ಟಕ್ಕೆ ಇರುವುದರಿಂದ ಮತ್ತು ಇದರ ಮುಖಾಂತರ ನೋಡಲು ಕಷ್ಟವಾಗುವುದರಿಂದ, ಅವುಗಳ ಸಮಗ್ರ ನೋಟ ಬಹಳ ಮುಖ್ಯ. ಉದಾಹರಣೆಗೆ ಪುಷ್ಪಗಳಲ್ಲಿ ಗುಲಾಬಿ ಶ್ರೀಮಂತ ಯೋಗ್ಯವಾದದ್ದು. ಆದರೆ ಅದರ ಸಮಗ್ರ ನೋಟ ಒರಟು ಮತ್ತು ಅತೃಪ್ತಿಕರ. ಭೂದೃಶ್ಯ ಶಿಲ್ಪಿಯ ಪ್ರಕಾರ, ನಮ್ರವಾದ ದಾಸವಾಳ, ಎಷ್ಟೋ ವೇಳೆ ಗುಲಾಬಿಗಿಂತ ಉತ್ತಮ. ಏಕೆಂದರೆ ದಾಸವಾಳವನ್ನು ಇಚ್ಛಿಸಿದ ಆಕಾರ ಮತ್ತು ಆಳತೆಗೆ ಸಮರಬಹುದು. ಆದರೆ ಗುಲಾಬಿ ತನ್ನ ಓರಣವಿಲ್ಲದ, ಅಭದ್ರತೆಯ ನೋಟವನ್ನು ಇಟ್ಟುಕೊಳ್ಳಲೇಬೇಕು.

ತೋಟಗಾರರು, ತಮ್ಮ ಉದ್ಯಾನಗಳಲ್ಲಿ ಬೆಳೆಸಲು ಬೇಸರ ಪಡುವಂಥ ಅನೇಕ ಆದರೆ ಬಹಳ ಸಾಮಾನ್ಯವಾದ ಗಿಡಗಳು ಭೂದೃಶ್ಯದಲ್ಲಿ ಅಮೂಲ್ಯವಾದ ಅಂಶಗಳಾಗಿರುತ್ತವೆ. ಉದಾಹರಣೆಗೆ ಹಳದಿ ಲಾಂಟಾನವನ್ನು ನೆಲಕ್ಕೆ ಅಪ್ಪುವಂತೆ, ಒಳ್ಳೆ ಆಕಾರದ ದುಂಡನೆಯ, ಸೊಗಸಾದ, ಅಲಂಕೃತ ಮತ್ತು ವರ್ಷಾದ್ಯಂತ ಅರಶಿನ, ಹಳದಿ ಬಣ್ಣಗಳಿಂದ ತುಂಬಿರುವಂತೆ ಸಮರಿಟ್ಟುಕೊಳ್ಳಬಹುದು. ತಕ್ಕಮಟ್ಟಿಗೆ ಬೇಕಾದ ರೂಪ ಮತ್ತು ಆಳತೆಗೆ ಸಮರಿದ ಲಾಂಟಾನಗಳನ್ನು ಒತ್ತಾಗಿ ನೆಟ್ಟಾಗ, ತೃಪ್ತಿಕರವಾದ ಸಮತಲ ರೇಖೆಯ ಪರಿಣಾಮವನ್ನುಂಟುಮಾಡಲು ವಿನ್ಯಾಸದಲ್ಲಿ ಉಪಯೋಗಿಸಬಹುದು.

ಇತರ ಲಾಂಟಾನ ಜಾತಿಗಳನ್ನು ಅಷ್ಟು ತಿದ್ದಲಿಕ್ಕಾಗುವುದಿಲ್ಲ. ಬಿಳಿಯ ಜಾತಿ ಕ್ಷಿಪ್ರವಾಗಿ ಬೆಳೆಯುತ್ತದೆ. ಬಹಳ ಜಾಗ್ರತೆಯಾಗಿ ಹದ್ದು ಮೀರಿ, ದುರಸ್ತಿಗೊಳಿಸಲಾಗದಷ್ಟು ದೊಡ್ಡದಾಗುತ್ತದೆ. ಆದರ ಪುಷ್ಕಳವಾದ ಬಿಳಿ ಹೂಗಳು, ಒಂದು ರೀತಿಯಲ್ಲಿ ಗೋಡೆಯಿಂದ ಚಿಮ್ಮುತ್ತಿದ್ದು, ವರ್ಣನೀಯ ಮತ್ತು ನೈಜಿಕ ನೋಟವನ್ನು ಬೀರುತ್ತವೆ. ಇದರ ಜೊತೆಗೆ, ಬರಗಾಲ ಬರಲಿ, ಪ್ರವಾಹಗಳೇ ಬರಲಿ, ಸಾಯಿಸಲು ಆಗುವುದಿಲ್ಲ. ಕೆಲವೇ ಪ್ರಭೇದಗಳಲ್ಲಿ ಒಂದಾದ ಧೂಮ್ರ ಅಥವಾ ಮೋಲ್ ಬಣ್ಣದ ಲಾಂಟಾನ, ನೆಲವನ್ನು ಅಪ್ಪಿಕೊಂಡು ಬೆಳೆಯುತ್ತದೆ ಮತ್ತು ಆಕರ್ಷಕವಾಗಿ ಗೋಡೆಗಳ ಮೇಲೆ ಕುಂಡದ ಪಾರ್ಶ್ವಗಳಿಂದ ಜೋತು ಬೀಳುತ್ತದೆ. ಕೆಲವು ತೋಟಗಾರರು, ಕೊಂಬೆಗಳನ್ನು ಕಟ್ಟಿ, ಒಗ್ಗದ ತುರಾಯಿಯಂತೆ, ನೋಡುವುದಕ್ಕೆ ಅಸ್ವಾಭಾವಿಕವಾಗಿಯೂ ಮತ್ತು ಅತೃಪ್ತಿಕರವಾಗಿಯೂ ಮಾಡುತ್ತಾರೆ. ಧೂಮ್ರ ವರ್ಣದವು ಇತರೆ ಜಾತಿಗಳಿಗಿಂತ ಕೆಳ ದರ್ಜೆಯವು, ಏಕೆಂದರೆ ಆಗಾಗ್ಗೆ ಅವು ಹೂ ಬಿಡುವುದಿಲ್ಲ. ಆದರೆ ಎಲ್ಲಾ ಲಾಂಟಾನಗಳು ಸ್ವಭಾವತಹ ಕಳೆಗಳು. ಎಲ್ಲಿ ಉತ್ತಮ ಜಾತಿಯ ಗಿಡಗಳು ಬೆಳೆಯಲು ನಿರಾಕರಿಸುತ್ತವೆಯೋ, ಅಂಥ ಸ್ಥಳಗಳಲ್ಲಿ ಇವುಗಳನ್ನು ಬೆಳೆಯಬಹುದು.

ತೋಟಗಾರರಿಗೆ, ಮರಗಳಿಗಿಂತಲೂ ಹೆಚ್ಚಾಗಿ, ಎಲ್ಲೆಲ್ಲಿ ಸ್ಥಳಾವಕಾಶವಿದೆಯೋ ಅಲ್ಲಲ್ಲಿ ಹೊದರುಗಳನ್ನು ನೆಡುವ ಒಲವು. ತೋಟಗಾರರಲ್ಲಿ ಒಂದು ಬಗೆಯ ಸಂಗ್ರಹಕಾರರ ಹಂಬಲ ಉಂಟು. ಇದರಿಂದಾಗಿ, ಇನ್ನೊಬ್ಬರ ಉದ್ಯಾನದಲ್ಲಿ ಚೆನ್ನಾಗಿ ಹೂ ಬಿಟ್ಟಿರುವ ಜಾತಿಯನ್ನು ನೋಡಿದಾಗ, ಅಂತಹದನ್ನು ಹೊಂದುವ ಇಚ್ಛೆಯನ್ನು ತಡೆಯಲಾರರು. ಅನೇಕ ವರ್ಷಗಳು ನಾನು ಕೂಡ ಇಂಥ ಉಗ್ರವ್ಯಾಧಿಯಿಂದ ನರಳಿದ್ದೇನೆ; ಆದುದರಿಂದ ಇಂಥ ವ್ಯಾಧಿಗೆ ನನ್ನ ಸಹಾನುಭೂತಿ ಇದೆ. ಮರಗಳ ವಿಷಯದಲ್ಲಿ ಅತೀ ಜಿಪುಣ ಸಂಗ್ರಹಕಾರನಿಗೆ, ತನ್ನಲ್ಲಿ ಇನ್ನೊಂದನ್ನು ಕೂಡ ನೆಡಲು ಸ್ಥಳವಿಲ್ಲದಿರುವಾಗ, ಬೇರೆಯದನ್ನು ನೋಡುವ ಅಭಿಲಾಷೆಯಿರುತ್ತದೆ. ಆದರೆ ಹೊದರುಗಳ ವಿಷಯದಲ್ಲಿ, ಅವು ಅಷ್ಟು ಹೆಚ್ಚಾಗಿ ಸ್ಥಳವನ್ನು ಆಕ್ರಮಿಸುವುದಿಲ್ಲವಾದುದರಿಂದ, ಇನ್ನೂ ಕೆಲವನ್ನು ತುರುಕಬಹುದೆಂದು ಮನಗಾಣುತ್ತಾನೆ. ಹೊಸ ಹೊದರುಗಳಿಗೆ ಸ್ಥಳ ಕಲ್ಪಿಸಲು, ಹಳೆಯದನ್ನು ತೆಗೆದುಹಾಕುವುದಾದರೆ, ಇದು ಸ್ವಲ್ಪ ಮಟ್ಟಿಗೆ ಸರಿಯೆ. ಭಾರತದಲ್ಲಿ ಹೊದರುಗಳು ತ್ವರಿತವಾಗಿ ಬೆಳೆಯುತ್ತವೆ ಮತ್ತು ವಾಸ್ತವಿಕವಾಗಿ ಯಾವುದು ಸರಿಯಾಗಿ ಬೆಳೆಯುತ್ತಿಲ್ಲವೋ, ಅಂಥವುಗಳನ್ನು ಸ್ಥಳಾಂತರ ಮಾಡುವುದಕ್ಕೂ ಅಥವಾ ಕಿತ್ತೊಗೆಯುವುದಕ್ಕೂ ಪಶ್ಚಾತ್ತಾಪ ಪಡಬೇಕಾಗಿಲ್ಲ.

ನಾನು ಕಂಡಂತೆ, ನಿಕೃಷ್ಟವಾಗಿ ನೆಟ್ಟ ಹೊದರುಗಳಿಗೆ ಒಂದು ಕಾರಣ ಉಂಟು; ಅದು ಯಾವ ಉದ್ದೇಶವಿಲ್ಲದೆ, ಹಠಾತ್ತನೆ ಒಂದು ಗಿಡವನ್ನು ಪಡೆದುಕೊಂಡು ಅದನ್ನು ಒಣಗುವುದಕ್ಕೆ ಮುಂಚೆಯೆ ನೆಡಬೇಕೆಂಬ ಅವಸರದಿಂದ, ಎಲ್ಲಿ ಜಾಗವಿದೆಯೋ ಅಲ್ಲಿ ತುರುಕುತ್ತಾನೆ. ಈ ಕಾರ್ಯ ಇದಕ್ಕೆ ವ್ಯತಿರಿಕ್ತವಾಗಿ ಆಗಬೇಕಾಗಿತ್ತು. ಮೊದಲನೆಯದಾಗಿ, ಒಂದು ನಿರ್ದಿಷ್ಟ ಸ್ಥಳವನ್ನು ತುಂಬಲು

ಯಾವುದೋ ಒಂದು ಬೇಕಾಗಿದೆ ಎಂಬುದನ್ನು ಮನಗಾಣಬೇಕು. ಅದು ಎಂಥ ಆಳತೆ, ಗಾತ್ರ, ರಚನೆ, ಬಣ್ಣ ಹೊಂದಿರಬೇಕು? ಇದರಿಂದ ಪ್ರಾರಂಭಿಸಿ, ತನ್ನ ಅವಶ್ಯಕತೆಗೆ ಬಹಳ ಸಮೀಪವಾಗಿರುವುದನ್ನು ಆರಿಸಿಕೊಳ್ಳಬೇಕು. ಇದು ಬಹಳ ಸರ್ವೇಸಾಮಾನ್ಯವಾದ, ಸ್ಥಳದಲ್ಲಿಯೇ ದೊರಕುವ ಗಿಡವಾಗಿರಬಹುದು. ಆದರೆ ಅದು ಸೂಕ್ತವಾದ ಆಯ್ಕೆ ಆದರೆ, ಅದು ಅಪರೂಪವಾದ ಮತ್ತು ಹೊರದೇಶದಿಂದ ತರಿಸಿದ ಗಿಡಕ್ಕಿಂತಲೂ ಚೆನ್ನಾಗಿ ಕಾಣುವುದು.

ಒಂದು ಹೊದರಿಗೆ ಯುಕ್ತವಾದ ಸ್ಥಳವನ್ನು ಕಂಡುಹಿಡಿಯಲು, ಮರಗಳು ಮತ್ತು ಹೊದರುಗಳ ಮಧ್ಯೆ ಇರುವ ಸುಸಂಸ್ಕೃತ ಬಂಧುತ್ವದ ಬಗ್ಗೆ ಬಹಳ ಜಾಗರೂಕತೆಯಿಂದ ಯೋಚಿಸಬೇಕು. ಮರಗಳು ಮತ್ತು ಹೊದರುಗಳು ಒಂದಕ್ಕೊಂದು ಬಹಳ ಸಮೀಪದಲ್ಲಿದ್ದರೆ, ಅವುಗಳು ಚೆನ್ನಾಗಿ ಕಾಣುವುದಿಲ್ಲವೆಂಬುದರ ಬಗ್ಗೆ, ಆಗಲೆ ನಾನು ಒತ್ತಿ ಹೇಳಿದ್ದೇನೆ. ಎತ್ತರದ ಒಂದು ಲಂಬ ರೇಖೆ, ಅದರ ಪಕ್ಕದಲ್ಲಿಯೆ ಒಂದು ಮೋಟಾದ ಲಂಬ ರೇಖೆ ಇದ್ದರೆ, ಇವುಗಳು ಅಕ್ರಮವಾಗಿ ಕಾಣುತ್ತವೆ. ಆದುದರಿಂದ ಹೊದರುಗಳನ್ನು ಮರಗಳ ಸಮೀಪದಲ್ಲಿ ಅವ್ಯವಸ್ಥಿತವಾಗಿ ನೆಡಬಾರದು. ಇದರೊಂದಿಗೆ ಅನೇಕ ಹೊದರುಗಳು ಬಹಿರಂಗ ಸ್ಥಳಗಳಲ್ಲಿ, ಉಜ್ವಲ ಬೆಳಕಿನಲ್ಲಿ ಚೆನ್ನಾಗಿ ಬೆಳೆಯುತ್ತವೆ. ಆದುದರಿಂದ ಅವುಗಳನ್ನು ಅಂಥ ಸ್ಥಳಗಳಲ್ಲಿಯೇ ನೆಡಬೇಕು. ಆದರೆ ಹೊದರುಗಳನ್ನು ಒಂಟಿಯಾಗಿ ಬಿಂದುಗಳಂತೆ ಬಹಿರಂಗ ನಿವೇಶನದಲ್ಲಿ ನೆಟ್ಟರೆ, ಅವು ಭೀಕರವಾಗಿ ಕಾಣುತ್ತವೆ. ವಿವಿಧ ಹೊದರುಗಳನ್ನು, ಅಖಂಡವಾಗಿರುವಂತೆ ಕಾಣಲು, ಒಂದು ರಚನೆಯನ್ನು ರೂಪಿಸಬೇಕು. ಇನ್ನೊಂದು ರೀತಿಯಲ್ಲಿ ಹೇಳಬೇಕಾದರೆ, ಇತರೆ ಅನೇಕ ಹೊದರುಗಳು ಸೇರಿರುವ ಒಂದು ಯೋಜನೆಯಲ್ಲಿ ಪ್ರತಿಯೊಂದು ಹೊದರು ಕೂಡ ಒಂದು ಘಟಕಾಂಶವೆಂದು ಯೋಜಿಸಬೇಕು. ಒಂದು ಗೋಡೆಯ ಎದುರಿಗೆ, ಸೂರ್ಯನ ಬೆಳಕು ಬೀಳುವ ಕಡೆ, ಗುಲ್ಮಾಲಯವನ್ನು ನೆಡುವುದು ಬಹಳ ಸುಲಭವಾದ ಮಾರ್ಗ. ಎತ್ತರವಾದ ಹೊದರುಗಳನ್ನು ಹಿಂಭಾಗದಲ್ಲಿ, ಚಿಕ್ಕವನ್ನು ಮುಂಭಾಗದಲ್ಲಿ ನೆಡುವುದರಿಂದ, ಅಹ್ಲಾದದಾಯಕವಾದ ಅನೇಕ ಜಾತಿಗಳ ಒಂದು ಸಮೂಹವನ್ನು ಹೊಂದಬಹುದು. ಇದರಲ್ಲಿ ಋತುಗಳು ಬದಲಾಯಿಸಿದಂತೆ, ಹೂಗಳು ಬಂದು ಹೋಗುತ್ತಿರುತ್ತವೆ. ಸಮಗ್ರ ಕುತೂಹಲಕಾರಿ ಸಮ್ಮಿಳನದಲ್ಲಿ ಚಲನೆ ಮತ್ತು ಸೌಂದರ್ಯ ಕಾಣಬಹುದು. ಉದ್ಯಾನದಲ್ಲಿ ಇವು ಸಂಪೂರ್ಣತೆ ಅಥವಾ ಸಮಗ್ರತೆಯನ್ನು ತರುವುದು.

ಅಂಥ ದಂಡೆಯನ್ನು ಸರಿಯಾಗಿ ನೆಡುವ ಮಾರ್ಗವೆಂದರೆ, ಸಾಲುಗಳಲ್ಲಿ ನೆಡದೆ, ಸಣ್ಣ ಕುಳಿಗಳಲ್ಲಿ ನೆಡುವುದು, ಹಿಂಭಾಗದಲ್ಲಿ ಎತ್ತರವಾಗಿರುವುದನ್ನು, ಎರಡನೆ ಶ್ರೇಣಿಯಲ್ಲಿ ಅದಕ್ಕಿಂತಲೂ ಸ್ವಲ್ಪ ಗಿಡ್ಡಾಗಿರುವುದನ್ನು ಮತ್ತು ಮೂರನೆಯ ಶ್ರೇಣಿಯಲ್ಲಿ ಇನ್ನೂ ಗಿಡ್ಡಾಗಿರುವುದನ್ನು ನೆಡುವುದರಿಂದ, ಕ್ರೀಡಾ ರಂಗದಲ್ಲಿ ಹಂತಹಂತವಾಗಿ ಕುಳಿತ ವೀಕ್ಷಕರಂತೆ ಕಾಣುತ್ತದೆ. ಆದರೆ ಚಿಕ್ಕ ಗುಂಪುಗಳು ಅಥವಾ ಕುಳಿಗಳಲ್ಲಿ, ಅಲೆಅಲೆಯಾಗಿ ಒಡ್ಡೊಡ್ಡಾದ ರೂಪಕಗಳಲ್ಲಿ, ಹೊರಗು ಮತ್ತು ಒಳಗು

ಚಾಚುವಂತೆ ನೆಟ್ಟರೆ, ತಮ್ಮಷ್ಟಕ್ಕೆ ತಾವು ಆಕಸ್ಮಿಕವಾಗಿ ಬೆಳೆದಿರುವಂತೆ ಕಾಣುತ್ತವೆ. ಅಂಥ ಸಮೂಹಗಳಲ್ಲಿ, ಅನ್ಯೋನ್ಯವಾಗಿ ಬೆಳೆದಿರುವಾಗ, ಪ್ರಬಲ ಜಾತಿಗಳು ತಮ್ಮ ನಿರ್ಬಲ ಬಂಧುಗಳನ್ನು ಅಡಗಿಸಿಬಿಡದಂತೆ ಮತ್ತು ಪುಕ್ಕಲ ಜೀವಿ ಸ್ವರೂಪಗಳು ಕೂಡ ತಮ್ಮ ಭಾಗದ ಸೂರ್ಯನ ಬೆಳಕನ್ನು ಹೊಂದುವಂತೆ ತೋಟಗಾರನು ನೋಡಿಕೊಳ್ಳಬೇಕು.

ಇಂಥ ಸೆರಗುಗಳ ಬಗ್ಗೆ ಇನ್ನೊಂದು ಕುತೂಹಲಕಾರಿ ಆಟವೆಂದರೆ ರಚನೆ ಮತ್ತು ಸ್ವರೂಪಗಳಿಂದ ಆಡುವುದು. ಕೆಲವು ಬೆಗೋನಿಯಾ ಜಾತಿಗಳ ಎಲೆಗಳು ಸೈಪ್ರೆಸ್ ಎಲೆಗಳ ಹಿನ್ನೆಲೆಯಲ್ಲಿ ಬಹಳ ಚೆನ್ನಾಗಿ ಎದ್ದು ಕಾಣುತ್ತವೆ. ಫರ್‌ಕೈಯ ಎಂಬ ಗಿಡವನ್ನು ಉಪಯೋಗಿಸುವುದರಿಂದ ಹಠಾತ್ತನೆ ನಾಟಕೀಯ ಪರಿಣಾಮವನ್ನು ಸೃಜಿಸಬಹುದು. ಇದರಲ್ಲಿ ಹಳದಿ ಗೆರೆಗಳಿರುವ ದಪ್ಪನೆಯ ಎಲೆಗಳು, ಒಂದು ಅಡ್ಡ ಜಾತಿಯ ಗುಂಪಿನ ಗಿಡಗಳ ಸಮೂಹದಲ್ಲಿ ಎದ್ದು ಕಾಣುತ್ತವೆ. ಇಂಥ ಗುಲ್ಮಾಲಯ ಒಂದು ವಿಶಿಷ್ಟ ಘಾತ ಪರಿಮಾಣವನ್ನು ಹೊಂದುತ್ತದೆ ಮತ್ತು ಸಣ್ಣ ಪಕ್ಷಿಗಳಿಗೆ ಸ್ವರ್ಗದಂತಿರುತ್ತದೆ. ಇಲ್ಲಿ ಹಾಡು ಹಕ್ಕಿಗಳು, ಕದಿರು ಗಿಣಿಗಳು ಮತ್ತು ಇತರೆ ಚಿಕ್ಕ ಪಕ್ಷಿಗಳು, ಚಿಟ್ಟೆಗಳು ಇವೆಲ್ಲವೂ ಹಾರಾಡುವುದನ್ನು ಗಮನಿಸಬಹುದು. ದೊಡ್ಡ ಎಲೆಗಳಿರುವ ಗಿಡಗಳಿದ್ದರೆ, ಗೀಜಗನ ಹಕ್ಕಿ, ಚಿಪ್ಪಿಗ ಹಕ್ಕಿ, ಹಾಡುಹಕ್ಕಿ ಮುಂತಾದುವುಗಳು ತಮ್ಮ ಗೂಡುಗಳನ್ನು ಕಟ್ಟುತ್ತವೆ. ಏಕೆಂದರೆ ಹೊದರಿನ ಸ್ಥೂಲ ಬೆಳವಣಿಗೆ, ತಮ್ಮನ್ನು ಕೊಂದು ತಿನ್ನುವ ಪಕ್ಷಿಗಳಿಂದ ಮರೆಮಾಡಿ ಆ ಹಕ್ಕಿಗಳನ್ನು ರಕ್ಷಿಸುತ್ತದೆ.

ಒಂದು ದೊಡ್ಡ ಉದ್ಯಾನದಲ್ಲಿ ಹೊದರುಗಳನ್ನು ಅರ್ಥಗರ್ಭಿತವಾಗಿ ಪ್ರತಿಭೆ ಬೀರುವಂತೆ ಘಟಕಾಂಶಗಳನ್ನಾಗಿ ವ್ಯವಸ್ಥೆಗೊಳಿಸಬಹುದು. ಇಲ್ಲಿ ಕೂಡ ಇತರೆ ಉದ್ಯಾನದ ವಿಷಯಗಳಲ್ಲಿ ಮಾಡುವಂತೆ, ಚಿಕ್ಕದಾಗಿರುವುದಕ್ಕಿಂತ ದೊಡ್ಡದಾಗಿರುವ ಗುಂಪುಗಳನ್ನು ನೆಡುವುದು ಒಳ್ಳೆಯದು. ಚಿಕ್ಕ ಘಟಕಾಂಶಗಳಿಗಿಂತ, ಒಂದೆರೆಡು ದೊಡ್ಡ ವ್ಯವಸ್ಥಿತ ಘಟಕಾಂಶಗಳನ್ನು ಹೊಂದುವುದು ಒಳ್ಳೆಯದು. ಇಲ್ಲಿ ಕೂಡ ಬಿಡಿ ಪೊದರುಗಳ ಯೋಗ್ಯತೆಯ ಬಗ್ಗೆ ನಾವು ಮಾತನಾಡಬೇಕಾಗಿಲ್ಲ. ತಂಡಗಳನ್ನು ಅನುಕರಣ ಮಾಡುವುದರಲ್ಲಿ ತಪ್ಪೇನಿಲ್ಲ. ಉದ್ಯಾನದಲ್ಲಿ ನೀವು ಹೊಂದಬೇಕೆಂದಿರುವ ಪ್ರತಿಯೊಂದು ಜಾತಿಯ ಬಗ್ಗೆಯೂ, ಅದು ಒಂದು ತಂಡದ ಅಂಶವೆಂಬುದನ್ನು ಯೋಚಿಸಬೇಕು. ಅದು ಒಂದು ಚಿತ್ತಾರದ ತಂಡವಾಗಿರಬಹುದು ಅಥವಾ ಒಂದೇ ಜಾತಿಯ ಅನೇಕ ಗಿಡಗಳಿರುವ ಅರ್ಥಗರ್ಭಿತ ವಂಶ ಸಾಮ್ಯ ಹೊಂದಿರಬಹುದು. ಈ ವಿಚಾರವಾಗಿಯೆ ನಾನು ಆಗಾಗ್ಗೆ ಒತ್ತಿ ಹೇಳಬೇಕಾಗಿದೆ.

ಪೀಕಾಕ್ ಫ್ಲವರ್ ಅಥವಾ ನವಿಲು ಪುಷ್ಪ, ಅನೇಕ ಬಗೆಯ ಭೂಮಿಯಲ್ಲಿ ಅಂದರೆ ಕಲ್ಲು ಬಂಡೆಗಳ ಗುಡ್ಡಗಾಡು, ಶುಷ್ಕ ಮೈದಾನ ಪ್ರದೇಶಗಳಲ್ಲಿ ಮತ್ತು ಅನೇಕ ಕಡೆ ವನವಾಗಿ ಬೆಳೆಯುತ್ತದೆ. ಫಲವತ್ತಾದ ಮಣ್ಣಿನಲ್ಲಿ ಆಗಾಗ್ಗೆ ಒಂದು ಮಂಕರಿ ಗೊಬ್ಬರ ಮತ್ತು ನೀರಿನ ಸುಖ ಭೋಗಗಳನ್ನು ಒದಗಿಸಿದರೆ ಅದು ಸುಂದರವಾಗಿ ಬೆಳೆದು ಉದ್ದನೆಯ ಅಂದವಾದ ಕಿತ್ತಳೆ ಮತ್ತು ಹಳದಿ ಬಣ್ಣಗಳ

ಹೂಗಳನ್ನು ಬಿಡುತ್ತದೆ. ಈ ಹೂವುಗಳು ನಿಮ್ಮ ದಿವಾನಖಾನೆಗಳನ್ನು ಶೋಭಿಸಲು ಬಹಳ ಯೋಗ್ಯವಾದವು. ಸಂಪೂರ್ಣ ನಿವೇಶನವನ್ನು ನವಿಲು ಹೂಗಳಿಂದ, ಹೊರ ಬಾಗಿಲುಗಳಿಗೆ ಸಮೀಪವಾಗಿಯೂ ಮತ್ತು ಬಾಗಿಲುಗಳಿಗೆ ತಡೆಯಾಗದಂತೆಯೂ ನೆಟ್ಟರೆ, ಬಹಳ ಆಕರ್ಷಕವಾದ ಸ್ಥಳವಾಗಿ ಮಾರ್ಪಡುತ್ತದೆ. ಇವುಗಳ ಪಾಲನೆ ಪೋಷಣೆ ಬಹಳ ಸುಲಭ.

ಸುತ್ತಮುತ್ತ ಗ್ರಾಮೀಣ ಪ್ರದೇಶಗಳಲ್ಲಿರುವ ಸಸ್ಯವರ್ಗ, ಯಾವ ಗಿಡಗಳನ್ನು ಉದ್ಯಾನದಲ್ಲಿ ನೆಡಬಹುದೆಂಬುದರ ಬಗ್ಗೆ ಸೂಚನೆ ಕೊಡುತ್ತದೆ. ಅನೇಕ ವನ್ಯಜನ್ಯ ಗಿಡಗಳು ಗುಜರಾತ್, ರಾಜಸ್ಥಾನ್ ಮತ್ತು ಡೆಕ್ಕನ್ನಿನ ಅಸಮಗ್ರ ಶುಷ್ಕ ಪ್ರದೇಶಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಅಂಥವುಗಳನ್ನು ತಂದು, ಮನೆಯ ಸಮೀಪದಲ್ಲಿ ಕಲ್ಲು ಗುಂಡುಗಳ ಮಧ್ಯೆ ನೆಟ್ಟರೆ, ಉತ್ಕೃಷ್ಟವಾದ ಉದ್ಯಾನವಾಗುತ್ತದೆ ಮತ್ತು ಇದಕ್ಕಾಗಿ ಅಷ್ಟಾಗಿ ಜಾಗರೂಕತೆ ಅಥವಾ ಖರ್ಚು ಬೇಕಾಗಿಲ್ಲ. ಎಲ್ಲಾ ಯೂಫರ್ಬಿಯಗಳನ್ನು ವ್ಯವಸ್ಥಿತ ರೀತಿಯಲ್ಲಿ, ತಂಡಗಳಲ್ಲಿ ನೆಟ್ಟರೆ, ಒಳ್ಳೆ ಸುಂದರವಾದ ಉದ್ಯಾನವನ್ನು ಮಾಡಬಹುದು. ಅನೇಕ ಸಾಧನ ಸಂಪತ್ತುಗಳಿಲ್ಲದ ತೋಟಗಾರನಿಗೆ ಇಂತಹವು ತೋಟಗಾರನ ವಸ್ತುಗಳು. ಬಹಳ ಸ್ಥೂಲವಾದ ವಸ್ತುಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ಇಡುವುದು, ಚೆನ್ನಾಗಿ ನೋಡಿಕೊಳ್ಳಲಾಗದಂತಹ ಹೊರದೇಶದ ಗಿಡಗಳಿಗಿಂತ ಉತ್ತಮ. ಯಾವುದು ಒಂದು ನಿರ್ದಿಷ್ಟ ಸ್ಥಳದಲ್ಲಿ ಅರಣ್ಯವಾಗಿ ಬೆಳೆಯುತ್ತದೋ. ಅಂಥದು ಸ್ವಲ್ಪ ಕಾಪಾಡುವಿಕೆಯಿಂದ, ಇನ್ನೂ ಚೆನ್ನಾಗಿ ಬೆಳೆಯುತ್ತದೆ. ಆದುದರಿಂದ ಸಮುದ್ರ ತೀರದಲ್ಲಿರುವ ತೋಟಗಳನ್ನು, ಮರಳನ್ನು ಹಿಡಿದಿಟ್ಟುಕೊಳ್ಳುವ ಸಣ್ಣ ಗಿಡಗಳಿಂದ ವ್ಯವಸ್ಥಿತಗೊಳಿಸಬೇಕು. ಕಾಡುಗಳ ಪಕ್ಕದಲ್ಲಿರುವ ಉದ್ಯಾನಗಳು, ಕಾಡುಗಳನ್ನು ತಮ್ಮ ನರ್ಸರಿಗಳೆಂದು ಪರಿಗಣಿಸಬೇಕು ಮತ್ತು ಕಾಡುಗಳಲ್ಲಿನ ಗಿಡಗಳನ್ನು ಸಂಗ್ರಹಿಸಬೇಕು. ಅದರಂತೆ ಶುಷ್ಕ ಅಥವಾ ಮರುಭೂಮಿಗಳ ಸಮೀಪವಿರುವ ಉದ್ಯಾನಗಳನ್ನು ಸುಂದರವಾದ ಮರುಭೂಮಿ ಶೈಲಿಯಲ್ಲಿ ಪರಿವರ್ತಿಸಿಕೊಳ್ಳಬಹುದು. ಒಂದೊಂದು ವೇಳೆ, ಉದ್ಯಾನಗಳು ತಮ್ಮ ಪರಿಸರಗಳಂತೆ ಕಾಣದ ಹಾಗೆ ಇರುವುದು ಒಂದು ವಿಷಯವಾಗುತ್ತದೆ. ಸುತ್ತಲೂ ಶುಷ್ಕ ಸ್ಥಳಗಳಿಂದ ಆವರಿಸಲ್ಪಟ್ಟಾಗ, ತೋಟಗಾರನು ತನ್ನ ಉದ್ಯಾನ ಹುಲುಸಾಗಿ, ಹಸಿರಾಗಿರಬೇಕೆಂಬ ಧ್ಯೇಯ ಹೊಂದಿರುವನು. ನೀರು ಮತ್ತು ಇತರೆ ವಸ್ತುಗಳು ಒದಗುವ ಪರಿಸ್ಥಿತಿಯಲ್ಲಿ, ಇದನ್ನು ಮಾಡಲು ಪ್ರಯತ್ನಿಸುವುದು ಸ್ವಾಗತಾರ್ಹ. ಆದರೆ ಜಮೀನು ಉದಾರವಾಗಿಲ್ಲದಿರುವುದು ಅಥವಾ ಅವಶ್ಯ ವಸ್ತುಗಳ ಕೊರತೆಯಿರುವುದು, ಉದ್ಯಾನ ಮಾಡದಿರುವುದಕ್ಕೆ ಒಂದು ನೆವವಾಗಬಾರದು. ಜಮೀನು ಇದ್ದ ಪಕ್ಷದಲ್ಲಿ, ಉದ್ಯಾನ ರಚಿಸುವ ಮನಸಿದ್ದರೆ, ಯಾವ ಅಭ್ಯಂತರಗಳೂ ಉದ್ಯಾನ ರಚನೆಯಲ್ಲಿ ಭಂಗ ತರಲಾರವು.

## ಬಳ್ಳಿಗಳು

ಈಗ ವಾಸ್ತವವಾಗಿ ತಿಳಿದಿರುವಂತೆ ಬಳ್ಳಿಗಳು ಅಷ್ಟೊಂದು ಮೌಲ್ಯರಹಿತ ಗಿಡಗಳ ಗುಂಪಲ್ಲ ಎಂಬ ಮನೋಭಾವನೆ ಬರುವುದನ್ನು ಯಾರೂ ಅಲ್ಲಗಳೆಯುವ ಹಾಗಿಲ್ಲ. ಮೊಟ್ಟಮೊದಲು ಬಳ್ಳಿಗಳ ವಿಶಿಷ್ಟ ಗುಣಗಳನ್ನು ಪಟ್ಟಿ ಮಾಡೋಣ. ಅವುಗಳಿಗೆ ಅತ್ಯಲ್ಪ ಸ್ಥಳ ಅಗತ್ಯ – ಅಂದರೆ ಅವುಗಳಿಗೆ ಮೂರು ಪ್ರಮಾಣಗಳ ಸ್ಥಳಾವಕಾಶ ಬೇಕಾಗಿಲ್ಲ. ಅವುಗಳಿಗೆ ಕೇವಲ ಎರಡು ಪ್ರಮಾಣಗಳಲ್ಲಿ ಬೆಳೆಯುವ ಸ್ಥಳ ಅಗತ್ಯ. 2 ಅಡಿ x2ಅಡಿ x2ಅಡಿ ಆಳತೆಯ ಚದರ ಗುಂಡಿಯಲ್ಲಿ ಒಂದು ಚಿಕ್ಕ ಬೇರಿನ ಕಂತೆ ನೆಟ್ಟು, ನೀರು ಮತ್ತು ಗೊಬ್ಬರ ಉಣಿಸುವುದರಿಂದ, ನೀವು ಅನೇಕ ಚದರಗಜಗಳ ವಿಸ್ತೀರ್ಣವನ್ನು ಬಹುಭಾಗ ಎಲೆ ಮತ್ತು ಹೂಗಳಿಂದ ಮುಚ್ಚಬಹುದು.

ಕೆಲವು ಬಳ್ಳಿಗಳು ಒಂದು ಸಮಗ್ರ ಮೋಟಾರು ಖಾನೆ, ಒಂದು ಇಡೀ ಗೋಡೆ ಅಥವಾ ಅರ್ಧ ಮನೆಯನ್ನೇ ಮುಚ್ಚಬಲ್ಲವು ಮತ್ತು ಅನೇಕ ಬಳ್ಳಿಗಳು ಬಹಳ ಜಾಗ್ರತೆಯಾಗಿ ಕೂಡ ಮುಚ್ಚಬಲ್ಲವು. ನಿಮಗೆ ಹೊರಾಂಗಣದ ತೆರೆ ಅಥವಾ ಪರದೆಯ ಅಗತ್ಯವಿದೆಯೆ ? ಒಂದು ಏರು ಬಳ್ಳಿಯನ್ನು ಆರಿಸಿ. ಆ ಪಕ್ಕದ ಮನೆ ಕಣ್ಣು ಕಿಚ್ಚೆ ? ಅದರ ಮೇಲೆ ಬಳ್ಳಿಯನ್ನು ತೊಡಿಸಿ. ನಿಮ್ಮ ವರಾಂಡದಲ್ಲಿ ಬಹಳ ಬಿಸಿಲು ಬೀಳುತ್ತದೆಯೆ ? ಬಳ್ಳಿಯಿಂದ ನೆರಳು ಮಾಡಿ. ನೀವು ಮಲಗುವ ಕೋಣೆ ಬಹಳ ಶಾಖವಾಗಿದೆಯೆ ? ಅದರ ಗೋಡೆಯ ಮೇಲೆ ಬೆಳೆಯುವ ಒಂದು ಬಳ್ಳಿ ತಂಪುಗೂಡಿಸುತ್ತದೆ. ಒಟ್ಟಿನಲ್ಲಿ ನಿಮ್ಮ ಮನೆ ಮಂಕಾಗಿ, ಸ್ವಾರಸ್ಯರಹಿತವಾಗಿದ್ದರೆ, ಹೂವಿನ ಒಂದು ಬಳ್ಳಿ ಅದಕ್ಕೆ ಒಂದು ವೈಶಿಷ್ಟ್ಯವನ್ನು ತರಬಲ್ಲದು. ಯಾವುದೇ ಆಕಾರ, ಗಾತ್ರದ ಬಳ್ಳಿಗಳು, ವಿವಿಧ ಪುಷ್ಪೀಯ ಬಳ್ಳಿಗಳು, ಮೋಹಕವಾದ ಎಲೆಗಳಿರುವ ಹೂ ರಹಿತ ಬಳ್ಳಿಗಳು, ವರ್ಷಕ್ಕೆ ಎರಡು ಬಾರಿ ಹೂ ಬಿರಿಯುವ ಲತೆಗಳು ಅಥವಾ ತೆಪ್ಪಗೆ ಎಡಬಿಡದೆ ಹನ್ನೆರಡು ತಿಂಗಳು ಹೂ ಬಿಡುವ ಲತೆಗಳನ್ನು ನೀವು ಹೊಂದಬಹುದು. ಇಂತಹ ದುಸ್ಸಾಧ್ಯವಾದ ಒಳ್ಳೆ ಗುಣಗಳ ಪಟ್ಟಿ ಹೊಂದಿದ್ದರೂ ಜನರು ಬಳ್ಳಿಗಳನ್ನು ಆತುರದಿಂದ ಕೊಳ್ಳಲು ನರ್ಸರಿಗಳ ಬಾಗಿಲುಗಳನ್ನು ಏಕೆ ಬಡಿಯುತ್ತಿಲ್ಲವೆಂಬುದೇ ಆಶ್ಚರ್ಯ. ಎಲ್ಲಿಯೋ ಒಂದು ತೊಂದರೆ ಇರಬಹುದು. ಅದೇನೆಂದರೆ ಎಲ್ಲ ಕಾಲದಲ್ಲೂ ಬಳ್ಳಿಗಳನ್ನು ಗಮನಿಸಿ ನಿರ್ವಹಿಸಬೇಕಾಗುವುದು. ಮರ ಅಥವಾ ಹೊದರು ಚೆನ್ನಾಗಿ ನೆಲಸಿದ ನಂತರ ಅದರ ಪಾಡನ್ನು ಅದಕ್ಕೆ ಬಿಡಬಹುದು. ಆದರೆ ಬಳ್ಳಿಗಳು ತಮ್ಮ ಕೆಲಸವನ್ನು ಮಾಡಲು ಮಾನವನ ಬಹಳಷ್ಟು ಸಹಾಯ ಮತ್ತು ಆಸರೆಯನ್ನು ಬಯಸುತ್ತವೆ. ಅದಕ್ಕೆ ಕಂಬಗಳು ಅಥವಾ ಕಮಾನುಗಳು ಅಥವಾ ಲತಾಗೃಹಗಳು ಅಥವಾ ಬೇಲಿಗಳು ಅಥವಾ ಕನಿಷ್ಟಪಕ್ಷ ಗೋಡೆಗಳ ಮೇಲೆ ದಾರ, ತಂತಿ ಮತ್ತು ಜಾಲರಿಗಳ ಆಸರೆಗಳನ್ನು ಒದಗಿಸಬೇಕಾಗುತ್ತದೆ. ಕೇವಲ ಬಳ್ಳಿಯ ಒಂದು ತರಹ ಪುಕ್ಕಟೆಯದಾಗಿದ್ದರೂ ಅದಕ್ಕೆ ಒದಗಿಸಬೇಕಾಗುವ ವಿನ್ಯಾಸ ರಚನೆ ದುಬಾರಿಯ ಕೆಲಸವಾಗಿರುತ್ತದೆ.

ಅಲ್ಲದೆ ಯಾವುದಾದರೂ ಒಂದೇ ದರ್ಜೆಯ ವಿನ್ಯಾಸ, ರಚನೆ ಎಲ್ಲ ಬಳ್ಳಿಗಳಿಗೂ ಅನ್ವಯವಾಗುವುದೆಂಬ ಆಶೆಯೂ ಇಲ್ಲ. ಪ್ರತಿಯೊಂದು ಬಳ್ಳಿಯ ಬೇಡಿಕೆಗಳು ವಿಭಿನ್ನ ಮತ್ತು ಅದಕ್ಕೆ ಸೂಕ್ತವಾದ ಆಸರೆಯನ್ನು ಕೊಡದ ಹೊರತು ಅದರ ಉತ್ಕೃಷ್ಟತೆಯನ್ನು ಹೊಂದಲು ಸಾಧ್ಯವಿಲ್ಲ. ಬಿಳಿ ಥನ್‌ಬರ್ಜಿಯ ಹೂಗಳು ಹಸಿರು ಹಗ್ಗಗಳ ಮೇಲಿಂದ ಮುತ್ತುಗಳಂತೆ ಜೋಲಾಡುತ್ತವೆ. ಆದ್ದರಿಂದ ಹೂಗಳು ಕೆಳಗೆ ಸುಂದರವಾಗಿ ಜೋಲಾಡುವಂತಾಗಲು ಎತ್ತರವಾದ ಕಟ್ಟಡವೇ ಬೇಕು. ಹಳದಿ ಮತ್ತು ಕಂದು ಬಣ್ಣದ ನಾಟಕೀಯ ಹೂಗಳನ್ನು ಹೊಂದಿರುವ ಥನ್‌ಬರ್ಜಿಯ ಮೈಸೂರೆನ್ಸಿಸ್‌ನ ಪರಿಸ್ಥಿತಿಯೂ ಹೀಗೆಯೆ. ಫಿಲೋಡೆಂಡ್ರಾನ್ ಮತ್ತು ಮನಿಪ್ಲಾಂಟ್ ಜಾತಿ ಗಿಡಗಳಂತೆ ಫೈಕಸ್ ರಿಪೆನ್ಸ್ (ಇಂಡಿಯನ್ ಐವಿ) ಗಿಡ ಕೂಡ ಯಾವುದಾದರೂ ಒರಟಾದ ಮೈಮೇಲೆ ಅಂಟಿಕೊಳ್ಳುತ್ತದೆ. ದಾರು ಹೆಚ್ಚಾಗಿರುವ ಬಳ್ಳಿಗಳು, ಎಂದರೆ ಪೆಟ್ರಿಯ ವಾಲ್ಯುಬಿಲಿಸ್, ಕ್ವಿಸ್‌ಕ್ವಾಲಿಸ್, ಆಲಮಾಂಡ ಮತ್ತು ಬೋಗೆನ್‌ವಿಲಿಯಗಳು ಯಾವುದಕ್ಕೂ ಅಂಟಿಕೊಳ್ಳುವುದಿಲ್ಲ ಅಥವಾ ಹಿಡಿದುಕೊಳ್ಳುವುದಿಲ್ಲ. ಅವುಗಳನ್ನು ಹಾಗೆಯೇ ನಿರ್ವಹಿಸಬೇಕಾಗುತ್ತದೆ. ಹುಷಾರಾಗಿ ಆಸರೆಗಳಿಗೆ ಕಟ್ಟಬೇಕಾಗುತ್ತದೆ. ಸಣ್ಣ ತಂತಿಯಿಂದ ಸುತ್ತಬೇಕಾಗುತ್ತದೆ. ಅವುಗಳನ್ನು ಸಮರಬೇಕಾಗುತ್ತದೆ ಮತ್ತು ಸಾಮಾನ್ಯವಾಗಿ ಅವುಗಳಿಗೆ ವಹಿಸಿರುವ ಕೆಲಸಗಳನ್ನು ಮಾಡಬೇಕಾದರೆ ನಿರಂತರವಾಗಿ ಉಸ್ತುವಾರಿ ಮಾಡುತ್ತಿರಬೇಕು. ಫ್ಯಾಷನ್ ಫ್ಲವರ್ ಮತ್ತು ಬೋಗೆನ್‌ವಿಲಿಯಾಗಳಂತೆ ಮುಳ್ಳಿರುವ ಬಳ್ಳಿಗಳನ್ನು ನಿರ್ವಹಿಸುವುದು ವಾಸ್ತವಿಕವಾಗಿಯೇ ಕಷ್ಟ ಮತ್ತು ಒಂದು ವೇಳೆ ಕೈಮೀರಿ ಹೋದರೆ ಅವುಗಳನ್ನು ಹಿಡಿಯಲು ಒಂದು ಸಮರವನ್ನೇ ಹೂಡಬೇಕಾಗುತ್ತದೆ.

ಇದೆಲ್ಲಕ್ಕಿಂತಲೂ ಮೇಲಾಗಿ ಹಣ್ಣೆಲೆ ಮತ್ತು ಟೊಂಗೆಗಳ ಉದುರುವಿಕೆ ಕೆಲವು ವೇಳೆ ತೊಡಕಿನ ಸಮಸ್ಯೆಯಾಗುತ್ತದೆ. ಏಕೆಂದರೆ ಜಟಿಲವಾದ ಗಿಡದ ವಿನ್ಯಾಸದಲ್ಲಿ ಇವು ಸಿಕ್ಕಿಕೊಂಡು ಓರಣವಿಲ್ಲದ ಕಂತೆಯಂತೆ ವಿಲಕ್ಷಣವಾಗಿ ಕಾಣುತ್ತವೆ. ಒಣಗಿದ ಎಲೆ, ಟೊಂಗೆಗಳನ್ನು ಅಲುಗಾಡಿಸಿ ಬೀಳಿಸುವುದು ಮತ್ತು ಜೀವವಿರುವವುಗಳನ್ನು ಪುನಃ ಜೋಡಿಸುವ ಪರಂಪರೆಯು ಎಡಬಿಡದ ಕಾರ್ಯ. ಸಂಕ್ಷಿಪ್ತವಾಗಿ ಹೇಳಬೇಕಾದರೆ, ಮರದ ಹಾಗೆ – ಒಂದುಸಲ ಸ್ಥಾಪನೆಯಾದ ನಂತರ ಬಳ್ಳಿಯನ್ನು ಮರೆಯುವಂತಿಲ್ಲ. ಇದು ಎಂದಿಗೂ ಬೆಳೆಯದ ಮಗುವಿನಂತೆ. ಆದರೆ ಪ್ರಾಯಶಃ ಅದರ ಸ್ವಲ್ಪ ಆಕರ್ಷಣೆ ಒತ್ತಾದ ಓರಣವಿಲ್ಲದ ಪರಿಸ್ಥಿತಿಯಲ್ಲಿದೆ ಮತ್ತು ಅನೇಕ ಬಳ್ಳಿಗಳ ಚಿಕ್ಕ ಮೊಗ್ಗುಗಳು ಗೂಡು ಕಟ್ಟುವುದಕ್ಕಾಗಿಯೋ ಅಥವಾ ಕೇವಲ ಅವಿತುಕೊಳ್ಳುವುದಕ್ಕಾಗಿಯೋ ಇರುತ್ತವೆ.

ಬಳ್ಳಿಗಳು ಶಕ್ತಿಗಾಗಿ ಇತರ ಗಿಡಗಳಿಗಿಂತ ಹೆಚ್ಚಾಗಿ ಸೂರ್ಯನನ್ನು ಬೇಡುವವೆಂದು ತೋರುತ್ತದೆ. ಅವು ಅನೇಕ ಬಾರಿ ಅನಿರೀಕ್ಷಿತ ರೀತಿಗಳಲ್ಲಿ ನುಸುಳಿಕೊಂಡು, ತೋಟಗಾರನು ಎಂದೂ ಬಗೆಯದ ರೀತಿಯಲ್ಲಿ ತಮಗೆ ಬೇಕಾದ ರೀತಿಯಲ್ಲಿ ಆಶ್ರಯ ಪಡೆಯುತ್ತವೆ. ಒಂದು ನಿರ್ದಿಷ್ಟ ಸ್ಥಳದಲ್ಲಿ ತೆರೆಯನ್ನು ಹೊಂದಲು ನಾನು ಹಲವು ಬಾರಿ ಬಳ್ಳಿಗಳನ್ನು ನೆಟ್ಟಿದ್ದೇನೆ. ಆದರೆ ಅದು ಕಪ್ಪೆ ಕುಪ್ಪಳಿಸುವಂತೆ ಹಾರಿ

ಬೆಳೆದು ಒಂದು ಎತ್ತರವಾದ ಅಪ್ರಯೋಜಕ ಸ್ಥಳದಲ್ಲಿ ಹೂ ಬಿಟ್ಟಿರುವುದನ್ನು ಕಂಡಿದ್ದೇನೆ. ನೆಡುವುದಕ್ಕೆ ಮುಂಚೆ ಸೂರ್ಯನ ದಿಕ್ಕಿನ ಬಗ್ಗೆ ಮತ್ತು ಬಳ್ಳಿಯು ತನ್ನ ಗುರಿಯನ್ನು ತಲಪುವ ಪ್ರಯತ್ನಗಳಲ್ಲಿ ಹೇಗೆ ಹೊಂದಿಸಿಕೊಳ್ಳುತ್ತದೆಂಬ ಬಗ್ಗೆ ಯೋಚಿಸುವುದು ವಿವೇಕತನ.

ವಾಸ್ತವಿಕದಲ್ಲಿ ಆಸರೆಯ ಯೋಗ್ಯತೆಯ ಜೊತೆಗೆ ಅದು ಬಲವಾಗಿಯೂ, ಬಾಳಿಕೆ ಬರುವಂತೆಯೂ ಇರುವುದು ಬಹು ಮುಖ್ಯ. ಅದು ಹೊರಾಂಗಣದಲ್ಲಿರುವುದರಿಂದ ಮತ್ತು ನಾಜೂಕಾಗಿ ಇರುವುದಕ್ಕಿಂತ ಒರಟಾಗಿ ಕಾಣುವುದು ಇಷ್ಟವಾದುದರಿಂದ, ಯಾವಾಗಲೂ ಅದರ ಬೆಲೆಯನ್ನು ಕಡಿತಗೊಳಿಸಿ ಕಾರ್ಯವನ್ನು ನಿರ್ಧರಿಸುವ ಚಪಲವಿರುತ್ತದೆ. ಆದರೆ ಅಂತಹ ಕಾರ್ಯ ಭಾರವಾದ ಗಿಡದ ತೂಕವನ್ನು ತಡೆಯುವಂತಿರಬೇಕು. ಏಕೆಂದರೆ ಹೊರಗಿನ ಗಾಳಿ, ಹವಾಮಾನಗಳಿಗೆ ಒಡ್ಡಿರುವ ಅಗ್ಗದ ಮರ ಕೊಳೆಯುವ ಪ್ರಮೇಯವಿದ್ದು ಬಹಳ ಜಾಗ್ರತೆಯಾಗಿ ಕುಸಿದು ಬಿದ್ದು ಎಷ್ಟೋ ಸಲ ಚೆನ್ನಾಗಿ ಬೆಳೆದಿರುವ ಬಳ್ಳಿಯನ್ನು ಹಾಳು ಮಾಡುತ್ತದೆ. ಆಗ ಇದು ಸರಿಪಡಿಸಲಾಗದಂತಹ ಕೆಲಸವಾಗುತ್ತದೆ. ಬಲವಾದ ಮತ್ತು ನಂಬಲರ್ಹವಾದ ಆಸರೆಯನ್ನೊದಗಿಸುವುದು ಮಿತವ್ಯಯಕಾರಿಯಾಗಿರುತ್ತದೆ ಎಂಬುದನ್ನು ಮೊದಲಿನಲ್ಲಿಯೆ ಕಂಡುಕೊಳ್ಳಬೇಕು.

ಒಂದು ಲತಾಗೃಹವನ್ನು ಕಟ್ಟುವಾಗ, ಜ್ಞಾಪಕದಲ್ಲಿಡಬೇಕಾದ ಇನ್ನೊಂದು ಮುಖ್ಯ ಅಂಶವೆಂದರೆ, ಅದು ಕೊನೆಯ ಪಕ್ಷ 8ರಿಂದ 10ಅಡಿ ಎತ್ತರವಿರಬೇಕು. ಎಲೆಗಳು ಮತ್ತು ಪುಷ್ಪಗಳು ಕನಿಷ್ಟ 12ರಿಂದ 18ಅಂಗುಲ ಕೆಳಗೆ ಜೋಲಾಡುವುದರಿಂದ, ತಲೆಯ ಮೇಲೆ ಸಾಕಷ್ಟು ಸ್ಥಳವಿಲ್ಲದಿದ್ದರೆ ಜನರು ಅದರ ಕೆಳಗೆ ನಡೆಯುವುದನ್ನು ತೊರೆಯುತ್ತಾರೆ. ಇದರಿಂದಾಗಿ ಅದರ ಗುರಿಯೇ ವಿಫಲಗೊಳ್ಳುತ್ತವೆ. ತಲೆಯ ಮೇಲೆ ಮತ್ತು ಪಕ್ಕಗಳಲ್ಲಿ ಸಾಕಷ್ಟು ಸ್ಥಳಾವಕಾಶವಿರಬೇಕು. ಸಾಮಾನುಗಳು ಬಾಳಿಕೆ ಬರುವಂತೆಯೂ ಮತ್ತು ಚೆನ್ನಾಗಿಯೂ ಇದ್ದು ರಚನೆ ಹುಷಾರಾಗಿ ಮಾಡಿದುದಾಗಿರಬೇಕು. ಇವುಗಳೆಲ್ಲದರ ಅರ್ಥ ಒಂದಲ್ಲ ಒಂದು ರೀತಿಯಲ್ಲಿ ಲತಾಗೃಹಗಳು ಮತ್ತು ಕಮಾನುಗಳು, ಅನುಭವವಿಲ್ಲದ ತೋಟಗಾರನು ಸಾಮಾನ್ಯವಾಗಿ ಊಹಿಸುವುದಕ್ಕಿಂತಲೂ ಹೆಚ್ಚಿನ ಖರ್ಚಿಗೆ ಕಾರಣವಾಗುತ್ತವೆ.

ಲತಾಗೃಹಗಳ ಒಂದು ಬಹುಮುಖ್ಯ ಅಂಶವೆಂದರೆ ಅವುಗಳ ಸಮಗ್ರ ಅಳತೆ ಮತ್ತು ಪ್ರಮಾಣ. ಮರವನ್ನು ಉಪಯೋಗಿಸಿದ್ದಲ್ಲಿ ಅದು ದಪ್ಪಕ್ಕೆ ಮತ್ತು ದುಂಡಾಗಿರಲಿ. ತೆಳ್ಳನೆಯ ಓಲಾಡುವ ಪಟ್ಟಿಗಳು ಗಟ್ಟಿಯಾಗಿದ್ದರೂ ಕೂಡ ಅಭದ್ರ ಮತ್ತು ಕ್ಷುದ್ರವಾಗಿ ಕಾಣಿಸುತ್ತವೆ. ಕಮಾನು, ಸುಮಾರು ಕಾಲದಲ್ಲಿಯೇ ಬಳ್ಳಿಯಿಂದ ಮುಚ್ಚಿಕೊಳ್ಳುವುದರಿಂದ, ಅದು ನೋಡಲು ಬಹಳ ಚೆನ್ನಾಗಿ ಕಾಣದಿದ್ದರೂ ಪರವಾಗಿಲ್ಲವೆಂಬ ಯೋಚನೆ ಕಡೆಗೆ ಜನರು ಒಲಿಯುತ್ತಾರೆ. ಎಷ್ಟೋ ಸಲ ಕಮಾನಿನ ಭಾಗಗಳು ಕಾಣಿಸಿಕೊಂಡು ಕಳಪೆ ಆಸರೆಯನ್ನು ಎತ್ತಿ ತೋರಿಸುತ್ತವೆ. ಕಬ್ಬಿಣದ ಕಮಾನುಗಳು ಹುಷಾರಾಗಿ ರಚಿಸಲ್ಪಟ್ಟಿದ್ದರೆ ಬಹಳ ಯಶಸ್ವಿಯಾಗಿರುತ್ತವೆ. ಆದರೆ ಎಲ್ಲಕ್ಕಿಂತಲೂ ಮುದ್ದಾದವುಗಳೆಂದರೆ ಕಲ್ಲಿನಿಂದ ಮಾಡಿದವು. ವಿನ್ಯಾಸವನ್ನು

ರಚಿಸುವುದಕ್ಕೆ ಮುನ್ನ ಕೆಲವು ಉಪಯುಕ್ತ ಮತ್ತು ಪ್ರಾಯೋಗಿಕ ತೋಟಗಾರಿಕೆ ಪುಸ್ತಕಗಳನ್ನು ಪರಾಮರ್ಶಿಸುವುದು ಒಳ್ಳೆಯದು.

ಒಂದು ಕಮಾನು ಅಥವಾ ಲತಾಗೃಹ ಯಾವುದೋ ಒಂದು ಕಾರ್ಯವನ್ನು ನಿರ್ವಹಿಸುತ್ತದೆ ಎಂಬಂತೆ ಕಾಣಬೇಕು. ಒಂದು ಹಾದಿಗೆ ಅಥವಾ ಕೂಡುವ ಸ್ಥಳಕ್ಕೆ ನೆರಳನ್ನು ಒದಗಿಸುವಂತಿರಬೇಕು. ಯಾವುದೋ ಒಂದು ಆಕರ್ಷಕ ಜಾತಿಯ ಬಳ್ಳಿಯನ್ನು ಬೆಳೆಯುವ ಗೀಳಿಗಾಗಿ ಕಟ್ಟಲಾಗಿದೆ ಎಂಬ ನಿಜ ಸಂಗತಿಯನ್ನು ಎಂದಿಗೂ ಹೊರಗೆಡವಬಾರದು. ಒಂದು ಹಾದಿಯ ಮುಖದ್ವಾರವನ್ನು ಕಮಾನಿನಿಂದ ಗುರುತಿಸಬಹುದು. ಅಥವಾ ಕಮಾನುಗಳ ಸರಣಿ ಒಂದು ಪಥಕ್ಕೆ ನೆರಳು ಕೊಡಬಹುದು. ಆದರೆ ಎಲ್ಲಿಯೋ ಮಧ್ಯದಲ್ಲಿ ಒಂದು ಕಮಾನನ್ನು ನಿರ್ಮಿಸುವುದು ವಿಲಕ್ಷಣವಾಗಿ ಕಾಣುವುದು.

ನಾವು ಒಂದು ಹೂ ಬಿಡುವ ಬಳ್ಳಿಯನ್ನು ಬೆಳೆಯುವುದರ ಸಲುವಾಗಿಯೆ, ಯಾವ ಒಂದು ಅವ್ಯಕ್ತ ಧ್ಯೇಯ ಅಥವಾ ಕರ್ತವ್ಯದ ಉದ್ದೇಶ ಇಲ್ಲದೆ ನೆಟ್ಟಾಗ ಅದಕ್ಕೆ ಬಹಳ ಸೂಕ್ತವಾದ ಮತ್ತು ಸ್ವಾಭಾವಿಕ ಆಸರೆಯೆಂದರೆ ಒಂದು ದೊಡ್ಡ ಸ್ಥಿರವಾದ ಮರ. ಎಷ್ಟಾದರೂ ಕಾಡಿನಲ್ಲಿ ಬಳ್ಳಿಗಳು ಮರಗಳ ಮೇಲೂ, ಹೊರಗೂ ಬೆಳೆಯುತ್ತವೆಯಾದ್ದರಿಂದ ನಮ್ಮ ತೋಟದಲ್ಲಿ ಯಾಕಾಗಬಾರದು. ಆದರೆ ವಾಸ್ತವಿಕತೆಯಲ್ಲಿ ಒಂದು ಹೂ ಬಳ್ಳಿ ಮತ್ತು ಒಂದು ತೋಟದ ಮರದ ಸಹಜೀವನದಲ್ಲಿ ಕೊಡುವ ತೆಗೆದುಕೊಳ್ಳುವ ವ್ಯವಸ್ಥೆಯನ್ನು ಅಪರೂಪವಾಗಿ ನೋಡಿದ್ದೇನೆ. ನನ್ನ ಮನಸ್ಸಿಗೆ ತೋಚುವ ಒಂದೇ ಉದಾಹರಣೆಯೆಂದರೆ ಧಾರಾಳವಾಗಿ ಕಡುಗೆಂಪು ಹೂಗಳನ್ನು ಬಿಡುತ್ತಿದ್ದ ನಾಟ್ ಓಕ್‌ಮರ (ಸಿಲ್ವರ್ ಓಕ್). ಆ ಓಕ್ ಮರವನ್ನು ಸ್ವಾಭಾವಿಕವಾಗಿ ಯಾವುದೋ ಬೋಗನ್‌ವಿಲಿಯ ಅಕ್ಷರಶಃ ಹಿಡಿದಿಟ್ಟ ಉದಾಹರಣೆ.

ಒಂದು ಬಳ್ಳಿ ಮತ್ತು ಒಂದು ಮರಕ್ಕೆ ಸಾಮ್ಯ ಅಥವಾ ಈಡು ತರಲು ಮಾಡಿದ ನನ್ನ ಸ್ವಂತ ಅಂಜುಬುರುಕ ಪ್ರಯತ್ನಗಳು ಅಸಾಧಾರಣವಾಗಿಯೆ ಅಸಫಲವಾಗಿದ್ದವು. ಸೂರ್ಯನ ಬೆಳಕನ್ನು ಯಾವ ರೀತಿಯಲ್ಲಾದರೂ ಪಡೆಯುವ ಮೂಲಧ್ಯೇಯದಿಂದ ಕೆಳಗಿಳಿಯುವ ಒಂದು ಸಾಮಾನ್ಯ ಬಳ್ಳಿಗೆ, ಆದರ್ಶದ ಆಸರೆ ಎಂದರೆ ಕವಲೊಡೆದಿರುವ ಮರ, ಇನ್ನೊಂದೆಡೆ ಬಹಳ ಯಶಸ್ವಿ ಬಳ್ಳಿ ಆ ಮರವನ್ನೇ ಅಡಗಿಸಿಕೊಳ್ಳಬಹುದು. ಆದುದರಿಂದ ನಾವು ಸೂಕ್ತವಾದ ಈಡನ್ನು ಅಂದರೆ ಒಬ್ಬರಿಗೊಬ್ಬರು ಸಹಾಯ ಮಾಡುತ್ತಾ ಇಬ್ಬರೂ ತೃಪ್ತಿಯನ್ನು ಪಡೆಯುವ ಈಡನ್ನು ಹುಡುಕಬೇಕು. ನಿಪುಣ ಗಿಡ ತಜ್ಞರು ಬಹಳ ಯಶಸ್ವಿ ಬಳ್ಳಿ–ಮರ ಪಾಲುದಾರರನ್ನು ಬಿಡಿಸಿ ಹೇಳುವುದರಿಂದ ನಮಗೆ ಬಹಳ ದೊಡ್ಡ ಸೇವೆ ಮಾಡಿದಂತಾಗುವುದು. ಪಾರಿಯಾಲ್ತಿಯ ಲಾಂದಿ ಪೋಲಿಯುವನ್ನು ಒಂದು ಬಳ್ಳಿಯಿಂದ ಅಲಂಕರಿಸಿದರೆ ಬಹಳ ಮಟ್ಟಿಗೆ ಅದರ ದುರಾದೃಷ್ಟಕರ ನೋಟವನ್ನು ಉತ್ತಮಗೊಳಿಸಬಹುದೆಂದು ನನಗನಿಸಿದೆ. ಆದರೆ ಸತ್ವವಿಲ್ಲದ ಜೋಲಾಡುವ ಎಲೆಗಳನ್ನು ಆಸರೆಯಾಗಿ ನೀಡುವ ಮರಕ್ಕೆ ಯಾವ ಬಳ್ಳಿ ತಾನೆ ಹತ್ತಲು ಒಪ್ಪಿಕೊಳ್ಳುತ್ತದೆ.

ನಾವು ಹೇಳಿದಂತೆ ಬಳ್ಳಿಗಳು ಎರಡು ದಿಕ್ಕುಗಳಲ್ಲಿ ಮಾತ್ರ ಸ್ಥಳವನ್ನು ಆಕ್ರಮಿಸುತ್ತವೆ. ಆದರೆ ಆ ಸ್ಥಳ ಯಾವಾಗಲೂ ಊರ್ಧ್ವಗಾಮಿಯಾಗಿರಬೇಕಾಗಿಲ್ಲ. ಅದು ಸಮಮಟ್ಟದಲ್ಲಿಯೂ ಹರಡಬಹುದು. ನೆಲದ ಮೇಲೆ ಹಬ್ಬುವಂತೆ ಒಂದು ಬಳ್ಳಿಯನ್ನು ಪಳಗಿಸಬಹುದು – ಆಗ ತೊಂದರೆಯಿಲ್ಲದೆ ಹೂ ಜಮಖಾನೆಯು ಸ್ಥಳವನ್ನು ಪಡೆಯುಬಹುದು. ನೆಲದ ಮೇಲೆ ಹಬ್ಬಿ ಮಲಗುವ ಇಂತಹ ವಿಧಾನ ಬಹಳ ಕಡಿದಾದ ಇಳಿಜಾರುಗಳ ಬಗ್ಗೆ ಯೋಚಿಸುವಾಗ ಒಂದು ಒಳ್ಳೆಯ ಪರಿಹಾರ ಮಾರ್ಗವಾಗಬಹುದು – ಮಳೆಗಳ ನೀರ ಹೊಡೆತದಿಂದ ಮಣ್ಣನ್ನು ಸಂರಕ್ಷಿಸಬಹುದು ಮತ್ತು ಮೇಲಿನಿಂದಲೂ, ಕೆಳಗಿನಿಂದಲೂ ಒಂದು ಸುಂದರ ನೋಟವಾಗಬಹುದು. ಒಂದಲ್ಲ ಒಂದು ರೀತಿಯಲ್ಲಿ ಮಣಿಯುವ ಮತ್ತು ಹೊಂದಿಕೊಳ್ಳುವ ಬಳ್ಳಿಗಳೇ ಸಸ್ಯಗಳ ಒಂದು ಗುಂಪು. ಅವುಗಳ ಯಶಸ್ವಿ ಪ್ರಯೋಜನ ಸಂಪೂರ್ಣವಾಗಿ ತೋಟಗಾರನ ಪ್ರತಿಭಾಶಕ್ತಿ ಮತ್ತು ಪ್ರಯೋಗ ಜ್ಞಾನವನ್ನು ಅವಲಂಬಿಸಿದೆ. ಜಮೀನಿಗೆ ಸರಿಯಾದ ಮತ್ತು ಗಿಡಗಳಿಗೆ ಸೂಕ್ತ ಈಡನ್ನು ಹುಡುಕಲು ಮತ್ತು ಅತ್ಯುತ್ತಮ ಪರಿಣಾಮ ಪಡೆಯಲು ಒಳ್ಳೆಯ ಅಭಿರುಚಿ ಮತ್ತು ಉದ್ಯಾನ ಶಾಸ್ತ್ರದ ಜ್ಞಾನಬೇಕು. ಆದರೆ ನಗರಗಳಲ್ಲಿ ಬೆಳೆಯುತ್ತಿರುವ ಜಮೀನಿನ ನ್ಯೂನತೆ, ಖಾಸಗಿ ತೋಟಗಳ ಕುಂದಿದ ವಿಸ್ತೀರ್ಣ, ಹಠಾತ್ತನೆ ಬಳ್ಳಿಗಳ ಜನಾದಾರಣೀಯತೆಯನ್ನು ಹೆಚ್ಚಿಸಬಹುದು.

ಗೃಹಸ್ಥರು ಒಂದು ಚಿಕ್ಕ ಮರಕ್ಕೆ ಬೇಕಾಗುವ ಸ್ಥಳವನ್ನು ಪಡೆಯಲಾರದೆ ಇರಬಹುದು, ಆದರೆ ನಿರಾಶರಾಗಬೇಡಿ. ನೀವು ಎಲ್ಲಿಯು ತನಕ ಬಳ್ಳಿಗಳನ್ನು ನೆಡುವಿರೋ ಅಲ್ಲಿಯು ತನಕ ಎಲೆ ಅಥವಾ ಹೂಗಳಿಂದ ವಂಚಿತರಾಗಬೇಕಿಲ್ಲ. ಅದಕ್ಕಾಗಿ ನಿಮಗೆ ಕೇವಲ 2ಅಡಿ x2ಅಡಿ ಸ್ಥಳ ಮಾತ್ರಬೇಕು.



## ಕೈಗಾರಿಕಾ ತೋಟಗಳು

ವಿಶಿಷ್ಟ ಬೇಡಿಕೆಗಳು
ಪರಿಸರದ ಗುರಿಗಳು
ಪ್ರಾಯೋಗಿಕ ಅಗತ್ಯಗಳು
ಸಜೀವ ವಸ್ತುಗಳನ್ನು ಬಳಸುವುದು

# ಕೈಗಾರಿಕಾ ತೋಟಗಳು

## ವಿಶಿಷ್ಟ ಬೇಡಿಕೆಗಳು

ಒಂದು ವಿಲಕ್ಷಣ ರೀತಿಯಲ್ಲಿ, ವಿಷಯಗಳು ಕಾಲಚಕ್ರ ಹೊರಟ ಸ್ಥಾನಕ್ಕೆ ಬಂದು ಸೇರಿದಂತಾಗಿದೆ. ಕೈಗಾರಿಕಾ ಕ್ರಾಂತಿಯ ಅಡಿಯಲ್ಲಿ ಕೈಗಾರಿಕೋದ್ಯಮಿಗಳು ಅನೇಕ ನೈಸರ್ಗಿಕ ಜೀವಿಗಳು ತಯಾರಿಕೆಯ ವ್ಯವಹಾರದಲ್ಲಿ ಅಡ್ಡ ಬರುತ್ತವೆ ಎಂಬ ತುಚ್ಛವಾದ ಅಸಡ್ಡೆಯನ್ನು ಹೊಂದಿದ್ದರು. ಈಗ ಕೈಗಾರಿಕೆಗಳ ಪರಿಸರದಲ್ಲಿ ಹಸಿರುವಾಣಿ ಅಪೇಕ್ಷಣೀಯವೆಂದು ವಾತಾವರಣವನ್ನು ಅಲ್ಪ ಶಬ್ದ ಮತ್ತು ಅಲ್ಪ ಧೂಳಿನಿಂದ ಆವರಿಸಲೆಂಬ ಪ್ರಯೋಜನಕಾರಿ ಕಾರಣಗಳಿಗೋಸ್ಕರ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ.

ಕಾರ್ಯಾಗಾರದ ಸುತ್ತ ಒಂದು ತರಹ ಸಸ್ಯ ಜೀವನ ಅವಶ್ಯಕ ಎಂಬ ಭಾವನೆಯನ್ನು ಒಪ್ಪಿಕೊಂಡರೂ ಸಹ, ಅನೇಕ ಕೈಗಾರಿಕೆಗಳು, ಅವರ ನಿವೇಶನದ ಜಮೀನನ್ನು ಚಪ್ಪಟೆಯಾಗಿ ಸದೆಬಡಿಯುವುದಲ್ಲದೆ, ಆ ಸ್ಥಳದಲ್ಲಿ ಮರವೇನಾದರೂ ಇದ್ದರೆ ಅದನ್ನು ಕೂಡ ಕಿತ್ತೊಗೆಯುತ್ತಾರೆ. ಒಂದು ದೊಡ್ಡ ಮರವು ವಿಕಾಸ ಹೊಂದಲು ಎಷ್ಟು ಕಾಲ ಹಿಡಿಯುತ್ತೆಂಬುದನ್ನು ಗಮನಿಸಿದರೆ, ಅಸ್ತಿತ್ವದಲ್ಲಿರುವ ಮರಗಳಿಗೆ ಸ್ಥಳಾವಕಾಶ ಮಾಡಿಕೊಡಲು ಮತ್ತು ಆರ್ಥಿಕ ದೃಷ್ಟಿಯಿಂದಲೂ ಕೂಡ ಕಟ್ಟಡದ ನಕ್ಷೆಗಳನ್ನು ಸೂಕ್ತ ರೀತಿಯಲ್ಲಿ ಸರಿಹೊಂದಿಸಬೇಕು. ಪ್ರಕೃತಿಯಲ್ಲಿ ಕೈಗಾರಿಕಾ ಸ್ಥಳಗಳು ಅವಲಕ್ಷಣ ನೋಟಗಳು ಎಂಬ ಭಾವನೆಗೆ ಹೊಂದಿಕೊಂಡು ನಾವು ಬೆಳೆದು ಬಂದಿದ್ದೇವೆ. ಆದರೆ ಅದು ಹಾಗಿರಬೇಕೆ? ವಾಸ್ತವಿಕವಾಗಿ ಸುತ್ತಮುತ್ತಲಿನ ಆವರಣವನ್ನು ಸೂಕ್ತವಾಗಿ ಭೂದೃಶ್ಯ ಮಾಡಿದರೆ ಮತ್ತು ಸೂಕ್ತವಾಗಿ ಸಸಿಗಳನ್ನು ನೆಟ್ಟರೆ, ಕೈಗಾರಿಕೆಯ ತಂಡವನ್ನೂ ಆಕರ್ಷಣೀಯವಾಗಿ ಮಾಡುವುದು ಬಹಳ ಸುಲಭ.

ಅಂತಹ ಯೋಜನೆ ತಯಾರಿಸುವುದರಲ್ಲಿ ಪ್ರತಿಕೂಲ ಕೊನೆಯಿಂದ ಪ್ರಾರಂಭಿಸುವುದು ಉತ್ತಮ ಸಲಹೆ. ಕಾರ್ಖಾನೆಯು ಉತ್ಪತ್ತಿ ಮಾಡಬಹುದಾದ ಅಪ್ರಯೋಜಕ ಕಸದ ವಿಧಗಳು ಮತ್ತು ದರ್ಜೆಗಳ ಬಗ್ಗೆ ಯೋಚಿಸಲು ಪ್ರಾರಂಭಿಸಬೇಕು. ಅಂತಹ ಕಚಡ ಎಲ್ಲಿಗೆ ಹೋಗುತ್ತದೆ, ಅದನ್ನು ಹೇಗೆ ಸಂಗ್ರಹಿಸುತ್ತಾರೆ, ಅದರ ವಿತರಣೆಗೆ ಜವಾಬ್ದಾರರು ಯಾರು ಮತ್ತು ಅದು ಕಟ್ಟಡದ

ಹತ್ತಿರ ಅಥವಾ ಜಮೀನಿನ ಮೇಲೆ ಹಾರಾಡದ ಹಾಗೆ ಖಾತರಿ ಪಡಿಸಕೊಳ್ಳಬೇಕು.

ಕಾರ್ಖಾನೆಯು ಕಸ, ಎಣ್ಣೆ ಚಿಂದಿ ಬಟ್ಟೆ, ಬೆಸುಗೆದಾರನ ಕೈಚೀಲಗಳಿಂದ ರಸಾಯನಿಕ ಪದಾರ್ಥಗಳವರೆಗೆ ಒಳಗೊಂಡು ಒಂದು ಸಂಪೂರ್ಣ ನದಿಯನ್ನೆ ಹಾಳು ಮಾಡಬಹುದು. ಈ ಕೊನೆಯ ಕಸದ ಬಗ್ಗೆ ಪ್ರವೀಣರ ಮತ್ತು ಶಾಸಕರ ಮಟ್ಟದಲ್ಲಿ ಚರ್ಚಿಸಬಹುದು. ಸದ್ಯಕ್ಕೆ ನಾವು ರಾಶಿಗಟ್ಟಲೆ ಹರಡಿರುವ ಅಥವಾ ನೆಲದ ಮೇಲೆ ತೂರಾಡುವ ಕಸದ ಬಗ್ಗೆ ಆಸಕ್ತಿ ಉಳ್ಳವರಾಗಿದ್ದೇವೆ. ನಮ್ಮ ಜನಾಂಗವು ಕೊಳಕನ್ನು ಕಾಣದಂತಹ ಕೊಡುಗೆಯನ್ನು ಹೊಂದಿದೆ. ಆದರೆ ಬಹಳ ಹುಷಾರಿನಿಂದ ನೆಟ್ಟು, ಸಾಕಿದ ತೋಟ, ಸ್ವಲ್ಪ ಕಸವಿದ್ದರೂ ಕೂಡ ತೋಟವಲ್ಲದಂತೆ ಕಾಣುವುದು. ಹಾಗೆಯೆ ಜಮೀನಿನ ಒಂದು ಚಿಕ್ಕ ಭಾಗ ಓರಣವಾಗಿ ಮತ್ತು ಚೊಕ್ಕಟವಾಗಿದ್ದರೆ ತೋಟವಾಗಲು ಅರ್ಧ ದಾರಿ ಸುಗಮವಾದಂತೆ. ಕಾರ್ಖಾನೆಯ ನಿರ್ವಹಣೆಯಲ್ಲಿ ಹೊಲಸನ್ನು ವ್ಯವಸ್ಥಿತ ರೀತಿಯಲ್ಲಿ ವಿತರಣೆ ಮಾಡುವುದು ಬಹಳ ಮುಖ್ಯವಾದ ಅಂಶವೆಂದು ನನಗನಿಸುತ್ತದೆ.

ಅನೇಕ ಪರಿಸ್ಥಿತಿಗಳಲ್ಲಿ ಜಮೀನನ್ನು ರೂಪುಗೊಳಿಸುವುದು ಮತ್ತು ಅದರ ಮುಖ್ಯ ಉಪಯೋಗದ ಮಧ್ಯೆ ಅವಶ್ಯಕವಾಗಿ ಒಂದು ನಿಶ್ಚಿತ ಸಂಬಂಧವಿರುತ್ತದೆ. ಖಾಸಗಿ ತೋಟವು ಮನೆಯ ಒಂದು ಬಡಾವಣೆಯಂತೆ ಮತ್ತು ಮನೆಯಾತನಿಗೆ ತನ್ನ ಹವ್ಯಾಸಗಳನ್ನು ಅಭ್ಯಾಸ ಮಾಡಲು ಒಂದು ಸ್ಥಳಾವಕಾಶ. ಒಂದು ಹೊಲ ಅಥವಾ ಹಣ್ಣಿನ ತೋಟವು ಆಹಾರವನ್ನು ಉತ್ಪತ್ತಿ ಮಾಡುತ್ತದೆ; ಕಾಡು ಚೌಬೀನೆ ಉತ್ಪತ್ತಿ ಮಾಡಿ, ವಾಯುಗುಣವನ್ನು ಸರಿಪಡಿಸಿ ಮಣ್ಣನ್ನು ಫಲವತ್ತಾಗಿ ಇಡುತ್ತದೆ. ಹಾಗೆಯೆ ಸಾರ್ವಜನಿಕ ಉದ್ಯಾನವು ವಿನೋದ-ವಿಹಾರಕ್ಕಾಗಿಯೆ ಮೀಸಲು. ಕಾರ್ಖಾನೆಯ ತೋಟ ಏತಕ್ಕಾಗಿ ? ನನ್ನ ಭಾವನೆಯಂತೆ ಅದು ಕಾರ್ಖಾನೆಯ ಸುತ್ತಲೂ ಸ್ವಲ್ಪ- ಬಯಲು ಆವರಣ ನಿರ್ಮಿಸುವುದಕ್ಕಾಗಿ ಮತ್ತು ಭೀತ ಆವರಣವನ್ನು ತಪ್ಪಿಸುವುದಕ್ಕಾಗಿ.

## ಪರಿಸರದ ಗುರಿಗಳು

ಸಂಕುಚಿತ ನಿಯಮಿತ ಕಾರ್ಯನಿರತ ವಿಧಿ ರೂಪಗಳನ್ನು ತೊಡೆದು ಹಾಕಿರುವುದರಿಂದ ಅನೇಕ ಕೈಗಾರಿಕೆಗಳು ಆಸಕ್ತಿ ಪೂರಕ, ಆಕರ್ಷಣೀಯ ಮತ್ತು ಉಪಯೋಗಕರ ಭೂದೃಶ್ಯಗಳನ್ನು ತಮ್ಮ ಘಟಕಗಳ ಸುತ್ತಲೂ ನಿರ್ಮಿಸುವಂತಹ ಒಂದು ಆದರ್ಶ ಸ್ಥಾನದಲ್ಲಿವೆ. ಬಹುಶಃ ಒಂದು ವೇಳೆ ಕೈಗಾರಿಕೆಯು ಲಾಭದಾಯಕವಲ್ಲದಿದ್ದರೂ, ಪರಿಸರದ ಸಂಬಂಧದಲ್ಲಿ ಜಮೀನು ವ್ಯವಸ್ಥೆಯು ಯಶಸ್ವಿಯಾಯಿತೆಂಬ ಸದಭಿಪ್ರಾಯವನ್ನು ಹೊಂದುವುದು ಸಾರ್ವಜನಿಕ ಕರ್ತವ್ಯವಾದೀತು. ಕೆಲವು ಚಿಕ್ಕ ಕೈಗಾರಿಕೆಗಳು, ತಮಗೆ ನಿಕೃಷ್ಟವಾಗಿ ಬೇಕಾದುದಕ್ಕಿಂತ ದೊಡ್ಡ ನಿವೇಶನಗಳನ್ನು ಹೊಂದಿರುವುದು ಅಷ್ಟು ಅಸಾಮಾನ್ಯವೇನಲ್ಲ ಮತ್ತು ಅಂತಹ ನಿವೇಶನಗಳು ಪರಿಸರದ ಅಭಿವೃದ್ಧಿಯ ಪ್ರಯೋಗಗಳಿಗೆ ವಿಸ್ಮಯಕಾರಕ ಸದಾವಕಾಶಗಳನ್ನು ಒದಗಿಸುತ್ತವೆ.

ಒಂದು ವೇಳೆ ಒಂದು ಕೈಗಾರಿಕ ಘಟಕವು ತನ್ನ ಕೆಲಸಕ್ಕೆ ಉಪಯೋಗವಾಗದಷ್ಟು ಹೆಚ್ಚುವರಿ ಜಮೀನನ್ನು ಹೊಂದಿದ್ದರೆ, ನನಗೆ ಅನಿಸುವಂತೆ, ಬಹಳ ಒಳ್ಳೆಯ ರಚನಾತ್ಮಕ ಯೋಜನೆಯಾಗಿ ಅದನ್ನು ಹಣ್ಣಿನ ವ್ಯವಸಾಯದಲ್ಲಿ ತೊಡಗಿಸಬಹುದು. ನಮ್ಮ ದೇಶದಲ್ಲಿ ಹೇರಳವಾಗಿ ಹಣ್ಣುಗಳನ್ನು ಎಂದಿಗೂ ಬೆಳೆಯಲಾರೆವು. ಹಣ್ಣಿನ ತೋಟ ಕನಿಷ್ಠ ಪೋಷಣೆ ಬಯಸುತ್ತದೆ ಮತ್ತು ಹಣ್ಣು ಕಳುವಾದರೂ ಕೂಡ ಯಾರಾದರೊಬ್ಬನ ಹೊಟ್ಟೆಯನ್ನು ತುಂಬುತ್ತದೆ. ಭದ್ರತೆ ಮತ್ತು ಪೋಷಣೆಯ ಸಮಸ್ಯೆಗಳನ್ನು ಕಡಿಮೆಗೊಳಿಸಲು ತೆಂಗಿನ ಗಿಡಗಳಂತಹವುಗಳನ್ನು ಆರಿಸಬಹುದು. ಏಕೆಂದರೆ, ಅವುಗಳಿಗೆ ಮೊದಲಿನ ಎರಡು ವರ್ಷಗಳ ನಂತರ ಹೆಚ್ಚು ಆರೈಕೆಬೇಕಾಗಿಲ್ಲ ಮತ್ತು ನುರಿತ ಮರ ಹತ್ತುವವರ ವಿನಃ ಬೇರೊಬ್ಬರಿಂದ ಕಾಯಿಗಳು ಕಳ್ಳತನವಾಗುವುದಿಲ್ಲ.

ಸೂಕ್ತ ಅಂತರದಲ್ಲಿ (ಅಂದರೆ 35ಅಡಿ) ನೆಟ್ಟ ಒಂದು ತೆಂಗಿನ ತೋಪು, ಒಂದು ಲಘು ಕೈಗಾರಿಕೆ ಉದ್ಯಮಕ್ಕೆ ಆಕರ್ಷಣೀಯ ನಿಲುವನ್ನು ಒದಗಿಸುತ್ತದೆ. ಲಘು ಕೈಗಾರಿಕೆಯ ಕಾರ್ಯಗಳನ್ನು ಹಣ್ಣಿನ ಮರಗಳ ಮಧ್ಯದಲ್ಲಿ ನಡೆಸಬಹುದು. ಹಾಗೆಯೇ ಮಾವು ಅಥವಾ ಹುಣಸೆ ತೋಪುಗಳು ಕೂಡ ಚೆನ್ನಾಗಿ ಸ್ಥಾಪಿತವಾದ ನಂತರ ಬಹಳ ಗಮನ ಬೇಡುವುದಿಲ್ಲ. ಸಣ್ಣ ಮರಗಳಾದ ಸೀಬೆ, ನಿಂಬೆ ಮತ್ತು ಇತರೆ ಜಂಭೀರಗಳು ಹೆಚ್ಚು ಪೋಷಣೆ ಬೇಡುತ್ತವೆ. ಜೊತೆಗೆ ಸುಲಭವಾಗಿ ಕದಿಯಲು ಪ್ರೇರೇಪಿಸುತ್ತವೆ.

ಅಲಂಕಾರಿಕ ತೋಟದ ವಿಷಯದಲ್ಲೂ ಕೂಡ, ಸುಲಭ ಪೋಷಣೆಯ ಮೇಲೆ ಪ್ರಾಧಾನ್ಯವಿರಬೇಕಾಗುತ್ತದೆ. ಅನೇಕ ಸಂಸ್ಥೆಗಳು ತಮ್ಮ ದೃಷ್ಟಿಯನ್ನು ಮೇಜು ಗೋಲಿ–ಬಿಲಿಯರ್ಡ್ಸ್ ಟೇಬಲ್–ಹಾಗಿರುವ ಹುಲ್ಲು ಹಾಸುಗಳು ಮತ್ತು ಪ್ರೇಕ್ಷಣೀಯ ಗುಲಾಬಿಗಳ ಮೇಲೆ ಕೇಂದ್ರೀಕೃತವಾಗಿರಿಸಿರುವಂತೆ ಕಾಣುತ್ತದೆ. ಆದರೆ ಈಗ ಇವುಗಳ ನಿರ್ವಹಣಾ ಖರ್ಚು ಭೀತಿ ಹುಟ್ಟಿಸುವಂತಿದೆ. ಒಂದು ಕಾರ್ಖಾನೆಯ ಸಿಬ್ಬಂದಿಯಲ್ಲಿರುವ ಮಾಲಿಯ ಖರ್ಚು ಸುಮಾರು ಒಬ್ಬ ಖಾಸಗಿ ಮನೆಯಲ್ಲಿನ ಮಾಲಿಯ ಖರ್ಚಿನ ಹತ್ತುಪಟ್ಟು ಆಗುತ್ತದೆ. ವಿವಿಧ ಕಾರ್ಖಾನೆಗಳು ಇಂತಹ ಸಮಸ್ಯೆಯನ್ನು ವಿಭಿನ್ನ ರೀತಿಗಳಲ್ಲಿ ವಿಚಾರ ಮಾಡುತ್ತವೆ. ಆದರೆ ಅವರು ಪರಿಸ್ಥಿತಿಯನ್ನು ಹೇಗಾದರೂ ನಿರ್ವಹಿಸಲಿ, ಎಲ್ಲರೂ ಭಾವಿಸುವಂತೆ ಯಾವ ತೋಟದ ರಚನೆ, ಸೌಂದರ್ಯ ಮತ್ತು ಘನತೆ ಅತಿ ಕಡಿಮೆ ಖರ್ಚಿನಲ್ಲಿ ನಿರ್ವಹಿಸಬಹುದೋ, ಅಂತಹದು ಗಾಢ ನಿರ್ವಹಣೆಗಿಂತ ಹೆಚ್ಚು ಒಪ್ಪಿಗೆಯಾಗುತ್ತದೆ.

ಕೈಗಾರಿಕಾ ಘಟಕಗಳು ಹೊಂದಿರುವ ತೋಟಗಳ ಯೋಜನೆ ಮತ್ತು ರಚನೆಗಳಿಗೆ ತಮ್ಮದೇ ಆದ ನಿರ್ದಿಷ್ಟ ಸಮಸ್ಯೆಗಳಿವೆ. ಆದರೆ ಅನೇಕ ಅನುಕೂಲಗಳೂ ಇವೆ; ಅದೇನೆಂದರೆ ಅಲ್ಲಿ ಸಾರ್ವಜನಿಕರಿಂದ ಕಡಿಮೆ ವಿಧ್ವಂಸಕ ಕೃತ್ಯಗಳು ನಡೆಯುವ ಸಂಭವವಿದೆ. ವ್ಯಕ್ತಿಗೆ ಅನ್ವಯಿಸದ ಯೋಗ್ಯತೆ, ಯೋಜನೆಗೆ ಅನಿವಾರ್ಯವಾಗಿ ಇರಲೇಬೇಕು–ಖಾಸಗಿ ತೋಟ ಅದರ ಯಜಮಾನನ ವೈಯಕ್ತಿಕ

ಮನೋಭಾವನೆಗಳನ್ನು ಪ್ರತಿಬಿಂಬಿಸುತ್ತದೆ ಹಾಗೆಯೆ ಕೈಗಾರಿಕೆಯ ತೋಟ, ಕೈಗಾರಿಕೆಯ ಕಲ್ಪನೆ ಅಥವಾ ಭಾವನೆಯನ್ನು ಪ್ರತಿಬಿಂಬಿಸಲು ಪ್ರಯತ್ನಿಸಬೇಕು. ಅದಲ್ಲದೆ ಅದರ ಯೋಜನೆ ಆವಶ್ಯಕ ಪ್ರಾಮುಖ್ಯತೆಗಳು ಅಂದರೆ ಕಾರು ಮತ್ತು ಬಸ್ ನಿಲ್ದಾಣಗಳು ಕಾಂಕ್ರೀಟು ರಸ್ತೆಗಳು, ಲಾರಿಗಳು ತಿರುಗಲು ಸ್ಥಳಗಳು ಇತ್ಯಾದಿಗಳ ಮಿತಿಗೆ ಒಳಪಟ್ಟಿರಬೇಕು. ಒಬ್ಬ ಸರಿಯಾದ ರೀತಿಯಲ್ಲಿ ಪ್ರಾರಂಭಿಸುವುದಿಲ್ಲ. ಏಕೆಂದರೆ, ಅದು ಅನಾವಶ್ಯಕವೆಂದೂ ಮತ್ತು ಯಾವ ರೀತಿಯಿಂದಾಗಲಿ ತನ್ನ ಕೈಗಾರಿಕೆಯ ಕೆಲಸಗಳು ಕುಂಠಿತವಾಗಬಾರದೆಂದು ತಿಳಿದಿರುತ್ತಾನೆ.

ಅನೇಕ ಸಂದರ್ಭಗಳಲ್ಲಿ ಕಾರ್ಖಾನೆಯ ಕಟ್ಟಡಗಳನ್ನು ರೂಪಿಸುವ ಶಿಲ್ಪಿ, ರಸ್ತೆ ಮತ್ತು ಇತರ ಸ್ಥಳಗಳ ಎಲ್ಲೆಗಳನ್ನು ಗುರುತು ಮಾಡುತ್ತಾನೆ. ಭೂದೃಶ್ಯಜ್ಞನು, ತೋಟವು ಅಲ್ಪ ಪ್ರಾಮುಖ್ಯವೆಂಬುದನ್ನು ಅರಿತು, ಶಿಲ್ಪಿಯು ಬಿಟ್ಟಿರುವ ಖಾಲಿ ಸ್ಥಳಗಳನ್ನು ನಿಯಂತ್ರಿಸಬೇಕು. ಇದರಿಂದ ಬಹಳ ಆಶಾಭಂಗವಾಗಬಹುದು; ಏಕೆಂದರೆ, ಎಷ್ಟೋ ಸಲ, ಈ ಕಾಲದಲ್ಲಿ ದೊಡ್ಡ ಕೈಗಾರಿಕೆಗಳಿಗೆ ತಮ್ಮ ನಿವೇಶನಗಳನ್ನು ಭೂದೃಶ್ಯಕ್ಕೆ ಒಳಪಡಿಸಿ ಉತ್ತಮ ಪಡಿಸಲು ಖರ್ಚು ಮಾಡಲು ಹಣವಿರುತ್ತದೆ. ಇನ್ನೊಂದು ಕಡೆ ಕೆಲಸದಲ್ಲಿ ಯಾವ ಅಭಿರುಚಿಯೂ ಇಲ್ಲದಿರುವುದು ಒಂದು ಅನುಕೂಲ. ಆಗ ನಕ್ಷೆ ತಯಾರಕನಿಗೆ ಕೆಲವು ಇತಿಮಿತಿಗಳೊಳಗೆ, ನಿರ್ಬಂಧವಿಲ್ಲದೆ ಕೆಲಸ ಮಾಡಬಹುದು.

## ಪ್ರಾಯೋಗಿಕ ಅಗತ್ಯಗಳು

ಅನೇಕ ಕೈಗಾರಿಕಾ ತಂಡಗಳ ಪ್ರಮುಖ ಆವಶ್ಯಕತೆಗಳು ಸಹಜವಾಗಿಯೆ ಸರಳ ಮತ್ತು ಸ್ಪಷ್ಟ. ಅವರು ತಮ್ಮ ಕಟ್ಟಡಕ್ಕೆ ಪರಿಣಾಮಕಾರಿ ಹಿನ್ನಲೆಯನ್ನು ಬಯಸುತ್ತಾರೆ ಮತ್ತು ಅವರ ಸಿಬ್ಬಂದಿ ಓಡಾಡುವ ಮಾರ್ಗಗಳಲ್ಲಿ ನೆರಳು ಬೇಕು. ಲಾರಿಗಳು ಒಳಬರುವ ಹೊರಹೋಗುವ, ಭರ್ತಿ ಮಾಡುವ, ಭರ್ತಿ ಇಳಿಸುವ ಸ್ಥಳಗಳಲ್ಲಿ ನೆರಳು ಬೇಕಾಗುತ್ತದೆ; ಕೆಲಸಗಾರರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಓಡಾಡಲು ನಿರ್ದಿಷ್ಟ ಹಾದಿಗಳು ಬೇಕಾಗುತ್ತವೆ. ಊಟದ ವೇಳೆಯಲ್ಲಿ ಕೆಲಸಗಾರರಿಗೆ ಹೊರಾಂಗಣದಲ್ಲಿ ಸುತ್ತಾಡಲು, ಬಯಲೂಟಕ್ಕೆ ಸೂಕ್ತವಾದ ಸ್ಥಳಗಳು ಬೇಕಾಗುವುದು. ಕ್ಯಾಂಟಿನ್ ಕೂಡ ಆಕರ್ಷಕವಾಗಿ ಇರಬೇಕಾಗುತ್ತದೆ. ನಂತರ ವಿಶೇಷ ಸೌಲಭ್ಯಗಳ ಅವಶ್ಯಕತೆ ಇರುವ ಕೈಗಾರಿಕೆಗಳು ಕೆಲವು ಇವೆ. ತಮ್ಮ ಕಟ್ಟಡಗಳ ಸುತ್ತಲು ಧೂಳುರಹಿತ ವಿಶಾಲ ಪ್ರದೇಶಗಳನ್ನು ಬಯಸುತ್ತವೆ – ಅಂದರೆ ಎಕರೆಗಟ್ಟಲೆ ಚೆನ್ನಾಗಿ ನೀರು ಉಣಿಸಿದ ಲಾನುಗಳು, ಕೆಲವಂತು ತಮ್ಮ ಸ್ವತ್ತುಗಳ ಮೇಲೆ, ಕಳ್ಳತನದ ಸಮಸ್ಯೆಯಿಂದಾಗಿ, ಹಣ್ಣಿನ ಗಿಡಗಳನ್ನು ತಿರಸ್ಕರಿಸುತ್ತಾರೆ. ಕೆಲವರು ಯಾವುದೇ ಮರಗಳು ನೆಡುವುದನ್ನು ಬಹಿಷ್ಕರಿಸುತ್ತಾರೆ – ಏಕೆಂದರೆ, ಅವು ಕೋತಿಗಳ, ಪಕ್ಷಿಗಳ ಅಥವಾ ಜೇನು ನೊಣಗಳ ಹಾವಳಿ ಅಥವಾ ಎಲೆಗಳು ಬೀಳುವುದಕ್ಕೆ ಪ್ರೇರೇಪಿಸುತ್ತವೆ ಮತ್ತು ಅವರಿಗೆಲ್ಲರಿಗೂ ತಂಡ ತಂಡ 'ಬಣ್ಣಗಳು'

ಬೇಕು; ಅಂದರೆ ಗುಲಾಬಿಗಳು ಮತ್ತು ವಾರ್ಷಿಕಗಳ ಹೂ ಪಾತಿಗಳು.

ಒಂದು ಸಾಮಾನ್ಯ ಸೂತ್ರದಂತೆ, ಕಟ್ಟಡಗಳ ಮಗ್ಗುಲಲ್ಲಿ ಒಳ್ಳೆಯ ಹುಲ್ಲುಹಾಸಿನ ನಿರ್ದಿಷ್ಟ ವಿಭಾಗಗಳನ್ನು ಮತ್ತು ಅದರ ಸುತ್ತಲಿನ ಸ್ಥಳಗಳನ್ನು ಒರಟು ಹುಲ್ಲಿನ ಹಾಸುಗಳಾಗಿ ಇಡುವುದು ಒಳ್ಳೆಯ ಸಲಹೆ. ಇದನ್ನು ಕ್ರಮಬದ್ಧವಾಗಿ ಕೊಯ್ಯುತ್ತಿದ್ದು, ವಾರಕ್ಕೊಂದು ಬಾರಿ ನೀರು ಚಿಮುಕಿಸುತ್ತಿದ್ದರೆ, ಅದು ಕೂಡ ಮೆಚ್ಚಿಕೊಳ್ಳುವಂತಹ ಲಾನಿನ ನಕಲಾಗುತ್ತದೆ. ಚಿಕ್ಕ ಮರಗಳು ಮತ್ತು ಆಕರ್ಷಕ ಹೂಗಳ ದೊಡ್ಡ ಹೊದರುಗಳು ಪ್ರತಿಯೊಂದು ವರ್ಷವೂ ಉಜ್ವಲ ಪ್ರದರ್ಶನವನ್ನು ಕೊಡಬಲ್ಲವು ಮತ್ತು ಅವುಗಳ ಬೇಡಿಕೆಗಳು ಕೂಡ ಬಹಳ ಕಡಿಮೆ. ಅನೇಕ ಪ್ರಯೋಗಗಳು ಮತ್ತು ವಿಫಲ ಪ್ರಯತ್ನಗಳ ನಂತರ, ನಾನು ಒಂದು ನಂಬಲರ್ಹವಾದ ಪಟ್ಟಿಯನ್ನು ಮಾಡಿದ್ದೇನೆ ಮತ್ತು ಯಾರಾದರೂ ಅದನ್ನು ಆಶ್ರಯಿಸಬಹುದು. ನನ್ನ ಪಟ್ಟಿಯಲ್ಲಿ ಪ್ಲುಮೀರಿಯ ಆಲ್ಬ, ಕಬಿಬ್ರಿಯ ಅರ್ಜೆಂಟಿಯ, ಕ್ಯಾಷ ಸ್ಪೆಕ್ಟಾಬಿಲಿಸ್, ಕ್ಯಾಷ ಇಲೇಟ, ಬಿಳಿ ಮತ್ತು ಹಳದಿ ಲಾಂಟಾನುಗಳು, ಬೊಗೆನ್‌ವಿಲಿಯ ಷುಬ್ರ ಮತ್ತು ಕ್ಲಿರೋಡೆಂಡ್ರಾನ್ ಥಾವ್‌ಸೊನ್ನೆ ಸೇರಿವೆ. ಇವೆಲ್ಲವೂ ನಂಬಲರ್ಹವಾದ ನೆಚ್ಚಿನ ಗಿಡಗಳು ಮತ್ತು ಅವು ನಿರಾಶೆಗೊಳಿಸುವುದಿಲ್ಲ. ಆದರೆ ಅವುಗಳನ್ನು ಆಕರ್ಷಕ ಗುಂಪುಗಳಲ್ಲಿ, ಮಧ್ಯೆ ಮಧ್ಯೆ ಸ್ಥಳ ಬಿಟ್ಟು ನೆಡಬೇಕು. ನೆರಳಿಗೋಸ್ಕರ – ಅನೇಕ ಕಾರ್ಖಾನೆಗಳು ಒಳ ರಸ್ತೆಗಳನ್ನು ಹೊಂದಿರುತ್ತವೆ ಮತ್ತು ಅವುಗಳ ಮೇಲೆ ನೆರಳು ಅವಶ್ಯಕ – ಮಳೆ ಮರ–ಸಾಮಾನಿಯ ಸಾಮಾನ್ ಮತ್ತು ಪೆಲ್ಟೋಫೋರಮ್ ಇನರ್ಮಿಗಳನ್ನು ಈ ದಿಸೆಯಲ್ಲಿ ಮೀರಿಸಲಾಗದು. ಒತ್ತಾದ ಎಲೆಗಳ ಸಮೂಹ, ವಿಸ್ತಾರವಾದ ಮೇಲ್ಕಟ್ಟು, ಟೊಂಗೆರಹಿತ ಕೆಳಭಾಗ ಮತ್ತು ಬಹಳ ಸಂಕ್ಷಿಪ್ತ ಎಲೆ ರಹಿತ ಕಾಲದ ಅವಧಿ–ಇವೆಲ್ಲವೂ ಅಂತಹ ಸ್ಥಳಗಳಿಗೆ ಹೇಳಿ ಮಾಡಿಸಿದಂತಿವೆ. ಇವುಗಳು ಜಾಗ್ರತೆಯಾಗಿ ಬೆಳೆಯುವುದರಿಂದ ಬೇವು ಮತ್ತು ಹುಣಸೆಗಿಂತಲೂ ಅನುಕೂಲತೆಯಲ್ಲಿ ಒಂದು ಹೆಜ್ಜೆ ಮುಂದಿವೆ. ಹಿಂದೆ ಕೆಲವೊಮ್ಮೆ ನಿಧಾನವಾಗಿ ಬೆಳೆಯುವ ದೇಶೀಯ ಜಾತಿಗಳನ್ನು ನೆಡಲು ತೀವ್ರವಾಗಿ ಹಂಬಲಿಸುತ್ತಿದ್ದಾಗ, ಶೀಘ್ರವಾಗಿ ಬೆಳೆಯುವ ಅಲ್ಪ ಅವಧಿಯ ಜಾತಿಗಳನ್ನು ಅವುಗಳ ಮಧ್ಯೆ ನೆಟ್ಟಿದ್ದೇವೆ. ಇವುಗಳ ಜೀವನ ಯಾತ್ರೆ ಬೇರೆ ಮರಗಳು ಪಕ್ವವಾಗುವುದಕ್ಕೆ ಮೊದಲೇ ಮುಗಿಯುತ್ತದೆ.

ಕೆಲವು ಕೈಗಾರಿಕ ಘಟಕಗಳು ಪ್ರಾಕಾರಕ್ಕಾಗಿ ಎತ್ತರವಾದ ಬಲಿಷ್ಠ ಗೋಡೆ ಅಥವಾ ಮೇಲೆ ಲೋಹದ ಮೊನಚು ತುಂಡುಗಳಿರುವ ಬೇಲಿಯನ್ನು ಬಯಸುತ್ತವೆ ಮತ್ತೆ ಕೆಲವು ಮುಳ್ಳು ತಂತಿಯ ಕೆಲವು ಎಳೆಗಳಿಂದ ತೃಪ್ತಿ ಹೊಂದುತ್ತವೆ. ಇವುಗಳನ್ನು ಪಶು ಅಥವಾ ಮನುಷ್ಯರ ವಿರುದ್ಧ ಕಟ್ಟಿರಬಹುದು. ಹಾಗಿದ್ದಾಗಲೂ ದ್ವಿತೀಯ ರಕ್ಷಣಾ ಶ್ರೇಣಿಯನ್ನಾಗಿ ಯಾವುದಾದರೂ ಭೂತಾಳೆಯನ್ನು ಬೆಳೆಸುವುದು ಒಂದು ಒಳ್ಳೆಯ ಸಲಹೆಯೆಂದು ನನಗೆ ಕಾಣುತ್ತದೆ. ನೀವು ಲಕ್ಷ್ಯವಿರಿಸಿಕೊಂಡು ಸುತ್ತಮುತ್ತ ಅಡ್ಡಾಡಿದರೆ, ಸ್ಥಳೀಯರು ತಮ್ಮ ಜಮೀನು ಮತ್ತು ಹಣ್ಣಿನ ತೋಟಗಳನ್ನು ರಕ್ಷಿಸಲು

ಯಾವ ಜಾತಿಯು ಸಸ್ಯಗಳನ್ನು ಬಳಸುತ್ತಾರೆಂಬುದನ್ನು ಕಂಡುಕೊಳ್ಳಬಹುದು ಮತ್ತು ಅದೇ ಜಾತೀಯವುಗಳನ್ನು ಗೋಡೆಯಾದ್ಯಂತ ನೆಟ್ಟರೆ ಅಧಿಕ ಭದ್ರತೆಯನ್ನು ಕೊಡಬಲ್ಲದು. ಸಾಧ್ಯವಾದರೆ, ಗೋಡೆಯ ಹೊರಗಡೆ ಅವುಗಳನ್ನು ನೆಡಬೇಕು – ಏಕೆಂದರೆ, ಇದು ಗಡುಸಾದ ಕಟ್ಟಡವನ್ನು ಸೌಮ್ಯಗೊಳಿಸಬಹುದಲ್ಲದೆ ಭೂದೃಶ್ಯದೊಡನೆ ಮಿಲನಗೊಳಿಸುವುದು.

ಅನೇಕ ಕೈಗಾರಿಕೆಗಳು ತಮ್ಮ ಮೇಲೆ ಎದ್ದಿರುವ ಸಾರ್ವಜನಿಕ ಬೊಬ್ಬೆಗೆ ಅರ್ಹರೆಂಬುದನ್ನು – ನಾವು ಒಪ್ಪಿಕೊಳ್ಳಬೇಕು. ಅನೇಕ ವರ್ಷಗಳಿಂದ ಅವರು ಪರಿಸರವನ್ನು ಹೆಚ್ಚಾಗಿ ದುರುಪಯೋಗಿಸಿಕೊಂಡಿದ್ದಾರೆ. ಈ ಪುಸ್ತಕ ಕೈಗಾರಿಕೆಗಳ ಅಸಡ್ಡೆಯಿಂದ ಉಂಟಾದ ವಾಯು ಮತ್ತು ನೀರಿನ ಮಲಿನತೆಯನ್ನು ಚರ್ಚಿಸುವುದಿಲ್ಲ. ಆದರೆ ದೃಷ್ಟಿಗೆ ಗೋಚರವಾಗುವ ಮಲಿನತೆ ಬಗ್ಗೆ ಮತ್ತು ಕಣ್ಣಿಗೆ ಗೋಚರವಾಗುವ ಅಭಿವೃದ್ಧಿಗಳ ಮಧ್ಯೆ ಬೆಲೆಯ ಅಂತರ ಬಹಳ ಕಡಿಮೆ ಎಂಬ ಬಗ್ಗೆ ಆತಂಕಗೊಂಡಿದೆ.

## ಸಜೀವ ವಸ್ತುಗಳನ್ನು ಬಳಸುವುದು

ಗಿಡಗಳು ... ಮರಗಳು, ಕಲವು ವೇಳೆ ಮಾನವ ನಿರ್ಮಿತ ವಸ್ತುಗಳಿಗೆ ಬದಲಾಗಿ ಮತ್ತು ಯಾವಾಗಲೂ ಉತ್ತಮವಾಗಿರುತ್ತವೆ ಎಂಬುದನ್ನು ಜ್ಞಾಪಕದಲ್ಲಿಡಿ. ಬೈಸಿಕಲ್ಲು ಮತ್ತು ಸ್ಕೂಟರ್ ಶೆಡ್ಡುಗಳನ್ನು ಕಾರಿನ ನಿಲ್ದಾಣಗಳನ್ನು ಜೀವಂತ ವಸ್ತುಗಳಿಂದ ಕಟ್ಟುವುದು ಎಂದಿಗೂ ಉತ್ತಮ.

ಒಂದು ಎಳಸಾದ ತೆಂಗಿನ ತೋಪು, ಸೈಕಲ್ಲು ಮತ್ತು ಸ್ಕೂಟರುಗಳಿಗೆ ನೆರಳನ್ನೊದಗಿಸುವ ಆದರ್ಶ ಸ್ಥಳವಾಗಬಲ್ಲದು. ಹಾಗೆಯೇ ವಯಸ್ಸಾದ ತೆಂಗಿನ ತೋಪು ಪ್ರಥಮ ದರ್ಜೆಯ ಕಾರು ನಿಲ್ದಾಣವಾಗಬಹುದು. ಒಂದು ಒಂಟಿ ಮಳೆ ಮರ ಸುಮಾರು ಅರ್ಧ ಡಜನ್ ಕಾರುಗಳಿಗೆ ನೆರಳನ್ನು ನೀಡಬಲ್ಲದು. ಒತ್ತಾಗಿ ನೆಟ್ಟಿರುವ ಸರ್ವೆ ಮರಗಳ ಸಾಲು ಒಂದು ಶ್ರೇಷ್ಠ ಪರದೆ ಅಥವಾ ಗೋಡೆಯಾಗಬಲ್ಲದು. ಬೋಗೆನ್‌ವಿಲಿಯ ಮತ್ತು ಭೂ ತಾಳೆಗಳು ಮುಳ್ಳು ತಂತಿಯ ಸ್ಥಳವನ್ನು ಪರಿಣಾಮಕಾರಿಯಾಗಿ ತೆಗೆದುಕೊಳ್ಳಬಲ್ಲವು. ನೀವು ಶಬ್ದವನ್ನು ಮಿತಿಗೊಳಿಸಬೇಕೆ – ಅನೇಕ ಮರಗಳನ್ನು ನೆಡಿರಿ. ಧೂಳನ್ನು ಕಡಿಮೆಗೊಳಿಸಬೇಕೆ– ಮರಗಳನ್ನು ನೆಡಿರಿ. ಗಾಳಿಯ ರಭಸದಿಂದ ರಕ್ಷಣೆಬೇಕೆ – ಹೆಚ್ಚು ಮರಗಳನ್ನು ಬೆಳೆಸಿ.

ಮರಗಳು ಮತ್ತು ಗಿಡಗಳು ಸಹ ವಾಸ್ತುಶಿಲ್ಪಿಯ ಬಹಳ ಉತ್ತಮ ಸ್ನೇಹಿತರು. ಯಾವುದೋ ಒಂದು ಪರಿಸ್ಥಿತಿಯಲ್ಲಿ, ವಾಸ್ತುಶಿಲ್ಪಿಯು, ಒಂದು ದೊಡ್ಡ ಕೈಗಾರಿಕಾ ತಂಡದ, ಉತ್ತಮವಾಗಿ ನಿರೂಪಿಸಿದ ಕಛೇರಿಯ ಕಟ್ಟಡಗಳ ಘಟಕವನ್ನು, ಸುಮಾರು ಐದು ಅಡಿ ಎತ್ತರದ ಕಲ್ಲಿನ ಅಧಿಷ್ಠಾನದ ಮೇಲೆ ನಿರ್ಮಿಸಲು ಯೋಜಿಸಿದ್ದನು. ಆದರೆ ನಾವು, ಒಂದು ವಿಶಾಲವಾದ ಹಸಿರು ಮೆತ್ತೆಯ ಮೇಲೆ ಕಟ್ಟಡ ನಿಂತಿರುವಂತೆ ಭಾಸವಾಗಲು ಇಳಿಜಾರಿನ ಹುಲ್ಲುಹಾಸನ್ನು ಬದಲಾಗಿ ನಿರ್ಮಿಸಲು ಕಾರ್ಯಕಾರಿ

ಸಮಿತಿಯ ಮನ ಒಪ್ಪಿಸಿದೆವು. ಇದು ಬಹಳ ಹಣವನ್ನು ಉಳಿತಾಯ ಮಾಡಿದ್ದಲ್ಲದೆ ಕಟ್ಟಡದ ಅತ್ಯಾಧುನಿಕ ರೇಖೆಗಳು ಎದ್ದು ಕಾಣುವಂತೆ ಆಕರ್ಷಣೀಯವಾಗಿ ಮಾಡಿತು. ಅಂತಹ ಗಿಡ ನೆಡುವಿಕೆಯನ್ನು ಕೈಗಾರಿಕ ತಂಡದ ಪ್ರಭುತ್ವ ನಕಾಸೆ – ಮಾಸ್ಟರ್ ಪ್ಲಾನ್‌ನಲ್ಲಿ ಅಳವಡಿಸಿದರೆ, ಕಟ್ಟಡದ ಕೆಲಸದ ಪ್ರಾರಂಭದ ಜೊತೆಯಲ್ಲಿಯೇ ಮರಗಳನ್ನು ನೆಡಬಹುದು ಮತ್ತು ತಂಡವು ತನ್ನ ಉತ್ಪನ್ನವನ್ನು ಪ್ರಾರಂಭಿಸುವಾಗ, ಮರಗಳು ಸಹ ತಮ್ಮಿಂದ ಬಯಸಿದ ಕಾರ್ಯವನ್ನು ನಿರ್ವಹಿಸಲು ಬಹುಮಟ್ಟಿಗೆ ತಯಾರಾಗಿರುತ್ತವೆ.

ಸಾಮಾನ್ಯವಾಗಿ ಕೈಗಾರಿಕೆಯ ಪರಿಸರವೆಂದರೆ, ಸಿಮೆಂಟು, ಉಕ್ಕು, ಧೂಳು, ಕಸ–ಕಳಪೆ, ಕಾವು ಮತ್ತು ಶಬ್ದ – ಆದರೆ ಎಚ್ಚರಿಕೆಯಿಂದ ನೆಟ್ಟ ಮತ್ತು ಹೆಚ್ಚಿನ ನೆಡಿಕೆ – ಇಂತಹ ಪರಿಸರವನ್ನು ಒಳ್ಳೆ ವಿವೇಚನೆಯುಳ್ಳ, ಮನೋಹರಕರವಾದ, ಕೆಲವು ವೇಳೆ ಆಕರ್ಷಣೀಯ ಭೂದೃಶ್ಯವನ್ನಾಗಿ ಮಾರ್ಪಡಿಸಬಹುದು. ಒಂದು ಕೈಗಾರಿಕಾ ತೋಟವನ್ನು ನಿವೇಶನ ಸೌಂದರ್ಯಕರಣವೆನ್ನದೆ, ಒಂದು ನಿಷ್ಕಪಟ, ಕೇವಲ ಔಪಚಾರಿಕ ಜಮೀನಿನ ಉಪಯೋಗದ ಯೋಜನೆ ಎಂದು ಮುಖ್ಯವಾಗಿ ಯೋಚಿಸಬೇಕು. ಅಂತಹ ಯೋಜನೆಯು ಪ್ರಕೃತಿಯಲ್ಲಿನ ಘಟಕಾಂಶಗಳ ನೆರವನ್ನು ಒಪ್ಪಿಕೊಂಡು ಸದುಪಯೋಗ ಪಡೆಯುತ್ತದೆ.

ಕೆಲವು ಕೈಗಾರಿಕೋದ್ಯಮಿಗಳು ತಮ್ಮ ಕೆಲಸದ ಆದರ್ಶನೀಯ ನೋಟವನ್ನು ಸಂತೋಷದಿಂದ ತೆಗೆದುಕೊಳ್ಳುತ್ತಾರೆ – ಅವರು, ದೇಶದ ಜೀವನವು ಉಚ್ಛ್ರಾಯ ಸ್ಥಿತಿಗೆ ಏರಲು ಸಹಾಯ ಮಾಡುತ್ತಾರೆ. ಜೀವನ ಕ್ರಮದ ಮಟ್ಟವನ್ನು ಉತ್ತಮಪಡಿಸಲು ಸಹಾಯ ಮಾಡುತ್ತಾರೆ, ಉದ್ಯೋಗ ಅವಕಾಶಗಳನ್ನು ಕಲ್ಪಿಸುತ್ತಾರೆ ಇತ್ಯಾದಿ. ಕೆಲವು ವೇಳೆ, ಇದರಲ್ಲಿ ಕೆಲವು ವಾಸ್ತವವಾಗಿಯೂ ನಿಜವಾಗಿರುತ್ತವೆ. ಆದರೆ ಕೈಗಾರಿಕೆಯು ಇಂಡಿಯಾ ದೇಶದ ಪ್ರಸ್ತುತ ಮಣ್ಣನ್ನು ಭೌತಿಕವಾಗಿ ಉತ್ತಮಪಡಿಸಲು ಒಂದು ಕಟ್ಟುಪಾಡು ಮಾಡಿಕೊಳ್ಳಬೇಕು. ಅವರು ಪ್ರತಿಯೊಂದು ಚದರ ಗಜದ ಮಣ್ಣನ್ನು ಅವರಿಗೆ ದೊರಕಿದ ಸ್ಥಿತಿಗಿಂತ ಉತ್ತಮ ಸ್ಥಿತಿಯಲ್ಲಿ ಬಿಡಬೇಕು ಮತ್ತು ಇದನ್ನು ಮಾಡಬೇಕಾದರೆ ಪ್ರತಿಯೊಂದು ಚದರ ಗಜವನ್ನು ಸೂಕ್ತ ಸಸ್ಯಗಳಿಂದ ನೆಡಬೇಕು.

ನಮ್ಮ ಕೈಗಾರಿಕೆಗಳು ಭೂಮಿಯ ಫಲವತ್ತತೆಯನ್ನು ಕಡಿಮೆಗೊಳಿಸುತ್ತಾ ಹೋದರೆ, ನಮ್ಮ ದೇಶದ ಮಾನವನ ಸ್ಥಿತಿಯನ್ನು ಹೇಗೆತಾನೆ ಉತ್ತಮಗೊಳಿಸಬಲ್ಲವು ?



## ಸಾರ್ವಜನಿಕ ಉದ್ಯಾನಗಳು

ಅವುಗಳ ಧ್ಯೇಯ ಮತ್ತು ಮಿತಿ
ಅಭ್ಯಾಗತ ಉಪಯೋಗ
ಹುಲ್ಲು ಹಾಸುಗಳು
ಹಾದಿಗಳು
ಹೂಪಾತಿಗಳು
ಹಸಿಬೇಲಿಗಳು
ನೀರು
ಉದ್ಯಾನ ಮತ್ತು ಜನತೆ

# ಸಾರ್ವಜನಿಕ ಉದ್ಯಾನಗಳು

## ಅವುಗಳ ಧ್ಯೇಯ ಮತ್ತು ಮಿತಿಗಳು

'ಸಾರ್ವಜನಿಕ ಉದ್ಯಾನ' ಎಂಬ ಪದಗಳಲ್ಲಿ ನೂರಾರು ಚದರ ಮೈಲಿಗಳ ವಿಸ್ತೀರ್ಣವುಳ್ಳ ರಾಷ್ಟ್ರೀಯ ವಿಹಾರ ಕ್ಷೇತ್ರಗಳಿಂದ ಹಿಡಿದು ಹಲವು ಚದರ ಗಜಗಳ ವಾಹನ ಸಂಚಾರ ಗುಡ್ಡೆಗಳವರೆಗಿನ ಎಲ್ಲ ವಿಷಯಗಳನ್ನು ನಾನು ಅಡಕಗೊಳಿಸಿದ್ದೇನೆ. ಸ್ವಭಾವತಹ ಇವೆರಡೂ ಸಾರ್ವಜನಿಕ ಸ್ಥಳಗಳ ಸಮಸ್ಯೆಗಳು ಮತ್ತು ಗುರಿಗಳು ಒಂದೇ. ಒಂದು ನಿರ್ದಿಷ್ಟ ಸ್ಥಳದ ಜೀವನ ರೀತಿ ಮತ್ತು ವೈಶಿಷ್ಟ್ಯಗಳಿಗೆ ಕನಿಷ್ಠ ಹಾನಿ ಕೂಡ ಆಗದಂತೆ, ಜನತೆಗೆ ಅತ್ಯಂತ ಹೆಚ್ಚಿನ ತೃಪ್ತಿ ಮತ್ತು ಮನೋರಂಜನೆ ಒದಗಿಸುವುದು. ಇದರಲ್ಲಿ ತೋಟಗಾರಿಕೆಗಿಂತ, ಸಾಮಾಜಿಕವಾದದ್ದು ಪ್ರಮುಖ ಸಮಸ್ಯೆಗಳೆಂಬುದನ್ನು ನೋಡಬಹುದು. ಇದಕ್ಕೆ ಹೋಲಿಸಿದರೆ, ಖಾಸಗಿ ತೋಟಗಳಿಗೆ ಸಮಸ್ಯೆಗಳೇ ಇಲ್ಲ.

ನಾನು ಎಲ್ಲಾ ಅಧಿಕಾರಶಾಹಿ ಅಡಚಣೆಗಳಾದ ಸಹಾಯ ದ್ರವ್ಯ, ಮಂಜೂರು, ದರದ ದರಖಾಸ್ತು ಮತ್ತು ಇತರೆ ಸಾರ್ವಜನಿಕ ಸಂಸ್ಥೆಗಳಿಗೆ ಅನ್ವಯಿಸುವ ಕಾಯಿದೆ ಕಟ್ಟಳೆಗಳನ್ನು ಗಣನೆಗೆ ತೆಗೆದುಕೊಳ್ಳದೆ (ಉದ್ಯಾನಗಳ ಬಗ್ಗೆ ಇವು ಬಹಳ ಪೀಡಿಸುವಂತೆ ತೋರುತ್ತದೆ) ನಾನು ಪ್ರಸ್ತುತ ಯೋಜನೆ, ನಿರ್ಮಾಣ ಮತ್ತು ದುರಸ್ತಿಗಳ ಬಗ್ಗೆ ಮಾತ್ರ ಆಸಕ್ತಿ ವಹಿಸಿಕೊಳ್ಳುತ್ತೇನೆ.

ಪ್ರಾರಂಭದಲ್ಲಿ, ಸಾರ್ವಜನಿಕ ಉದ್ಯಾನದಲ್ಲಿ ಎಷ್ಟು ಮತ್ತು ಎಂಥ ಒಳಬರುವ ಮತ್ತು ಹೊರಹೋಗುವ ಪ್ರವೇಶಗಳಿರಬೇಕೆಂಬುದರ ಬಗ್ಗೆ ಜಾಗರೂಕತೆಯಿಂದ ಯೋಚಿಸುವುದು ಮುಖ್ಯವೆಂದು ಕಾಣುತ್ತದೆ. ವಿಸ್ತೀರ್ಣಕ್ಕೆ ಅನುಗುಣವಾಗಿ, ಇವು ಸಾಕಷ್ಟು ಇರಬೇಕಲ್ಲದೆ, ಅವಶ್ಯಕತೆ ಒದಗಿದಲ್ಲಿ ಪ್ರವೇಶವನ್ನು ನಿರ್ಬಂಧಿಸಲು ಕೂಡ ಸಾಧ್ಯತೆಗಳಿರಬೇಕು. ಉದ್ಯಾನವನ್ನು ಕೆಲವು ದಿನಗಳಲ್ಲಿ ಅಥವಾ ಕೆಲವು ಸಮಯಗಳಲ್ಲಿ ಮುಚ್ಚಲು ಮತ್ತು ಅಭ್ಯಾಗತರ ಮೇಲೆ ಒಂದು ತರಹ ನಿರ್ಬಂಧ ಹೇರುವುದಕ್ಕೂ, ದೃಢವಾದ ಸಾಧ್ಯತೆಗಳಿರಬೇಕು. ಇದಕ್ಕಾಗಿ ಉದ್ಯಾನಕ್ಕೆ ಸಂಪೂರ್ಣವಾಗಿ ಸುತ್ತುವರಿಯಲ್ಪಟ್ಟಿರುವ ಒಂದು ಗೋಡೆ ಅಥವಾ ತಂತಿಯ ಬೇಲಿಯ ಅವಶ್ಯಕತೆ ಇದೆ. ನನ್ನ ಸ್ವಂತ ಅನುಭವದಲ್ಲಿ, ಬಹಳ ಜನಸಾಂದ್ರತೆ ಇರುವ ಅಥವಾ ಇದಕ್ಕೆ ಹತ್ತಿರವಿರುವ ಸ್ಥಳದಲ್ಲಿ ಉದ್ಯಾನವಿದ್ದರೆ, ಅಂಥದಕ್ಕೆ ಎಷ್ಟೇ

ಗಟ್ಟಿಯಾದ ತಂತಿ ಬೇಲಿಯೂ ಸಾಕಾಗಲಾರದು. ಭಯ ಹುಟ್ಟಿಸುವ ಗೋಡೆಯು ರಕ್ಷಣೆ ಇಲ್ಲದಿದ್ದರೆ, ಉದ್ಯಾನ ಕ್ಷೇತ್ರ ಪುಂಡ ಅಲೆಮಾರಿ ಮತ್ತು ಭಿಕ್ಷುಕರ ಉಪನಗರದ ಭಾಗ, ದುರಾಚಾರಗಳ ಗೂಡು, ಸ್ಥಳೀಯ ಜನರಿಗೆ ಸುಲಭವಾಗಿ ಸೌದೆ ಸಂಗ್ರಹಿಸುವ ಸ್ಥಳ ಅಥವಾ ಅವರ ದನಕರುಗಳಿಗೆ ಮುಫತ್ತಾಗಿ ಮೇಯಲು ಜಮೀನು ಆಗಬಹುದು. ಅಲಂಕಾರಯುತವಾದ ನೀರಿನ ಹರಿವುಗಳು ಅಗಸರ ಘಟ್ಟಗಳಾಗುತ್ತವೆ ಮತ್ತು ಗಿಡನೆಡುವ ಪ್ರತಿಯೊಂದು ಪ್ರಯತ್ನವೂ ಉದ್ದೇಶಿತ ಅಥವಾ ದುರುದ್ದೇಶಿತ ವಿಧ್ವಂಸಕಾರಿ ಕೃತ್ಯಗಳಿಂದ ಎದೆಗುಂದಬೇಕಾಗುತ್ತದೆ. ನಿಜವಾದ ವಿಹಾರಿಗಳ ಕಾರ್ಯಾಚರಣೆಗಳು – ಅಂದರೆ ಅಡಿಗೆ ಮಾಡಿಕೊಳ್ಳಲು ಬೆಂಕಿ ಉರಿಸುವಿಕೆ ಮತ್ತು ಬೆಟ್ಟದಷ್ಟು ಗಲೀಜನ್ನು ಬಿಟ್ಟು ಹೋಗುವಂತಹವರನ್ನು ಹತೋಟಿಯಲ್ಲಿಡುವುದು ಇನ್ನೂ ಕಷ್ಟದಾದ ಕೆಲಸ. ಆದರೆ ಅಂಥ ವಿಹಾರಿಗಳು ಉದ್ಯಾನವನ್ನು ವಾಸ್ತವಿಕವಾಗಿ ಹೊಗಳುತ್ತಾರೆ ಮತ್ತು ಆನಂದಿಸುತ್ತಾರೆ. ಇನ್ನೊಂದು ಬಗೆಯ ವಿಹಾರಿಗಳು ಅಂದರೆ ಸಂದೇಹಾಸ್ಪದ ಕಾರ್ಯಗಳಿಗೆ ಉದ್ಯಾನವು ಅನುಕೂಲವಾದ ಸ್ಥಳವೆಂದು ಭಾವಿಸುವವರೊಂದಿಗೆ ವ್ಯವಹರಿಸುವುದು ಇನ್ನೂ ಕಷ್ಟ. ಆಗ ಸಾರ್ವಜನಿಕರಿಗೆ ರಕ್ಷಣೆ ಒದಗಿಸಲು ವಿಶಿಷ್ಟ ಪಹರೆಯ ಅವಶ್ಯಕತೆ ಇದೆ. ಇದಕ್ಕೆ ಮೇಲಿನ ಆಡಳಿತ ವರ್ಗದವರ ಆಸರೆಬೇಕು.

ಸಾಮಾನ್ಯ ಪ್ರಜೆಗಳ ಅಂಶವಾದ ವಿಧ್ವಂಸಕಾರಿ ಕೃತ್ಯಗಳನ್ನು ಎಸಗುವವರ ಪ್ರಮಾಣಕ್ಕನುಸಾರವಾಗಿ, ಒಳ ಬರುವ ಪ್ರತಿಯೊಬ್ಬರ ಮೇಲೂ ಒಂದು ತೆರಿಗೆಯುನ್ನು ವಿಧಿಸುವುದು ಒಂದು ಒಳ್ಳೆಯ ವಾದವಾಗುತ್ತದೆ. ಸಾರ್ವಜನಿಕ ಉದ್ಯಾನಗಳ ಆಡಳಿತ ವರ್ಗದವರ ಮನಸ್ಸಿನಲ್ಲಿ, ಉದ್ಯಾನಗಳ ಕೆಲಸ ಮತ್ತು ಗುರಿಗಳು ಸ್ಪಷ್ಟವಾಗಿರುವುದಿಲ್ಲ. ಉದ್ಯಾನವನ್ನು ಕೆಲಸಕ್ಕೆ ಬಾರದ, ಯಾವ ಕಾರ್ಯಕ್ಕಾದರೂ ಉಪಯೋಗಿಸಬಹುದಾದ ಸಾರ್ವಜನಿಕ ಬಹಿರಂಗ ಸ್ಥಳವೆಂದು ಪರಿಗಣಿಸುತ್ತಾರೆ. ಅವುಗಳ ಕೆಲವು ಭಾಗಗಳನ್ನು ಪಾಠಶಾಲೆಗಳಿಗೆ, ಕ್ಲಬ್ಬುಗಳಿಗೆ ಆಶ್ರಮಗಳಿಗೆ ಅಥವಾ ಮತ್ತಿನ್ನಾವುದಕ್ಕಾದರೂ ವಹಿಸಿ ಬಿಡುತ್ತಾರೆ. ಮುಂಬೈ ಬಳಿ ಪೊವಾಯ್ ಪೌರಸಂಸ್ಥೆಯ ಉದ್ಯಾನದ ಮೂಲೆಯಲ್ಲಿ, ಸ್ಥಳೀಯ ಪಾಠಶಾಲೆಯುನ್ನು ಹಂಗಾಮಿಯಾಗಿ ಸ್ಥಾಪಿಸಲಾಗಿದೆ. ಇದರಿಂದಾಗಿ ಎರಡು ಮೂರು ಎಕರೆ ಪಾಠಶಾಲೆಗೆ ಮೀಸಲಿಟ್ಟ ಸ್ಥಳ ಬಹಳ ಮುಖ್ಯ. ಏಕೆಂದರೆ ಯಾವ ತೋಟವೇ ಆಗಲಿ, ಅದರಲ್ಲೂ ಸಾರ್ವಜನಿಕ ಉದ್ಯಾನ ಎಂದಿಗೂ ಬಹು ದೊಡ್ಡದಾಗಿರುವುದಿಲ್ಲ. ಆದರೆ ಕಳೆದುಕೊಂಡ ಜಮೀನಿಗಿಂತಲೂ ಬಹಳ ಗಂಭೀರವಾದ ಸಮಸ್ಯೆಯೆಂದರೆ, ವಾತಾವರಣ ನಷ್ಟದಿಂದಾದ ಪ್ರತಿಕೂಲ ಮತ್ತು ದುರಸ್ತಿ ಸಮಸ್ಯೆಗಳು. ಸಾವಿರ ಮಕ್ಕಳು, ಎರಡು ಸರದಿಗಳಲ್ಲಿ ದಿನಪೂರ್ತಿ ಉದ್ಯಾನದ ನಿವೇಶನದ ಮೇಲೆ ಬಡಿಯುತ್ತಿರುವಾಗ, ಕಷ್ಟ ಕೆಲಸದಿಂದಾಗಲೀ ಅಥವಾ ಇನ್ನಾವುದೇ ಪ್ರಯತ್ನದಿಂದಾಗಲಿ, ಉದ್ಭವಿಸಿದ ಸಮಸ್ಯೆಗಳನ್ನು ಬಗೆಹರಿಸಲಾಗದು. ಸಂಸ್ಥೆಗಳಿಗೆ ಅಥವಾ ಖಾಸಗಿ ಸ್ವತ್ತುಗಳಿಗೆ ಉದ್ಯಾನದ ಮೂಲಕ ಪ್ರವೇಶವಿದ್ದರೆ, ಅಹಿತಕರವಾದ ಸಮಸ್ಯೆಗಳು ಉದ್ಭವಿಸುವುದುಂಟು ಮತ್ತು

ಉದ್ಯಾನ ದುರಸ್ತಿಯು ದರ್ಜೆಯನ್ನು ಕೆಳಗಿಳಿಸುತ್ತದೆ.

ಅಂಥ ವೇಳೆಯಲ್ಲಿ ಮೊದಲಿನಿಂದಲೂ ವಾಸ್ತವವಾಗಿ ಗಮನಿಸಬೇಕಾದ ಮುಖ್ಯ ವಿಷಯವೆಂದರೆ, ಒಂದು ಉದ್ಯಾನ ಅನೇಕ ಭಾಗಗಳು ಕೂಡಿ ಆದ ಕ್ಷೇತ್ರ ಮತ್ತು ಇದನ್ನು ಇತರೆ ಚಿಲ್ಲರೆ ಕೆಲಸಗಳಿಂದ, ಅದರ ಪ್ರಭಾವ ಇಳಿಮುಖವಾಗುವುದನ್ನು ಸಹಿಸಬಾರದು. ವಾಸ್ತವವಾಗಿ, ಉದ್ಯಾನದಲ್ಲಿ ಒಂದೇ ಒಂದು ಕಟ್ಟಡಕ್ಕೆ ಅವಕಾಶ ಕೊಡಬಹುದು – ಅದು ಯಾವ ತೊಂದರೆಯನ್ನೂ ತರದ ಸತ್ತ ಕಟ್ಟಡ – ಸಮಾಧಿಯಂಥದು ಅಥವಾ ಪುರಾತನ ಸ್ಮಾರಕ. ಇದರಿಂದಾಗಿ ಯಾವ ಗಡಿಬಿಡಿಯೂ ಇರುವುದಿಲ್ಲ. ವಾಸ್ತವವಾಗಿ, ಸಮಾಧಿ ಮತ್ತು ಐತಿಹಾಸಿಕ ಅವಶೇಷಗಳ ಸುತ್ತಲೂ ನೆಟ್ಟ ಉದ್ಯಾನಗಳು ಬಹಳ ಜಯಪ್ರದವಾಗಿದೆ. ಏಕೆಂದರೆ ನಿವೇಶನದ ಮಹತ್ವದಿಂದಾಗಿ ಇನ್ನೂ ಸ್ವಲ್ಪ ಲಾಭವನ್ನು ಪಡೆಯುತ್ತವೆ.

ನಮ್ಮ ಸಮಸ್ಯೆಗೆ ಹಿಂದಿರುಗುತ್ತಾ, ಉದ್ಯಾನದ ಸಮಗ್ರತೆಯನ್ನು ಅಪವಿತ್ರಗೊಳಿಸದಿರುವುದು ಬಹಳ ಮುಖ್ಯ. ಇದರ ಪರಿಣಾಮವೆಂದರೆ, ಸುತ್ತುಗಟ್ಟಿನ ಗೋಡೆ ಅಥವಾ ಭದ್ರವಾದ ಬೇಲಿಯನ್ನು ರಚಿಸುವುದು. ಅದರಲ್ಲಿ ಹಲವಾರು ಒಳಹೋಗುವ ಮತ್ತು ಹೊರಬರುವ ದಾರಿಗಳಿದ್ದು ಕಳ್ಳಕಾಕರಿಂದ ಮತ್ತು ಬೇಜವಾಬ್ದಾರಿ ಅಭ್ಯಾಗತರಿಂದ ಆಗುವ ವಿಧ್ವಂಸಕ ಕೃತ್ಯಗಳಿಂದ, ಪರಿಣಾಮಕಾರಿ ರಕ್ಷಣೆ ಇರುವಂತೆ ವ್ಯವಸ್ಥೆ ಮಾಡುವುದು. ಸಾರ್ವಜನಿಕ ಉದ್ಯಾನಗಳ ಬಗ್ಗೆ ನನ್ನ ಅಲ್ಪ ಅನುಭವದ ಪ್ರಕಾರ ತೋಟಗಾರಿಕೆಯ ಜಯಕ್ಕಿಂತ, ಇಂಥ ಸಮಸ್ಯೆಗಳನ್ನು ಸುಧಾರಿಸುವುದು ಬಹಳ ಕಷ್ಟಕರವಾದ ಕೆಲಸ.

## ಅಭ್ಯಾಗತ ಬಳಕೆ

ಉದ್ದೇಶಪೂರಿತ ವಿನಾಶಕಗಳನ್ನು ತಡೆಗಟ್ಟುವುದು ಅಷ್ಟು ಸುಲಭವಲ್ಲ; ಆದರೆ ನಿರ್ಲಕ್ಷ್ಯ ಅಭ್ಯಾಗತನ ಬಳಕೆಯನ್ನು, ಸ್ವಲ್ಪ ಮುಂದಾಲೋಚನೆಯಿಂದ ಕಡಿಮೆ ಮಾಡಬಹುದು. ದೃಷ್ಟಾಂತರವಾಗಿ, ಸಾಕಷ್ಟು ಅಗಲವಾಗಿ ನಯವಾಗಿರುವ ಹಾದಿಗಳು ಅಭ್ಯಾಗತನನ್ನು ಅವುಗಳ ಮೇಲೆ ನಡೆಯುವಂತೆ ಪ್ರೇರೇಪಿಸುತ್ತವೆ ಮತ್ತು ನೆಟ್ಟಿರುವ ಸ್ಥಳಗಳನ್ನು ಕೆಡಿಸುವುದಿಲ್ಲ. ಇದು ಉದ್ಯಾನ ಮೆಟ್ಟಿಲುಗಳ ಬಗ್ಗೆಯೂ ನಿಜ. ಅಗಲವಾದ, ತಗ್ಗಾದ ಮೆಟ್ಟಲುಗಳು, ಜನರು ಉಪಯೋಗಿಸುವಂತೆ ಮತ್ತು ಇಳಿಜಾರುಗಳಲ್ಲಿ ಮೇಲಕ್ಕೂ ಕೆಳಕ್ಕೂ ಓಡಾಡದಂತೆ ಪ್ರೇರೇಪಿಸುತ್ತವೆ. ಹೂಪಾತಿಗಳನ್ನು ಅಭ್ಯಾಗತ ನಡೆಯಬಹುದಾದ ಸ್ಥಳಗಳಲ್ಲಿ ನಿರ್ಮಿಸಬಾರದು. ಬೆಂಚುಗಳನ್ನು ಕೂಡ ಸುಲಭವಾಗಿ ಎಟುಕುವಂಥ, ತುಳಿಯದೆ ಮತ್ತು ತುಳಿಯಬಾರದಂಥವನ್ನು ತುಳಿದು ಹೋಗುವ ಸ್ಥಳಗಳಲ್ಲಿ ಇಡಬೇಕು. ಪ್ರಾಸಂಗಿಕವಾಗಿ ಕುಳಿತುಕೊಳ್ಳುವುದಕ್ಕೆ ಹಿತಕರವಾಗಿರುವ ಸ್ಥಳಗಳಲ್ಲಿ ಇಡಬೇಕು.

ಬೆಂಚುಗಳು ಮುರಿಯದಂತೆ, ಕಳಚಿಕೊಳ್ಳದಂತೆ ಅಥವಾ ಎತ್ತಿಕೊಂಡು ಹೋಗದಂತಹ ರೀತಿಯಲ್ಲಿ ಕಲ್ಪಿಸಿ, ರಚಿಸಬೇಕು. ಸ್ವಲ್ಪ ಪ್ರಯೋಗಗಳ ನಂತರ, ನಾವು ಕಂಡಂತೆ, ಸಾರ್ವಜನಿಕ ಉದ್ಯಾನಗಳಿಗೆ ಬಹಳ ತೃಪ್ತಿಕರವಾದ ಬೆಂಚು, (5–6

ಅಂಗುಲ) ದಪ್ಪವಾಗಿರುವ, ಆಯಾಕಾರದ ಸಿಮೆಂಟಿನ ಅಥವಾ ಸಿಮೆಂಟು ಕಾಂಕ್ರೀಟಿನ ಹಲಗೆ, ಜಮೀನಿನಿಂದ ಎಂಟು ಅಂಗುಲ ಎತ್ತರವಿದ್ದು, ನಾಲ್ಕು ಮೋಟು ಕಾಲುಗಳ (ಮೂರು ಅಂಗುಲ) ಮೇಲೆ ಆಸರೆ ಹೊಂದಿ, ಹಲಗೆ, ಅಂಚಿನ ಹಿಂಭಾಗದಲ್ಲಿ ಕಾಣದಂತೆ ಅಡಗಿರಬೇಕು. ಕ್ರಿಯಾತ್ಮಕ ಮತ್ತು ಸೌಂದರ್ಯ ದೃಷ್ಟಿಯಿಂದಲೂ ಇಂಥ ಬಗೆಯ ಬೆಂಚುಗಳು, ಇತರ ವಿಧಗಳಿಗಿಂತ ಉತ್ತಮವಾದುದೆಂದು ಸಿದ್ಧಪಡಿಸಲಾಗಿದೆ. ಅದರ ತಗ್ಗಿನಲ್ಲಿಯ ಸಮತಲರೇಖೆ, ಮರಗಳ ನೇರವಾಗಿರುವ ಕಾಂಡಗಳ ಮತ್ತು ನೆಲದ ಅಲೆಯಾಕಾರದ ಡೊಂಕುಗಳ ಎದುರಿಗೆ ಇವು ವಿಶ್ರಾಂತಿ ಪೂರಕವಾಗಿಯೂ ಮತ್ತು ಆಹ್ಲಾದಕರವಾಗಿಯೂ ಇರುತ್ತವೆ. ಇತರೆ ನೈಜಿಕ ರಚನೆಗಳ ಮಧ್ಯೆ ಸಿಮೆಂಟು ಕಾಂಕ್ರೀಟಿನ ರಚನೆ ಅಷ್ಟು ಅಸಹ್ಯಕರವಾಗಿ ಕಾಣುವುದಿಲ್ಲ. ಇದರ ಜೊತೆಗೆ ಅದಕ್ಕೆ ಬಣ್ಣ ಬಳಿಯುವ ಪ್ರಮೇಯವಿಲ್ಲ. ಕದ್ದುಕೊಂಡು ಹೋಗುವ ಭಯವಿಲ್ಲ ಮತ್ತು ಸುತ್ತಿಗೆಯಿಂದ ವಿಶೇಷವಾಗಿ ಪ್ರಯತ್ನಿಸಿ ಒಡೆಯಬಹುದು. ವಾಸ್ತವವಾಗಿ ಈ ಮಾದರಿಯನ್ನು ಬೆಂಚುಗಳ ಪೈಕಿ ಬಹಳ ಅತ್ಯುತ್ತಮವಾದುದೆಂದು ಪರಿಗಣಿಸಲಾಗಿದೆ.

'ಗ್ರೀಷ್ಮ ಗೃಹ' ಅಥವಾ ಬೇಸಿಗೆ ಮನೆಗಳ ಸಮಸ್ಯೆ ಬಹಳ ಕಷ್ಟಕರವಾದದ್ದು. ಇವು ಸೂರ್ಯನ ತಾಪ ಮತ್ತು ಮಳೆಯಿಂದ, ಅಭ್ಯಾಗತನಿಗೆ ರಕ್ಷಣೆ ಒದಗಿಸಲು ಇರುವ ಆಶ್ರಮಗಳು. ಸೂರ್ಯನ ಕೋನ ಸತತವಾಗಿ ಬದಲಾಯಿಸುತ್ತಿರುತ್ತದೆ ಮತ್ತು ಛಾವಣಿ ತಲೆಯ ಮೇಲೆ ನೆಟ್ಟಗೆ ಇರುವುದರಿಂದ, ಕೆಳಗಿರುವ ಸ್ಥಳಕ್ಕೆ ನೇರವಾಗಿ ನೆರಳನ್ನು ಒದಗಿಸಲಾರದು; ಮಳೆಯು ಕೂಡ ಲಂಬಿತವಾಗಿ ಬೀಳದಿದ್ದರೆ, ತೆರೆದ ಕಡೆಗಳಿಂದ ತೊಯ್ಯುವುದು. ಈ ಬೇಸಿಗೆ ಮನೆಗಳ ರಚನಾ ಶೈಲಿ ಕೂಡ ಅನೇಕ ಸಮಸ್ಯೆಗಳನ್ನು ತಂದೊಡ್ಡುತ್ತದೆ. ಒಂದು ಅನಿಶ್ಚಿತ, ಗ್ರಾಮ್ಯ ಶೈಲಿ, ವಾಸ್ತವಿಕವಾಗಿ ನೋಡುವುದಕ್ಕೆ ಬಹಳ ಉತ್ತಮವಾದದ್ದು, ಆದರೆ ಅದನ್ನು ಒಳ್ಳೆಯ ದುರಸ್ತಿಯಲ್ಲಿಡಲು, ಹೂಡುವ ಹಣ, ಅದರ ಉಪಯೋಗಕ್ಕಿಂತ ಬಹಳ ಪಟ್ಟು ಹೆಚ್ಚು. ಮುರಿದುಬಿದ್ದ ಆಶ್ರಯಕ್ಕಿಂತ ಬೇರೆ ಇನ್ನಾವುದೂ ಉದ್ಯಾನದಲ್ಲಿ ನಿರುತ್ಸಾಹಗೊಳಿಸುವುದಿಲ್ಲ. ಇನ್ನೊಂದೆಡೆ, ಬಹಳ ಕಾಲ ಬಾಳಿಕೆ ಬರುವ ವಸ್ತುಗಳಾದ ಸಿಮೆಂಟ್ ಕಾಂಕ್ರೀಟ್, ಬಹಳ ಗಟ್ಟಿ ಮತ್ತು ಅವಲಕ್ಷಣಕರ. ಪರಿಸರಗಳಿಗೆ ಹಾನಿತರದಂತಹ ಕಾಂಕ್ರೀಟ್ ಮನೆಯನ್ನು ರಚಿಸಲು ಬಹಳ ಜಾಣ್ಮೆಬೇಕು.

ಒಟ್ಟಿನಲ್ಲಿ ನನಗೆ ಕಾಣುವ ಹಾಗೆ, ಆದಷ್ಟು ಮಟ್ಟಿಗೆ ಗ್ರೀಷ್ಮ ಗೃಹಗಳನ್ನು ತೊರೆಯಬೇಕು. ಇದು ಎಲ್ಲಿ ಸಾಧ್ಯವಿಲ್ಲವೋ ಅಲ್ಲಿ ಕೆಲವು ಅಂಶಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದು ಪ್ರಯೋಜನಕರ. (1) ವಿಪರೀತ ವಿವರಣೆಗಳಿಗೆ ಹೋಗದೆ ನೋಡಲು ಚೆನ್ನಾಗಿದ್ದರೆ ಸಾಕು. ಉದ್ರೇಕಿಸುವ ಮತ್ತು ಚಕಿತಗೊಳಿಸುವ ಆಕಾರಗಳಿಗೆ ಮುನ್ನುಗ್ಗಬೇಡಿ (2)ಛಾವಣಿಯ ಮತ್ತು ಮೇಲುಪಾಯದ ಎತ್ತರವನ್ನು ಆದಷ್ಟು ತಗ್ಗಿನಲ್ಲಿಡಿ (3) ಗುಂಡಗಿರುವ ಆಕಾರ ಮೊನಚಾದ ಮೂಲೆಗಳಿರುವ ಆಕಾರಕ್ಕಿಂತ ಉತ್ತಮ (4) ಆದಷ್ಟು ಜಾಗ್ರತೆ ಬಳ್ಳಿಗಳಿಂದ ಮುಚ್ಚಿರಿ.

ಚಿಕ್ಕ ಉದ್ಯಾನಗಳಲ್ಲಿ, ಬೆಂಚುಗಳು ಮತ್ತು ಹುಲ್ಲು ಹಾಸುಗಳು ಅಭ್ಯಾಗತರಿಗೆ ಸಾಕಷ್ಟು ಸ್ಥಳವನ್ನು ಕೊಡುವುದಕ್ಕೆ ಒದಗಿಸುತ್ತವೆ. ಆದರೆ ದೊಡ್ಡ ಮತ್ತು ಒಂದು ಕ್ರಮವಿಲ್ಲದ ಪಾರ್ಕುಗಳಲ್ಲಿ, ದೊಡ್ಡ ಸಂಸಾರ ಗೋಷ್ಠಿಗಳಿಗೆ ಚಬೂತ್ರ ಅಥವಾ ಜಗುಲಿಗಳನ್ನು ನಿರ್ಮಿಸುವುದು ಅವಶ್ಯಕ. ಇವು ಕೂಡ ವೃತ್ತಾಕಾರದಲ್ಲಿದ್ದು, ನೆಲದಿಂದ ನಾಲ್ಕು ಅಂಗುಲಕ್ಕಿಂತ ಹೆಚ್ಚು ಎತ್ತರವಿರಬಾರದು. ಇಂಥವುಗಳನ್ನು ಬಹಳ ಎತ್ತರವಾಗಿ, ಮಾಡುವುದು ಸ್ವಾಭಾವಿಕ ಪ್ರವೃತ್ತಿ. ಇದು ಪ್ರಾಯೋಗಿಕವಾಗಿಯೂ ಮತ್ತು ಸೌಂದರ್ಯದ ಬಗ್ಗೆಯೂ ಒಂದು ತಪ್ಪು ಕ್ರಮ. ಇದು ವಿಹಾರಿಗೋಷ್ಠಿಯವರನ್ನು, ಮದುವೆಯಲ್ಲಿನ ವಧೂವರರಂತೆ ಕಾಣುವುದಕ್ಕೂ ಮತ್ತು ಭಾವಿಸುವುದಕ್ಕೂ ಕಾರಣವಾಗುತ್ತದೆ.

ಸಾರ್ವಜನಿಕ ಉದ್ಯಾನಗಳಲ್ಲಿ ಕುಡಿಯುವ ನೀರಿನ ಚಿಲುಮೆಗಳನ್ನು ಇಡುವುದು ಯಾವಾಗಲೂ ಪ್ರಯೋಜನಕರ. ನಮ್ಮ ವಾತಾವರಣದಲ್ಲಿ ಸುಗಮವಾಗಿ ಸಿಕ್ಕುವ ಕುಡಿಯುವ ನೀರು ಬಹಳ ಅವಶ್ಯಕ; ಆದರೆ ನಲ್ಲಿಗಳು ಅಪರೂಪವಾಗಿ ಕೆಲಸ ಮಾಡುವುದರಿಂದ, ಅವುಗಳನ್ನು ಇಡುವುದು ವ್ಯರ್ಥವೆಂದು ಕಾಣುತ್ತದೆ. ಕುಡಿಯುವ ನೀರಿನ ಚಿಲುಮೆಗಳನ್ನು ಆವರಿಸಿರುವ ಅನೇಕ ಅಪಾಯುಗಳಲ್ಲಿ, ಒಂದು ಮುಖ್ಯವಾಗಿ ಕಾಣುವುದು ಹಿತ್ತಾಳೆ ನಲ್ಲಿಗಳಿಗಿರುವ ಮರು ಮಾರಾಟದ ಅತಿ ಹೆಚ್ಚಿನ ಮೌಲ್ಯ. ಪ್ರತಿಯೊಂದು ತಂತ್ರವನ್ನೂ – ಬೀಗ ಮತ್ತು ಸರಪಣಿಯಿಂದ ಹಿಡಿದು ಪ್ಲಾಸ್ಟಿಕ್ ನಲ್ಲಿಗಳವರವಿಗೆ ಪರೀಕ್ಷಿಸಲಾಗಿದೆ. ನನಗೆ ತಿಳಿದಹಾಗೆ, ವಿಧ್ವಂಸಕ ಕೃತ್ಯವನ್ನು ಯಶಸ್ವಿಯಾಗಿ ತಡೆಯಲಾಗಿಲ್ಲ ಅಥವಾ ಕಣ್ಣಿಗೆ ಆನಂದದಾಯಕವಾದ ಕುಡಿಯುವ ನೀರಿನ ಚಿಲುಮೆಯುನ್ನು ನಾನು ಎಲ್ಲಿಯೂ ನೋಡಿಲ್ಲ. ಅವುಗಳು ಎದ್ದು ಕಾಣದಹಾಗೆ ನಿರ್ಮಿಸುವುದರ ಬಗ್ಗೆ ಸಲಹೆ ಕೊಡಬಹುದು.

ಸಾರ್ವಜನಿಕ ಉದ್ಯಾನದಲ್ಲಿ ಇನ್ನೊಂದು ವಿಕಾರವಾದ, ಆದರೆ ಬಹಳ ಅವಶ್ಯಕವಾದ ಲಕ್ಷಣವೆಂದರೆ ಶೌಚಕೂಪ ಅಥವಾ ಶೌಚಾಲಯುಗಳು. ಇವುಗಳ ದುರಸ್ತಿ ತೊಡಕಿನ ಕೆಲಸ. ಏಕೆಂದರೆ ಅವುಗಳು ಪರಿಣಾಮಕಾರಿಯಾಗಿ ಕೆಲಸ ಮಾಡುವಂತೆ ಇಡುವುದರ ಜೊತೆಗೆ, ಚೊಕ್ಕಟವಾಗಿಯೂ ಮತ್ತು ವಾಸನೆ ಬರದಂತೆಯೂ ಇಡಬೇಕು. ಇದನ್ನು ಸಾಧಿಸಲು ಹುರುಪಿನ ಮೇಲ್ವಿಚಾರಣೆಬೇಕಲ್ಲವೆ ?, ಪ್ರತಿಯೊಂದು ಉದ್ಯಾನಕ್ಕೂ ಒಂದು ಪ್ರಾಯೋಗಿಕ ವ್ಯವಸ್ಥೆಯುನ್ನು ಅನುಗೊಳಿಸಬೇಕು. ದೊಡ್ಡ ಉದ್ಯಾನಗಳಲ್ಲಿ ಅನೇಕ ಕಕ್ಕಸುಗಳ ಅವಶ್ಯಕತೆ ಇದೆ. ಇದರ ಬಗ್ಗೆ, ವಿವಿಧ ಮೂಲೆಗಳಲ್ಲಿ ಸಣ್ಣ ಸಣ್ಣ ಅನೇಕ ಕಕ್ಕಸುಗಳನ್ನು ಕಟ್ಟುವುದು ಒಂದೇ ದೊಡ್ಡ ಕಕ್ಕಸಿಗಿಂತ ಒಳ್ಳೆಯದು. ಉದ್ಯಾನದ ಯಾವ ಭಾಗವೂ ಕಕ್ಕಸಿನಿಂದ ಬಹಳ ದೂರವಿರಬಾರದು ಮತ್ತು ಅದರ ದೂರವನ್ನು ಮಕ್ಕಳ ಪರಿಮಿತಿಯಿಂದ ನಿರ್ದಿಷ್ಟಗೊಳಿಸಬೇಕು. ಏಕೆಂದರೆ ಸಾರ್ವಜನಿಕ ಉದ್ಯಾನಗಳ ಮುಖ್ಯ ಪೋಷಕರು – ಮಕ್ಕಳು.

ಒಂದು ಕಕ್ಕಸು ಅವಲಕ್ಷಣವಾಗಿ ಮತ್ತು ವಿಕಾರವಾಗಿ ಇರಲೇಬೇಕೆಂಬ ಭಾವನೆ ಮೂಡಿಬಂದಿದೆ. ನಾನು ವಿಪರೀತ ಅಲಂಕಾರದ ಕಟ್ಟಡಗಳ ಬಗ್ಗೆ ವಾದಿಸುವುದಿಲ್ಲ.

ಆದರೂ ಕೂಡ ಸರಿಯಾದ ಪ್ರಮಾಣಗಳು ಮತ್ತು ಯುಕ್ತ ವಸ್ತುಗಳನ್ನು ನಿಶ್ಚಿತಗೊಳಿಸುವ ಸಾಧ್ಯತೆ ಇದೆ. ಸಾಮಾನ್ಯವಾದ ಇಟ್ಟಿಗೆ ಮತ್ತು ಗಾರೆ ಕೆಲಸ ಪ್ರತಿವರ್ಷವೂ ಬಣ್ಣ ಬಳೆಯುವಿಕೆಯನ್ನು ಅಪೇಕ್ಷಿಸುತ್ತವೆ ಮತ್ತು ಬಹಳ ಕಾಲ ಹೀನವಾಗಿಯೇ ಕಾಣುತ್ತದೆ. ಕಲ್ಲಿನ ಕಟ್ಟಡ, ಆದಿಯಲ್ಲಿ ದುಬಾರಿಯಾದರೂ ಬಹಳ ಕಾಲ ಬಾಳುತ್ತದೆ ಮತ್ತು ಪರಿಸರಗಳಲ್ಲಿ ಲೀನವಾಗುತ್ತದೆ. ಏನೇ ಇರಲಿ, ಶೌಚಕೂಪ ಸುಂದರ ಮಂದಿರವಾಗಲಾರದು. ಆದುದರಿಂದ ಅದನ್ನು ಬಳ್ಳಿಗಳಿಂದ ಮುಚ್ಚುವ ಪ್ರಾಥಮಿಕ ಎಚ್ಚರಿಕೆ ಕ್ರಮಗಳನ್ನು ತೆಗೆದುಕೊಳ್ಳಬೇಕು.

ಪ್ರಾಯಶಃ ಕಕ್ಕಸಿಗಿಂತಲೂ ಮುಖ್ಯವಾದುದು ಕಸದ ತೊಟ್ಟಿಗಳು. ಬಹಳ ಅನುಭವದಿಂದ, ಸಾರ್ವಜನಿಕ ಉದ್ಯಾನಗಳಲ್ಲಿ ಕಸದ-ತೊಟ್ಟಿಗಳ ಬಗ್ಗೆ ಕೆಲವು ಮುಖ್ಯ ವಿಷಯಗಳನ್ನು ತಿಳಿದುಕೊಂಡಿದ್ದೇನೆ. ಪ್ರಪ್ರಥಮವಾಗಿ, ಬೇಕೆನ್ನಬಹುದಾದದ್ದಕ್ಕಿಂತ ಬಹಳ ಹೆಚ್ಚು ಬೇಕು. ಯಾವ ವಿಹಾರಿಯೂ ಕಸದ ಬುಟ್ಟಿಯನ್ನು ಉಪಯೋಗಿಸುವ ಸಲುವಾಗಿ ಸ್ವಲ್ಪದೂರ ನಡೆಯುವ ತೊಂದರೆಯನ್ನು ತೆಗೆದುಕೊಳ್ಳಲಾರ. ಬಹಳ ಸಮೀಪದಲ್ಲಿದ್ದರೆ ಅವನು ಉಪಯೋಗಿಸುತ್ತಾನೆಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಕಸದಬುಟ್ಟಿ ಜಮೀನಿನ ಮೇಲೆ ಇದ್ದರೆ ಪೋಲಿ ನಾಯಿಗಳು ಅದರಲ್ಲಿರುವುದನ್ನು ಶೋಧಿಸುತ್ತವೆ. ಅದನ್ನು ಒಂದು ಮರಕ್ಕೆ ಮೊಳೆಹೊಡೆದರೆ, ಕಾಗೆಗಳು ಅದರಿಂದ ಆರಿಸಿ ಸಂಗ್ರಹಿಸುತ್ತವೆ; ಅದು ಲೋಹದ್ದಾಗಿದ್ದು ಒಳ್ಳೆಯ ಸ್ಥಿತಿಯಲ್ಲಿದ್ದರೆ, ಕದಿಯಲ್ಪಡುತ್ತದೆ. ಇದರಿಂದಾಗಿ ಒಂದು ಆದರ್ಶ ಕಸದ ಬುಟ್ಟಿಯೆಂದರೆ – ಹಳೆಯ ಎಣ್ಣೆ ಪೀಪಾಯಿಯನ್ನು ನೆಲದಿಂದ ಕೆಲವು ಅಡಿ ಎತ್ತರದಲ್ಲಿ ಇಡುವುದು (ನಾಯಿಗಳಿಗೆ), ಅದರ ಮುಚ್ಚಳದ ಭಾಗಮಾತ್ರ ಕತ್ತರಿಸುವುದು (ಕಾಗೆಗಳಿಗೆ), ಆದರೆ ಅದರ ಪಕ್ಕಗಳಲ್ಲಿ ಮತ್ತು ತಳದಲ್ಲಿ ಹಲವು ರಂಧ್ರಗಳನ್ನು ಕೊರೆದು ಉಪಯೋಗಿಸಲಾಗದಂತಹ ಪಾತ್ರೆಯನ್ನಾಗಿ ಮಾಡುವುದು (ಮನುಷ್ಯರಿಗೆ) ಅದನ್ನು ಮರೆಮಾಚಲು ಮಾಡುವ ಸುಂದರ ಪ್ರಯತ್ನಗಳೆಲ್ಲವೂ ತೊಂದರೆಗೀಡು ಮಾಡುತ್ತವೆ. ಅದು ಕಣ್ಣಿಗೆ ಹೊಡೆಯುವಂತೆ, ಹೊಳೆಯುವ ಬಣ್ಣಗಳನ್ನು ಬಳಿಯಬೇಕು; ಮೂರು ಭಾಷೆಗಳಲ್ಲಿ ಅದರ ಕ್ರಿಯೆ ಮತ್ತು ಉಪಯೋಗಿಸಲು ಬೇಡಿಕೆಗಳನ್ನು ಕೆತ್ತಬೇಕು. ಸಾರ್ವಜನಿಕ ಉದ್ಯಾನಗಳಿಗೆ ಬೇಕಾಗುವ ಬಣ್ಣದ ಸಂಕೇತಗಳು ಮತ್ತು ಸೂಚನೆಗಳ ಬಗ್ಗೆ ನಾನು ಬಹಳವಾಗಿ ನಂಬುತ್ತೇನೆ. ಜನತೆ ಸಂಪೂರ್ಣವಾಗಿ ಇವನ್ನು ಪಾಲಿಸುತ್ತಾರೆ ಎಂಬುದಕ್ಕಲ್ಲ. ಆದರೆ ಕೆಲವು ಕಾನೂನುಗಳನ್ನ ಪಾಲಿಸಬೇಕೆಂದು ಯತ್ನಿಸುತ್ತಿರುವ ಮಾಲಿ ಕೈಗಳನ್ನು ಇದು ಶಕ್ತಗೊಳಿಸುತ್ತದೆ. ಇದರಿಂದಾಗಿ ಮಾಲಿಯ ಪ್ರಭಾವವನ್ನು ಇಮ್ಮಡಿಗೊಳಿಸದಂತಾಗುತ್ತದೆ, ಅದರಲ್ಲೂ ಬೆಳವಣಿಗೆಯ ಆಧಾರ ಒಂದಿದ್ದರೆ.

ಅಭ್ಯಾಗತನು ತಾನು ಏನೂ ತಿನ್ನದಿದ್ದಲ್ಲಿ ಉದ್ಯಾನ ಸೌಂದರ್ಯವನ್ನು ಉಣಲಾರನೆಂಬುದು, ನಿಜವಾಗಿಯೂ ಒಂದು ನಿರುತ್ಸಾಹದಾಯಕ ಸಂಗತಿ. ತಿಂಡಿ ಯಾವಾಗಲೂ ಒಂದು ಕಾಗದದ ಚೂರಿನಲ್ಲಿ ಸುತ್ತಿರುತ್ತದೆ ಅಥವಾ ಒಳ್ಳೆಯ

ಶ್ರೇಷ್ಠವಾದ ಆಹಾರವಾದರೆ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಸುತ್ತಲ್ಪಟ್ಟಿರುತ್ತದೆ. ಅವು ಖಾಲಿಯಾದ ತಕ್ಷಣ, ನೆಲದ ಮೇಲೆ ಬಿಸಾಡಲ್ಪಡುತ್ತವೆ ಮತ್ತು ಉದ್ಯಾನದಲ್ಲಿ ಹಾರಿಕೊಂಡು ಹೋಗುತ್ತವೆ. ಇನ್ನೊಂದು ಆಶ್ಚರ್ಯಕರವಾದ ಸಂಗತಿಯೆಂದರೆ, ರಾಶಿಗಟ್ಟಲೆ ಉದುರಿದ ಎಲೆಗಳಿಂದ ಉದ್ಯಾನವು ಚೊಕ್ಕಟವಾಗಿಲ್ಲದಂತೆ ಕಾಣಬಹುದು. ಆದರೆ ಅಸಹ್ಯವಾಗಿದೆ ಎನ್ನುವಂತೆ ಕಾಣಲಾಗದು; ಅದೇ ಒಂದು ಚೂರು ಕಾಗದ ಅದನ್ನು ಹೊಲಸು ಕೇರಿ ಎನ್ನುವಂತೆ ಮಾಡುತ್ತದೆ.

ಒಂದು ರೀತಿಯಲ್ಲಿ ಸಾರ್ವಜನಿಕ ಉದ್ಯಾನದ ಒಂದು ಮುಖ್ಯ ಸಮಸ್ಯೆಯೆಂದರೆ ಕಸ ಹರಡುವಿಕೆಯನ್ನು ನಿಯಂತ್ರಿಸುವುದು. ನಮ್ಮ ಸಿಬ್ಬಂದಿ ವರ್ಗದಲ್ಲಿ ಮೊದಲಿನಿಂದಲೂ ಕಸ ಹೀನವಾಗಿ ಕಾಣುತ್ತದೆ. ಎಲ್ಲಾ ಉದ್ಯಾನ ಕೆಲಸ ಮತ್ತು ಎಚ್ಚರಿಕೆಯನ್ನು ಇಲ್ಲದಂತೆ ಮಾಡುತ್ತದೆ; ಇದರ ಅವಶ್ಯಕತೆ ಇಲ್ಲ ಮತ್ತು ಅಂತ್ಯದಲ್ಲಿ ಇದನ್ನು ತಡೆಗಟ್ಟುವುದು ಅಸಾಧ್ಯವಲ್ಲವೆನ್ನುವ ಒಂದು ನವೀನ ಅಭಿಪ್ರಾಯವನ್ನು ಅವರಲ್ಲಿ ಮೂಡಿಸಬೇಕು. ಪ್ರತಿಯೊಂದು ಚೂರು ಕಾಗದವನ್ನೂ ತಕ್ಷಣ ಎತ್ತಿಕೊಂಡು ಕಸದ ತೊಟ್ಟಿಯಲ್ಲಿ ಹಾಕಬೇಕೆಂಬ ಒಂದು ಅಭಿಪ್ರಾಯವನ್ನು ಸಿಬ್ಬಂದಿ ವರ್ಗದಲ್ಲಿ ಮೂಡಿಸುವುದು ಒಂದು ಕಷ್ಟವಾದ ಕೆಲಸ. ಇದನ್ನು ನಾಳೆಗುಡಿಸಿ ಎತ್ತಿ ಹಾಕುವವರೆಗೂ ಕಾಯಬೇಕಾದ ಅವಶ್ಯಕತೆ ಇಲ್ಲ.

## ಹುಲ್ಲು ಹಾಸುಗಳು

ಸಾರ್ವಜನಿಕ ಉದ್ಯಾನಗಳಲ್ಲಿ, ಜನಸ್ತೋಮವನ್ನು ಹೆಚ್ಚಿನ ಪ್ರಮಾಣದಲ್ಲಿ ನಿರೀಕ್ಷಿಸಿದರೆ, ಪೀಠೋಪಕರಣಗಳ ಬಗ್ಗೆ ಚರ್ಚಿಸುವಾಗ, ನನಗನ್ನಿಸುವಂತೆ, ಹುಲ್ಲುಹಾಸುಗಳನ್ನು 'ಅವಶ್ಯಕತೆ'ಗಳ ವರ್ಗದಲ್ಲಿ ಸೇರಿಸಬೇಕು. ನಯವಾದ ಹುಲ್ಲಿನ ಮೇಲೆ ನಡೆಯುವ ಮತ್ತು ಕುಳಿತುಕೊಳ್ಳುವುದರಿಂದ ಪಡೆಯುವ ಆನಂದ ಒಂದು ಭೋಗವಸ್ತು. ಇದನ್ನು ಕೆಲವೇ ಜನರು ಖಾಸಗಿಯಾಗಿ ಅನುಭವಿಸಲು ಶಕ್ತರಾಗಿರುವರು. ಈ ಕಾರಣಕ್ಕಾಗಿ ಸಾಧ್ಯವಾದಷ್ಟು ಜನರು ಇಂಥ ಆನಂದವನ್ನು ಉಣುವಂತೆ ಮಾಡುವುದು ಪ್ರತಿಯೊಂದು ಸರ್ಕಾರದ ಕರ್ತವ್ಯವಾಗಬೇಕು. ಈ ಕಾರಣದಿಂದಾಗಿ ಎಲ್ಲಾ ಸಾರ್ವಜನಿಕ ಉದ್ಯಾನಗಳು ಅತ್ಯಂತ ಹೆಚ್ಚಿನ ವಿಸ್ತೀರ್ಣವನ್ನು ಹುಲ್ಲಿನಿಂದ ಆವೃತವಾಗಿರುವಂತೆ ಮಾಡಿ, 'ಹುಲ್ಲಿನ ಮೇಲೆ ನಡೆಯಬೇಡಿ' ಎಂಬ ಸಂಕೇತಗಳು ಇಲ್ಲದಿರುವಂತೆ ನೋಡಿಕೊಳ್ಳಬೇಕು. ಆಕರ್ಷಮಯ ಹುಲ್ಲು ಹಾಸುಗಳನ್ನೇ ಹೊಂದುವ ಅವಶ್ಯಕತೆ ಇಲ್ಲ – ಒರಟಾದ ಕಳೆಪೀಡಿತ, ಆದರೆ ಅದು ದಪ್ಪವಾಗಿದ್ದು ಚೆನ್ನಾಗಿ ಕತ್ತರಿಸಿರಬೇಕು. ಅಂಥ ಹುಲ್ಲು ಹಾಸುಗಳನ್ನು ದುರಸ್ತಿಯಲ್ಲಿಡುವುದು, ಕೆಲವು ತೋಟಗಾರರು ಹೇಳುವಂತೆ, ಅಷ್ಟೇನೂ ಕಷ್ಟವಲ್ಲ. ಹೆಚ್ಚಾಗಿ ಉಪಯೋಗಿಸುವುದರಿಂದ, ಬೆತ್ತಲೆ ತೇಪೆಗಳು ಕಾಣುತ್ತವೆಂಬುದು ಒಪ್ಪತಕ್ಕದ್ದೆ. ಆದರೆ ಅವು ಪುನಹ ಕುದುರಿಕೊಳ್ಳುವವರೆಗೂ, ಹಗ್ಗಕಟ್ಟಿ ತಡೆಗಟ್ಟಬಹುದು. ಮುಖ್ಯವಾದ ಸಂಗತಿಯೆಂದರೆ, ಹುಲ್ಲಿನ ದುರ್ಬಲತೆಯ ಚಿಹ್ನೆಗಳನ್ನು ಎಚ್ಚರಿಕೆಯಿಂದ ನೋಡುತ್ತಿರಬೇಕು. ಮತ್ತು ತಕ್ಷಣ ಸೂಕ್ತ ಕ್ರಮಗಳನ್ನು

ತೆಗೆದುಕೊಳ್ಳಬೇಕು. ಹುಲ್ಲು ಹೆಚ್ಚಿನ ಪ್ರಮಾಣದಲ್ಲಿ ನೀರನ್ನು ಬಯಸುತ್ತದೆಂಬುದು ಒಪ್ಪತಕ್ಕದ್ದೆ. ಆದರೆ ನಮ್ಮ ಸೂರ್ಯ ತಾಪಭರಿತ ಶುಷ್ಕ ವಾತಾವರಣದಲ್ಲಿ, ಉದ್ಯಾನದಲ್ಲಿ ನೀರನ್ನು ಉಪಯೋಗಿಸುವುದರಿಂದ ಹೆಚ್ಚು ಪ್ರತಿಫಲ ಕೊಡುವುದು ಹುಲ್ಲು ಒಂದೇ. ಉದ್ಯಾನ, ಹಿಂದೂಸ್ಥಾನದ ಧೂಳುಭರಿತ ಮತ್ತು ಸುಡುವ ಗ್ರಾಮೀಣ ಪ್ರದೇಶಗಳಿಗೆ ವಿರೋಧನ್ಯಾಸವೆಂದು ಭಾವಿಸುತ್ತಾರೆ. ಸುಡುವ ಮತ್ತು ಧೂಳುಭರಿತ ನೋಟವನ್ನು ಪ್ರತಿಭಟಿಸಲು ಅತ್ಯಂತ ಯುಕ್ತವಾದ ವಿಧಾನವೆಂದರೆ, ಹಸಿರಿನಿಂದ ಮತ್ತು ಮರಗಳಿಂದ ಹೊದಿಸುವುದು.

ಹುಲ್ಲುಹಾಸುಗಳು ಅತ್ಯಂತ ಉತ್ಕೃಷ್ಟವಾಗಿರಬೇಕಾಗಿಲ್ಲವೆಂಬುದನ್ನು ಒಪ್ಪಿಕೊಂಡರೆ, ಉದ್ಯಾನಗಳಲ್ಲಿ ವಿಶಾಲ ಕ್ಷೇತ್ರಗಳನ್ನು ಹುಲ್ಲಿನಿಂದಾಗಿ ಮಾಡಿ ಅವುಗಳ ದುರಸ್ತಿಯ ವಿಷಯವನ್ನು ಸುಲಭವಾಗಿ ಪರಿಹರಿಸಬಹುದು. ನೀರು ಹಾಕುವುದು, ಹುಲ್ಲು ಕತ್ತರಿಸುವುದು, ಗೊಬ್ಬರ ಹೊಡಿಕೆ, ಬೆತ್ತಲೆ ತೇಪೆಗಳಿಗೆ ವಿಶ್ರಾಂತಿ ಕೊಡುವಿಕೆ – ಇಂಥ ಸಮಸ್ಯೆಗಳು ಸುಲಭವಾದುದು ಮತ್ತು ರೂಢಿಯಲ್ಲಿರುವ ಕೆಲಸಗಳು. ಕನಿಷ್ಠ ತೊಂದರೆಗೆ ಒಳಗಾಗುವಂತೆ, ಹುಲ್ಲುಹಾಸುಗಳ ಬಗ್ಗೆ ಯೋಜಿಸುವುದು ಮತ್ತು ಅನುಗೊಳಿಸುವುದರ ಬಗ್ಗೆ ಹೆಚ್ಚು ಗಮನಹರಿಸಬೇಕು.

ಒಂದು ಬಹಳ ವಿಶಾಲವಾದ, ಪೂರ್ಣ ಚಪ್ಪಟೆಯಾಗಿರುವ ಹುಲ್ಲಿನ ಕ್ಷೇತ್ರ ಚೆಂಡಾಡುವುದಕ್ಕೆ, ಓಡುವ ಪಂದ್ಯಗಳನ್ನು ಆಡಿಸುವುದಕ್ಕೆ, ಅಥವಾ ನೃತ್ಯಗಳಿಗೆ ಆಮಂತ್ರಣ ನೀಡಿದಂತೆ. ಭಾರಿ ಜನಸಂದಣಿಯ ಒಂದು ಭಾನುವಾರ, ಅನೇಕ ವಾರಗಳ ಕೆಲಸವನ್ನು ನಾಶಪಡಿಸಲು ಸಾಕು. ಅಂಥ ವೇಳೆಯಲ್ಲಿ ಪೊದೆಗಳ, ಮರಗಳ ಅಥವಾ ಹೂಪಾತಿ ತಂಡಗಳಿಂದ, ವಿಶಾಲತೆಯನ್ನು ಮುರಿಯುವುದು ಬುದ್ಧಿವಂತಿಕೆ. ಕಾಲು ಚೆಂಡಾಡುವವರಿಗೆ ಮತ್ತು ಕ್ರಿಕೆಟ್ ಆಡುವವರಿಗೆ ಬೇರೆ ಆಕರ್ಷಕ ನಿವೇಶನವನ್ನು ಸಾಧ್ಯವಾದ ಮಟ್ಟಿಗೆ ಕೊಡುವುದು ಕೂಡ ಬುದ್ಧಿವಂತಿಕೆ. ಆಕರ್ಷಕ ಎಂಬ ಪದವನ್ನು ಒತ್ತಿ ಹೇಳಬೇಕೆಂದು ಇಚ್ಛಿಸುತ್ತೇನೆ. ಏಕೆಂದರೆ ಕಣ್ಣಿಗೆ ಕಾಣುವಷ್ಟು ಕೀಳಾಗಿದ್ದರೆ, ಆಟಗಾರರು ತೃಪ್ತರಾಗುತ್ತಾರೆಂಬುದನ್ನು ಊಹಿಸುವುದು ತಪ್ಪಾಗುತ್ತದೆ. ಕುಳಿತುಕೊಳ್ಳುವುದರಿಂದ ಒದಗುವ ಧಕ್ಕೆಯನ್ನು ಅನೇಕ ಹುಲ್ಲುಹಾಸುಗಳು ತಡೆದುಕೊಳ್ಳಬಲ್ಲವು; ಹೆಚ್ಚಿನ ತುಳಿತ ಹುಲ್ಲನ್ನು ಸಾಯಿಸುತ್ತದೆ ಮತ್ತು ನೆಲ ಗಟ್ಟಿಯಾಗುತ್ತದೆ. ಮರಗಳ ಕೆಳಗಿನ ಕ್ಷೇತ್ರಗಳು ಹುಲ್ಲನ್ನು ತಡೆಯುತ್ತವೆ. ಈ ಕಾರಣದಿಂದಾಗಿ ಅನೇಕ ತೋಟಗಾರರು ಹುಲ್ಲುಹಾಸಿನ ಮೇಲೆ ಮರಗಳಿಲ್ಲದಿರುವುದನ್ನು ಬಯಸುತ್ತಾರೆ. ಆದರೆ ಆಯ್ಕೆ ಮಾಡುವಾಗ ಲಘುವಾದ ಛಾಯೆಯನ್ನು ನೀಡುವ ಮತ್ತು ಹೆಚ್ಚಿನ ಕಾಲ ಎಲೆ ರಹಿತವಾಗಿರುವ (ಉದಾ: ಗುಲ್ ಮೊಹರ್) ದನ್ನು ಆಯ್ಕೆಮಾಡಿದರೆ, ಮತ್ತು ಸೂರ್ಯನ ಬೆಳಕು ತೂರುವಂತೆ, ಕೆಳಗಿನ ಟೊಂಗೆಗಳನ್ನು ಕತ್ತರಿಸಿದರೆ, ಆಗ ಹುಲ್ಲನ್ನು ಕಾಂಡದ ತನಕ ಬೆಳೆಸುವುದು ಸಾಧ್ಯ. ಕೆಲವು ಕ್ಷೇತ್ರಗಳಲ್ಲಿ ಅದೃಷ್ಟವಶಾತ್ ದೊಡ್ಡ ಗುಂಡು ಕಲ್ಲುಗಳಿರಬಹುದು ಮತ್ತು ತೋಟಗಾರನು ಅವುಗಳನ್ನು ತೆಗೆದು ಹಾಕುವ ಬದಲು,

ತನ್ನ ಅದೃಷ್ಟಕ್ಕೆ ಕೃತಜ್ಞತೆಯನ್ನು ಅರ್ಪಿಸಬೇಕು. ಹುಲ್ಲು ಹಾಸಿನ ಮಧ್ಯ ನೈಜಿಕವಾಗಿ ಗರ್ಭದಿಂದ ಮೇಲೆದ್ದು ಕಾಣಿಸಿಕೊಳ್ಳುವ ಬಂಡೆಗಳ ಸ್ತರಗಳು, ತೋಟಗಾರನ ಪ್ರಾರ್ಥನೆಗೆ ಉತ್ತರ ಅಥವಾ ಇದನ್ನು ಪ್ರಾಯಶಃ ಇನ್ನೊಂದು ರೀತಿಯಲ್ಲಿ ಹೇಳಬಹುದು. ಎಲ್ಲೆಲ್ಲಿ ಬಂಡೆಗಳಿವೆಯೋ ಅವುಗಳ ಸುತ್ತಲೂ ಹುಲ್ಲುಹಾಸುಗಳನ್ನು ನಿರ್ಮಿಸಬೇಕು. ಹುಲ್ಲಿನ ಮಖಮಲ್ಲು ರಚನೆ, ಜಗ್ಗಲಾರದಂಥ ಕಲ್ಲಿನ ಎದುರಿಗೆ ಎತ್ತಿ ತೋರಿಸಿದಂತೆ ಇರುತ್ತದೆ. ಅನೇಕ ವೇಳೆ ಅಂತಹ ಕಲ್ಲುಗಳನ್ನು ಅಗೆದು ತೆಗೆಯುತ್ತಾರೆ ಅಥವಾ ಒಂದು ಒಳ್ಳೆಯ ಹುಲ್ಲುಹಾಸನ್ನು ಮಾಡಲು, ಹೆಚ್ಚು ಹಣವ್ಯಯಮಾಡಿ ಸಿಡಿಸುತ್ತಾರೆ. ಆದರೆ ವಾಸ್ತವಿಕವಾಗಿ ಇದರಿಂದ ದ್ವಿಗುಣ ಪ್ರಯೋಜನಗಳಾದ ಹುಲ್ಲಿನ ಸೌಂದರ್ಯವನ್ನು ಅಧಿಕಗೊಳಿಸುವುದು ಮತ್ತು ಮೇಲ್ಪದರವನ್ನು ತುಂಡಾಗಿಸುವುದನ್ನು ಹೊಂದಬಹುದಾಗಿತ್ತು. ಇವು ಕ್ರಿಕೆಟ್ ಆಟಗಾರರನ್ನು ಎದೆಗುಂದಿಸುತ್ತವೆ.

ವಿಹಾರಿಗಳು ಹೆಚ್ಚಾಗಿ ಉಪಯೋಗಿಸದಂತೆ ನಿರುತ್ಸಾಹಗೊಳಿಸುವ ಇನ್ನೊಂದು ವಿಧಾನವೆಂದರೆ ಇಳಿಜಾರುಗಳಲ್ಲಿ ಏರಿಳಿತಗಳನ್ನು ಹಾಗೆಯೇ ಇಟ್ಟು ಅಥವಾ ಸೃಷ್ಟಿಸಿ, ಹುಲ್ಲನ್ನು ನಾಟುವುದು. ಉದಾರವಾಗಿ ಡೊಂಕಾಗಿರುವ ಭೂಮಿಯ ಲಕ್ಷಣ ಆಕರ್ಷಕ ಮತ್ತು ಕುತೂಹಲಜನಕ. ಅಂಥದು ನಡೆಯುವುದಕ್ಕೆ ಅಥವಾ ಕುಳಿತುಕೊಳ್ಳುವುದಕ್ಕೆ ಒಂದು ಆಮಂತ್ರಣವೇ ಹೊರತು, ಯಾವುದೇ ಘೋರವಾದದನ್ನು ಮಾಡಬಾರದು. ಹುಲ್ಲನ್ನು ಇಳಿಜಾರುಗಳ ಮೇಲೆ ಮತ್ತು ಮರಗಳ ಸುತ್ತಲೂ ತಂದು ಹಾಕುವಾಗ ಒದಗುವ ತೊಂದರೆಗಳನ್ನು ಮರೆಯಬಾರದು ಮತ್ತು ಕೆಲವು ಸ್ಥಳಗಳಲ್ಲಿ ಸ್ವಲ್ಪ ಹೊಂದಾಣಿಕೆ ಕೆಲಸವನ್ನು ಸುಲಭ ಮಾಡುತ್ತದೆ. ತರಿಯುವುದು ಸುಲಭವೆಂದು, ಮಟ್ಟವಾದ ಬಹಿರಂಗ ಹುಲ್ಲುಹಾಸುಗಳನ್ನು ಬಯಸುವುದು ನಿಜವಾಗಿಯೂ ಒಂದು ನಿಕೃಷ್ಟ ಕಾರಣವೆಂದು ತಿಳಿಯಬೇಕು.

## ಹಾದಿಗಳು

ಸಾರ್ವಜನಿಕ ಉದ್ಯಾನಗಳನ್ನು ಯೋಜಿಸುವಾಗ, ಸ್ವಾಭಾವಿಕವಾಗಿಯೇ ಬಹಳ ಅಗಲವಾದ ಹಾದಿಗಳನ್ನು, ಉದ್ಯಾನದ ಪ್ರತಿಯೊಂದು ಭಾಗದಲ್ಲೂ ಯುಕ್ತವಾಗಿಯೇ ಪ್ರವೇಶಿಸುವಂತೆ ಮಾಡುತ್ತಾರೆ. ಇಷ್ಟು ಪ್ರಯತ್ನಗಳನ್ನು ಮಾಡಿದರೂ ಕೂಡ, ಹಲವು ವೇಳೆ ಅಡ್ಡ ಹಾದಿಗಳು ನಿರ್ಮಿತಗೊಳ್ಳುತ್ತವೆ. ಇವು ಅವಲಕ್ಷಣದ ಬೋಳಾದ ಹಾದಿಗಳಾಗುತ್ತವೆ. ಕೆಲವು ಗಜಗಳ ನಡಿಗೆಯನ್ನು ಉಳಿಸಲು, ಜನರು ದೃಢವಾಗಿ ಅಡ್ಡ ಹಾದಿಗಳನ್ನು ಮಾಡುವುದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಇನ್ನೂ ಆಶ್ಚರ್ಯಕರವೆಂದರೆ, ಮುಖ್ಯವಾಗಿ ಅವರು ನಡೆಯುವ ಉದ್ದೇಶದಿಂದ ಬಂದಿರುವಾಗ ಹೀಗೆ ಮಾಡುವುದು. ಏನೇ ಆದರೂ, ಒಂದು ಸಲ ಅಡ್ಡ ಹಾದಿ ನಿರ್ಮಿಸಲ್ಪಟ್ಟರೆ, ಅದನ್ನು ನಿಲ್ಲಿಸುವುದು ಬಹಳ ಕಷ್ಟ. ಆದುದರಿಂದ ಆ ಸ್ಥಿತಿಯನ್ನು ಒಪ್ಪಿಕೊಂಡು ಇಟ್ಟಿಗೆಯಿಂದಲೋ ಅಥವಾ

ಕಲ್ಲಿನಿಂದಲೋ, ವಿನ್ಯಾಸದಲ್ಲಿ ಅಡಕಗೊಂಡಿರುವಂತೆ, ಒಂದು ಹಾದಿಯನ್ನು ರಚಿಸುವುದು ಉತ್ತಮ. ವಾಸ್ತವವಾಗಿ, ಸಾರ್ವಜನಿಕ ಉದ್ಯಾನಗಳಲ್ಲಿ ಜನತೆಯ ನಡವಳಿಕೆಗಳನ್ನು ಎಚ್ಚರಿಕೆಯಿಂದ ಗಮನಿಸುವುದು ಲಾಭಕರ ಮತ್ತು ತನಗೆ ಬೇಕಾದ ರೀತಿಯಲ್ಲಿ ಅವರು ಪ್ರವರ್ತಿಸುವಂತೆ ಮಾಡಲು ಇದರಿಂದ ಸಹಾಯವಾಗುತ್ತದೆ.

## ಹೂವಿನ ಪಾತಿಗಳು

ಅನೇಕ ದೊಡ್ಡ ಮತ್ತು ಪ್ರೇಕ್ಷಣಿಯ ಸಾರ್ವಜನಿಕ ಉದ್ಯಾನಗಳು ಒಳ್ಳೆಯ ಪರಿಣಾಮಗಳಿಗೆ, ಕಾಲಿಕ ವಾರ್ಷಿಕಗಳ ಮೇಲೆ ನೆಚ್ಚಿಕೊಂಡಿವೆ. ನಿಜವಾಗಿಯೂ, ಈ ಪಾತಿಗಳು ಪೂರ್ಣ ಋತುಗಳಲ್ಲಿ ಬಹಳ ಆಹ್ಲಾದಕರ. ನಾನು ಒಂದು ವೇಳೆ ಸ್ವಾಭಾವಿಕವಾಗಿಯೇ ಕೊಡಬೇಕಾದ ಸಂಭ್ರಮಕ್ಕಿಂತ ಕಡಿಮೆ ಉತ್ಸಾಹವನ್ನು ಅವುಗಳ ಬಗ್ಗೆ ತೋರಿಸಿದರೆ, ಅದಕ್ಕೆ ಕಾರಣ ಭಾರತದ ಅನೇಕ ಭಾಗಗಳ ವಾತಾವರಣ (ಮುಂಬೈನಂಥವು) ಪುಷ್ಪಗಳಿಗೆ ಅಹಿತವಾದದ್ದು. ಋತುಕಾಲ ಬಹಳ ಅಲ್ಪವಾದದ್ದು ಮತ್ತು ಇದಕ್ಕಾಗಿ ಪಟ್ಟ ಕಷ್ಟ ಮತ್ತು ವಹಿಸಿದ ಖರ್ಚುಗಳಿಗೆ ಅನುಗುಣವಾದ ಪ್ರತಿಫಲಗಳಿಲ್ಲ. ಹೂಪಾತಿಗಳನ್ನು ಯಶಸ್ವಿಯಾಗಿ ಮಾಡಲು, ಹಿಂದಿನ ವಾರ್ಷಿಕಗಳು ಮುಗಿಯುವ ಮುನ್ನವೇ, ಸಸಿಗಳನ್ನು ತಯಾರಾಗಿಟ್ಟುಕೊಳ್ಳಬೇಕು. ಇದರಿಂದಾಗಿ ಬೋಳಾದ, ಅನಾಕರ್ಷಕ ಪಾತಿಗಳು ಅಭ್ಯಾಗತರು ನೋಡದಂತಾಗುವುದು. ಇದಕ್ಕೆ ಒಂದು ಸುವ್ಯವಸ್ಥೆ ಬೇಕು. ಸಾಮಾನ್ಯವಾಗಿ ಉದ್ಯಾನ ದುರಸ್ತಿಗಾರರಲ್ಲಿ ಇಂಥದು ಇರುವುದಿಲ್ಲ. ಮುಂಬೈನಲ್ಲಂತೂ ಈ ಸಮಸ್ಯೆ ಇನ್ನೂ ಉಗ್ರವಾಗಿದೆ. ಏಕೆಂದರೆ ನಂಬಲು ಅನರ್ಹವಾದ ಬೀಜಗಳು ಮತ್ತು ಇತರೆ ಮೂಲಹಕ್ಕುಗಳ ಜೊತೆಗೆ ಹೂಗಳನ್ನು ಕೀಳುವ ಮತ್ತು ಹೂಪಾತಿಗಳ ಮೇಲೆ ನಡೆಯುವ ಮೂಲಹಕ್ಕನ್ನು ಹೊಂದಿದ್ದೇವೆಂದು ಭಾವಿಸುವ ಅಶಿಕ್ಷಿತ ಜನತೆ, ಇದರಿಂದಾಗಿ ಕೇವಲ ಕ್ಯಾಕ್ಟೈ ಮತ್ತು ಕ್ರೋಟನ್ನುಗಳನ್ನು ಹುಚ್ಚು ಹುಚ್ಚಾಗಿ ನೆಡುವವರಲ್ಲಿಯೂ ಕೂಡ, ಒಂದು ಕ್ರಮಬದ್ಧವಾದ ಅಭ್ಯಾಸವಿದೆ ಎಂದು ಗೊತ್ತಾಗುವುದು.

ಕಾಶ್ಮೀರದ ಮಹಾನ್ ಉದ್ಯಾನಗಳು, ಕ್ರಮಬದ್ಧ ಹೂವಿನ ಪಾತಿಗಳ ಮಹತ್ವವನ್ನು ಸಮರ್ಥಿಸಿಕೊಂಡಿವೆ. ದೀರ್ಘ ಮಾಗಿ ಕಾಲದ ವಿಶ್ರಾಂತಿಯನ್ನು ಪಡೆದ ಮೇಲೆ ಅಲ್ಲಿನ ಉದ್ಯಾನಗಳು ವಸಂತ ಮತ್ತು ಗ್ರೀಷ್ಮ ಋತುವಿನ ಹೂಗಳಿಗೆ ತಯಾರಾಗುತ್ತವೆ. ಸುಖೋಷ್ಣಕಾಲ ಪೂರ್ತಿ, ಒಂದು ನಿರ್ದಿಷ್ಟ ಜಾತಿಯ ಪುಷ್ಪಗಳು ಮೆರೆಯುವಂತೆ, ಹೂ ಪಾತಿಗಳನ್ನು ಯೋಜಿಸುತ್ತಾರೆ; ಕ್ಷಿಪ್ರ ಗೆಡ್ಡೆ ಜಾತಿಗಳಿಂದ ಡ್ಯಾಫೊಡಿಲ್, ಐರಿಸಸ್, ಟ್ಯೂಲಿಪ್‌ಗಳಿಂದ ಪ್ರಾರಂಭಿಸಿ, ಗ್ರೀಷ್ಮಕಾಲ ನೆತ್ತಿಗೇರುವವರೆಗೂ ಅಂದರೆ ಗುಲಾಬಿ ಕಾಲ ಪರಮಾಂಕ ಏರುವವರೆಗೆ ಮೆರೆಸುತ್ತಾರೆ. ಗುಲಾಬಿಗಳ ಜೊತೆಗೆ ಪಾಪಿ, ಫ್ಲಾಕ್ಸ್, ಪ್ಯಾನ್ಸಿ, ಕ್ಯಾಂಟರ್ ಬೆರಿ ಬೆಲ್ಸ್, ಲಾರ್ಕ್‌ಸ್ಪರ್, ಹಾಲಿಹಾಕ್ಸ್ ಮತ್ತು ಇತರೆ ಅನೇಕ ಸಮಶೀತೋಷ್ಣವಲಯದ ಶ್ಲಾಘನೀಯ ಜಾತಿಗಳನ್ನು ನೆಡುತ್ತಾರೆ.

ಕೆಲವೇ ಉದ್ಯಾನಗಳನ್ನು ವಸಂತ ಋತುವಿನಲ್ಲಿನ ಕಾಶ್ಮೀರದ ಉದ್ಯಾನಗಳಿಗೆ ವರ್ಣರಂಜನೆಯಲ್ಲಿ ಹೋಲಿಸಬಹುದಾದರೂ, ಸ್ವಲ್ಪ ಗಮನಹರಿಸುವುದರಿಂದ ನಮ್ಮ ವಾರ್ಷಿಕಗಳನ್ನು ಆಕರ್ಷಕವಾಗಿ ಮಾಡಬಹುದು. ತೋಟಗಾರಿಕೆಯ ದೃಷ್ಟಿಯಿಂದ, ಸಂಪೂರ್ಣವಾಗಿ ಇದನ್ನು ನಿರ್ಲಕ್ಷಿಸಲು ಇಚ್ಛಿಸಿ, ಅದಕ್ಕೆ ಬದಲಾಗಿ ಅವುಗಳ ಅಳತೆ, ಆಕಾರ, ಹೂಪಾತಿಗಳ ಸ್ಥಾನಮಾನಗಳ ಬಗ್ಗೆ ಚರ್ಚಿಸುತ್ತೇನೆ.

ದೊಡ್ಡ ಉದ್ಯಾನಗಳಲ್ಲಿ ಒಂದು ನಿರ್ದಿಷ್ಟ ಪ್ರಮಾಣದ ಅಳತೆಯುಳ್ಳ ಹೂಪಾತಿಗಳು ಇರುವುದು ಬಹುಮುಖ್ಯ. ಚಿಕ್ಕ ಪಾತಿಗಳು ತುಚ್ಛವಾಗಿಯೂ ಮತ್ತು ಗಡಿಬಿಡಿಯಾಗಿಯೂ ಕಾಣುತ್ತವೆ. ಹಲವು ಚಿಕ್ಕ ಪಾತಿಗಳಿಗಿಂತ ಒಂದು ದೊಡ್ಡ ಪಾತಿಯನ್ನು ಹೊಂದಿರುವುದು ಬಹಳ ಉತ್ತಮ. ಎಲ್ಲಿ ಪಾತಿಗಳು ಉದ್ಯಾನದ ಅಂಚಿನೆದುರಿಗೆ ಇರುತ್ತವೆಯೋ, ಅಲ್ಲಿ ಸಾಧ್ಯವಾದಷ್ಟು ಮಟ್ಟಿಗೂ ದಟ್ಟವಾಗಿರಬೇಕು. ಇದು ಗಹನತೆ ಮತ್ತು ಆಸಕ್ತಿಯನ್ನು ಹುಟ್ಟಿಸುತ್ತದೆ. ಹುಷಾರಾಗಿ ವ್ಯವಸ್ಥಿಸಿದ ಬಣ್ಣಗಳು, ಆಕಾರಗಳು, ಅಳತೆಗಳು ಮತ್ತು ರಚನೆಗಳಿಂದ ಇಂಗ್ಲಿಷ್‌ನವರ ಮೆತು ತಾಳಿನ ಸೆರುಗು, ಯಶಸ್ವಿ ಹೂಪಾತಿಗಳಿಗೆ ದೃಷ್ಟಾಂತವಾಗಿದೆ. ಭಾರತದಲ್ಲಿ ನಾವು ಒಂದೇ ಜಾತಿಯನ್ನು ನೀರಸವಾಗಿ ಸಾಲುಗಳಲ್ಲಿ ನೆಡುತ್ತೇವೆ. ಇದು ಆಸಕ್ತಿ ಹುಟ್ಟಿಸದೆ ಬೇಸರವನ್ನು ತರುತ್ತದೆ. ಆದರೆ ಭಾರತದಲ್ಲಿ ಮಿಶ್ರ ಸೆರಗನ್ನು ನಿರ್ವಹಿಸುವುದು ಅಷ್ಟು ಸುಲಭವಲ್ಲವೆಂಬುದನ್ನು ಒಪ್ಪಿಕೊಳ್ಳಬೇಕು. ಅದೂ ಮುಖ್ಯವಾಗಿ ಸ್ಪಷ್ಟವಾಗಿ ಕಾಣುವ ಋತುಮಾನಗಳಿಲ್ಲದಿರುವ ಸ್ಥಳಗಳಲ್ಲಿ.

ಹೂಪಾತಿಯ ಆದರ್ಶ ಅದು ಒಂದು ಸ್ಥಳದಲ್ಲಿ ಆಕಸ್ಮಿಕವಾಗಿ ಸಂಭವಿಸಿತೇನೋ ಎನ್ನುವಂತಿರಬೇಕು. ಜಾಗರೂಕತೆಯಿಂದ ನಿರ್ಮಿಸಿದ ತ್ರಿಕೋಣಗಳು, ಚಚೌಕಗಳು ಮತ್ತು ಆಯಾಕಾರಗಳು ಕೃತಕವಾಗಿ ಕಾಣುತ್ತವೆ. ಏಕೆಂದರೆ ಪ್ರಕೃತಿ ಎಂದಿಗೂ ನಿರ್ದಿಷ್ಟ ಚಚೌಕ ಅಥವಾ ಆಯಾಕಾರದ ತೇಪೆಗಳಲ್ಲಿ ಬೆಳೆದಿಲ್ಲ. ಪ್ರಕೃತಿಯ ರೇಖೆಗಳು, ಅಸಮ ಡೊಂಕುಗಳಿಂದ ಕೂಡಿದ ಕೊಲ್ಲಿಗಳು ಮತ್ತು ದ್ವೀಪ ಕಲ್ಪಗಳು. ಆದರೂ ಬಹಳ ತಿರುಚಿಕೊಂಡಿರುವ ಆಕಾರಗಳು ಯಶಸ್ವಿಯಾಗಲಾರವು. ಏಕೆಂದರೆ ಕಷ್ಟಪಟ್ಟು, ನೈಜಿಕವಲ್ಲದಂತೆ ಮಾಡಿದ ಹಾಗೆ ಕಾಣುತ್ತವೆ.

ಒಂದು ಕಡೆ ನೇರ ರೇಖೆಗಳು ಮತ್ತು ಕ್ಲಿಷ್ಟಕೋನಗಳು, ಇನ್ನೊಂದೆಡೆ ವಿಪರೀತ ಕಲಾತ್ಮಕವಾದ ನೈಜಿಕ ನೋಟ – ಇವರೆಡು ಕೃತಕಗಳ ಮಧ್ಯೆ, ಒಂದು ಮಧ್ಯಸ್ತ ದಾರಿಯನ್ನು ಹುಡುಕುವುದು ವಾಸ್ತವಿಕವಾಗಿಯೇ ಬಹಳ ಕಷ್ಟ. ತೇಲಿಕೊಂಡು ಹೋಗುವ ಸುಲಭವಾದ ಡೊಂಕುಗಳು, ನೋಡುವುದಕ್ಕೆ ಅಷ್ಟು ಕಷ್ಟವಲ್ಲವೆಂದು ಕಂಡರೂ, ವಾಸ್ತವಿಕವಾಗಿ ಪಡೆಯುವುದು ಬಹಳ ಕಷ್ಟವಾದ ಕೆಲಸ. ಪ್ರತಿಯೊಂದು ಪ್ರಯತ್ನವೂ ತಪ್ಪಾಗಿ ಕಾಣುತ್ತದೆ. ರೇಖೆಗಳನ್ನು ಸರಿಯಾಗಿ ಹೊಂದಲು ಒಂದೇ ಮಾರ್ಗವಿದೆ. ನಾನು ಮೊದಲೇ ಹೇಳಿದಂತೆ, ಭಾರವಾದ ಒದ್ದೆ ಹಗ್ಗವನ್ನು ನೆಲದ ಮೇಲೆ ಹರಡುವುದರಿಂದ ಪಾತಿಯನ್ನು ಸರಿಯಾಗಿ ಗುರುತಿಸಬಹುದು. ಹಗ್ಗವನ್ನು ಎಳೆದಾಡಿ, ನೈಜಿಕವಾಗಿ ಕಾಣಬಲ್ಲ ಪಾತಿಯ ಎಲ್ಲೆಗೆರೆ ಹೊಂದುವಂತೆ ವ್ಯವಸ್ಥೆಗೊಳಿಸಬಹುದು. ಇಂಥ ಕಾರ್ಯಕ್ಕೆ ಅಧ್ಯಯನ ಅವಶ್ಯಕ. ಪ್ರಕೃತಿಯಲ್ಲಿ

ವನ್ಯಜನ್ಯ ಪುಷ್ಪಗಳು ರಾಶಿಗಳಲ್ಲಿ ಬೆಳೆಯುವ ರೀತಿಗಳನ್ನು ಗಮನಿಸಿ. ಪ್ರತಿಯೊಬ್ಬರೂ ಹಿಮಾಲಯ ಪರ್ವತ ಪ್ರದೇಶಕ್ಕೆ ಪ್ರಯಾಣ ಮಾಡುವುದು ಸುಲಭವಲ್ಲವಾದುದರಿಂದ, ಯುಕ್ತವಾದ ಸ್ಥಳಗಳನ್ನು ಕಂಡುಕೊಳ್ಳುವುದು ಬಹಳ ಕಷ್ಟ. ಆದರೆ ನೈಜಿಕ ಬೆಳವಣಿಗೆಯ ಲಕ್ಷಣಗಳನ್ನು ಕಂಡುಕೊಳ್ಳಲು ಮಳೆಗಾಲ ಬಹಳ ಯುಕ್ತವಾದದ್ದು.

ಕೇವಲ ದೃಷ್ಟಿ ಪರಿಣಾಮವನ್ನೇ ಪರಿಗಣಿಸಿದರೆ, ದೊಡ್ಡ ಮರಗಳ ಕೆಳಗಿನ ಸ್ಥಳ ವಾರ್ಷಿಕಗಳನ್ನು ನೆಡಲು ಅತ್ಯುತ್ತಮವಾದುದು. ಆದರೆ ನೆಡುವಿಕೆಯ ವಿಸ್ತೀರ್ಣ ಮರದ ಹರವಿನಷ್ಟು ದೊಡ್ಡದಾಗಿರಬೇಕು. ಅಸೌಕರ್ಯಗಳೂ ಕೂಡ ಸ್ವತಃಸಿದ್ದ: ಸ್ಥಳ ಗಾಢ ಛಾಯೆಯಲ್ಲಿರಬಹುದು. ಉದುರುವ ಎಲೆಗಳು ಗಿಡಗಳನ್ನು ನಷ್ಟಗೊಳಿಸಬಹುದು. ಬೆಗೋವಿಯದಂತಹ ಛಾಯೆ ಸಹಿಸಬಲ್ಲ ಗಿಡಗಳನ್ನು, ಬಹುವಾರ್ಷಿಕ ಮತ್ತು ಇತರೆ ಕರ್ಣ ಕುಂಡಲ ಮತ್ತು ಅಲಂಕಾರಯುಕ್ತ ಹುಲ್ಲುಗಳನ್ನು ಆಯ್ಕೆಮಾಡುವುದರಿಂದ, ಅಲ್ಲದೆ ಮರದ ಕೆಳಗಿನ ಟೊಂಗೆಗಳನ್ನು ಹಿಂದಕ್ಕೆ ಕತ್ತರಿಸುವುದರಿಂದ, ಈ ತೊಂದರೆಗಳನ್ನು ಭಾಗಶಃ ಜಯಿಸಿಬಹುದು. ಇದನ್ನು ಮಾಡಲು ಪ್ರಯತ್ನಿಸಿದರೆ, ಬಹಳ ಚಿಕ್ಕ ಪಾತಿಯನ್ನು ಸೃಜಿಸಿ, ಅದರ ಪರಿಣಾಮವನ್ನು ಕೆಡಿಸಬಾರದು. ನಾನು ಒತ್ತಿ ಹೇಳಿದಂತೆ, ಸಣ್ಣ ಸಣ್ಣದರ ಒಂದು ಶ್ರೇಣಿಗಿಂತ, ಒಂದು ದೊಡ್ಡ ಯೋಜನೆಯನ್ನು ಮಾಡುವುದು ಒಳ್ಳೆಯದು. ಈ ಮಾರ್ಗದರ್ಶನಗಳು, ಮೊಗಲರ ಸಾರ್ವಜನಿಕ ಉದ್ಯಾನಗಳಿಗೆ, ಅದೂ ಪುರಾತನ ಸ್ಮಾರಕಗಳಿಗೆ ಅನ್ವಯಿಸುವುದಿಲ್ಲವೆಂಬುದನ್ನು ಗಮನಿಸಬೇಕು. ಅಂಥವುಗಳಿಗೆ ಇದಕ್ಕೆ ವ್ಯತಿರಿಕ್ತವಾದ ಸಲಹೆಯನ್ನು ಕೊಡಬೇಕಾಗುತ್ತದೆ.

## ಹಸಿ ಬೇಲಿಗಳು

ನನಗೆ ಯಾವಾಗಲೂ ಹಸಿ ಬೇಲಿಗಳು ದುಬಾರಿ ಮತ್ತು ಆಕರ್ಷಕವಲ್ಲದ ರೂಪಗಳೆಂದು ಕಂಡಿದ್ದರೂ, ಅವುಗಳ ಉಪಯೋಗಗಳೂ ಇವೆ. ಅಭ್ಯಾಗತರನ್ನು ಬೇಡವಾದ ಸ್ಥಳದಿಂದ ಬೇಕಾದ ಸ್ಥಳದಲ್ಲಿ ನಡೆಯುವಂತೆ ಪ್ರೇರೇಪಿಸಲು ಇವುಗಳ ಅವಶ್ಯಕತೆ ಇದೆ. ಎತ್ತರವಾದ ಹಸಿ ಬೇಲಿಗಳು ಉದ್ಯಾನವನ್ನು ಕತ್ತರಿಸಿ ತುಂಡುಗಳಾಗಿಯೂ ಮತ್ತು ಅಸ್ತವ್ಯಸ್ತವಾಗಿಯೂ ಕಾಣುವಂತೆ ಮಾಡುತ್ತವೆ; ತಗ್ಗು ಮತ್ತು ಅಗಲವಾದ ಹಸಿ ಬೇಲಿಗಳು ಎತ್ತರ ಬೇಲಿಗಳಷ್ಟೇ ಪರಿಣಾಮಕಾರಿಯಾಗಿ ರಕ್ಷಿಸಬಲ್ಲವು. ಎಚ್ಚರಿಕೆಯಿಂದ ನಿರ್ವಹಿಸಿದರೆ, ಉದ್ಯಾನದ ರೇಖೆಗಳನ್ನು ನಿರ್ವಹಿಸುವುದಲ್ಲದೆ, ಅದಕ್ಕೆ ಪ್ರಾಶಸ್ತ್ಯವನ್ನು ಕೊಡುತ್ತವೆ. ಅಲ್ಲದೆ ಬಹಳಷ್ಟು ಇಚ್ಛಿಸುವ, ಶಾಂತಿಕರವಾದ ಆದರೆ ಪಡೆಯಲು ಬಹಳ ಕಷ್ಟವಾದ, ತಗ್ಗಾದ ಸಮತಲರೇಖೆಯನ್ನು ಒದಗಿಸುತ್ತವೆ.

ಯಶಸ್ವಿ ಹಸಿ ಬೇಲಿಯೆಂದರೆ, ಹಸಿ ಬೇಲಿ ಮೇಲಿನಿಂದ ತಳದವರೆಗೂ ಮತ್ತು ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೂ, ಒಂದೇ ಸಮವಾಗಿ ದಪ್ಪವಾಗಿರುವುದು. ಇದಕ್ಕೆ ಬಹಳ ಶ್ರದ್ಧೆ ಮತ್ತು ಗಮನಬೇಕು. ಮಗ್ಗಲುಗಳನ್ನು

ಸುಮಾರು ಓರೆಯಾಗಿರುವಂತೆ ಮತ್ತು ಮೇಲ್ಭಾಗದಲ್ಲಿ ಸ್ವಲ್ಪ ಕಡಿದಾಗಿರುವಂತೆ ಕತ್ತರಿಸಬೇಕು. ಇದರಿಂದಾಗಿ, ಕೆಳಗಿನ ಭಾಗಗಳು ತಮ್ಮ ಭಾಗದ ಸೂರ್ಯನ ಬೆಳಕನ್ನು ಹೊಂದುತ್ತವೆ. ಎತ್ತರ ಹಸಿ ಬೇಲಿಗಳಿಗೆ ಒಂದೇ ನೆರವೆಂದರೆ, ಏಕಾಂತತೆಯನ್ನು ಒದಗಿಸುವುದು ಮತ್ತು ಉದ್ಯಾನ ವಿನ್ಯಾಸ ಸಂಪೂರ್ಣವಾಗಿ ಎಲ್ಲಾ ಎತ್ತರವಾದ ಹಸಿ ಬೇಲಿಗಳ ಮೇಲೆ ಆಧಾರಗೊಂಡಿದೆ ಎಂಬುದನ್ನು ಗ್ರಹಿಸಬಹುದು. ಅವು ಹೊರಾಂಗಣದ ಗೋಡೆಗಳಾಗಿ, ಹೊರಾಂಗಣದ ಕೊಠಡಿಗಳನ್ನು, ಪ್ರತಿಯೊಂದೂ ಪ್ರತ್ಯೇಕವಾಗಿಯೂ ಮತ್ತು ಸ್ವಾವಲಂಬಿಕವಾಗಿಯೂ ಇರುವಂತೆ ನಿರ್ಮಿಸುತ್ತವೆ.

ಬಹುಶಃ ಹಸಿ ಬೇಲಿಗಳಿಗೆ ನಮ್ಮಲ್ಲಿ ಅಭಿರುಚಿ ಇಲ್ಲದಿರುವುದಕ್ಕೆ ಕಾರಣ, ಒರಟಾಗಿರುವ ಗೋರಂಟಿ ಹಸಿಬಳ್ಳಿಗಳಿಂದಾಗಿರಬಹುದು. ನಮ್ಮ ತೋಟಗಾರರು, ಹೊಸ ವಸ್ತುಗಳನ್ನು ಹಸಿ ಬೇಲಿಗಳಾಗಿ ಉಪಯೋಗಿಸುವುದರಲ್ಲಿ ಅಷ್ಟು ಕಲ್ಪನಾ ಶಕ್ತಿಯನ್ನು ಹೊಂದಿಲ್ಲ. ಕ್ಯಾಸರಿಕೆ, ಟೆಕೋಮ ಮತ್ತು ಕ್ರೋಟನ್ನಿನ ಕೆಲವು ವಿಧಗಳು ಮಾತ್ರ ಬಹಳ ಜನಪ್ರಿಯವಾಗುತ್ತಿವೆ.

## ನೀರು

ಯಾವ ಉದ್ಯಾನವೇ ಆಗಲಿ, ನೀರು ಯಾವುದಾದರೂ ರೂಪದಲ್ಲಿ ಇಲ್ಲದಿದ್ದರೆ, ಅದು ಸಂಪೂರ್ಣವೆಂದು ಕಲ್ಪಿಸಿಕೊಳ್ಳಬಾರದು. ನಮ್ಮಲ್ಲಿನ ಸೂರ್ಯನ ತಾಪ, ಧೂಳುಭರಿತ ಭೂದೃಶ್ಯದಲ್ಲಿ, ಮರ, ಹೂ ಅಥವಾ ಹುಲ್ಲಿನಂತೆ ನೀರು ಒಂದು ಪ್ರಮುಖವಾದ ವೈಶಿಷ್ಟ್ಯವಾಗಿರಬೇಕು. ಸಾಕಷ್ಟು ನೀರಿನ ಪ್ರಮಾಣದ ವ್ಯವಸ್ಥೆ ಇಲ್ಲದಿದ್ದರೆ, ಒಂದು ನಿರ್ದಿಷ್ಟ ಸ್ಥಳದಲ್ಲಿ ಉದ್ಯಾನವು ಇರುತ್ತಿರಲಿಲ್ಲವೆಂದು ಊಹಿಸಿಕೊಳ್ಳುತ್ತಾರೆ. ಆದರೆ ನೀರು ಪ್ರಶಸ್ತವಾದದ್ದು ಮತ್ತು ಕನಿಷ್ಠ ವ್ಯರ್ಥವಾಗುವಂತೆ ಜಾಗರೂಕತೆಯಿಂದ ಉಪಯೋಗಿಸಬೇಕು. ಇದರ ಅರ್ಥ ವಾಸ್ತವಿಕವಾಗಿ ಹದ್ದು ಮೀರಿ ಉಪಯೋಗಿಸುತ್ತಿದ್ದೇವೆ ಎಂಬುದಲ್ಲ. ಅದು ಮೇಲೆ ಚೆಲ್ಲಿದಂತೆ, ರಭಸದಿಂದ ಎಸೆದಂತೆ, ತಂತ್ರಗಳನ್ನು ಮಾಡುವಂತೆ ಉಪಯೋಗಿಸಬಹುದು. ಆದರೆ ಕಣ್ಣಿಗೆ ಕಾಣದ ಅವಿತಿಟ್ಟ ಪೈಪುಗಳು ಮತ್ತು ತಿರುಪು ಬಿರಡೆಗಳು, ಅಲ್ಪ ಪ್ರಮಾಣದ ನೀರು ನಿರಂತರವಾಗಿ ಉಪಯೋಗಿಸಲ್ಪಟ್ಟಿದೆ ಎಂಬ ಭರವಸೆ ಕೊಡಬೇಕು. ಒಂದು ಆಡಂಬರವನ್ನು ಪ್ರದರ್ಶಿಸಿದ ಮೇಲೆ, ನೀರು ಕೊಚ್ಚಿ ಹೋಗುವಂತೆ ಮಾಡುವುದು ದೋಷಾತ್ಮಕ.

ಹರಿಯುವ ನೀರು ಒಳ್ಳೆಯ ಮಹತ್ವವನ್ನು ಕೊಡುವಂತೆ ಕಾಣುತ್ತದೆ. ಸ್ವಲ್ಪ ನೀರು ಬಹಳ ದೂರ ಹರಿಯಬಹುದು. ಸರಿಯಾಗಿ ಅನುಗೊಳಿಸಿದ ಒಂದು ರೇಚಕ ಯಂತ್ರ ಅಥವಾ ಪಂಪು ಕೊನೆಯಿಲ್ಲದಂತೆ ನೀರನ್ನು ಸುತ್ತಬರಿಸುತ್ತದೆ; ಇದು ಅಮಿತ ಸರಬರಾಜಿನ ಕಲ್ಪನೆಯನ್ನು ಮೂಡಿಸುತ್ತದೆ. ಭೂಲಕ್ಷಣ ಸ್ವಭಾವವಾಗಿಯೇ ನೀರಿನ ಚಲನೆಯ ವೇಗವನ್ನು ಕಟ್ಟು ಮಾಡುತ್ತದೆ; ಆದರೆ ಮಣ್ಣಿನ ಕೆಲಸಗಳಿಂದ, ವೇಗವನ್ನು ಹತೋಟಿಯಲ್ಲಿಡುವುದು ಅಸಾಧ್ಯ. ಹೀಗೆ ಸೃಜಿಸಿದ ಜಲಪಾತಗಳು,

ಇನ್ನಷ್ಟು ಆಸಕ್ತಿಯನ್ನು ಹುಟ್ಟಿಸುತ್ತವೆ. ಆದರ್ಶವಾಗಿ, ನೀರನ್ನು ಬಗೆಬಗೆಯ ಪ್ರದೇಶಗಳಲ್ಲಿ ಹರಿಯುವಂತೆ ಮಾಡಬೇಕು – ಜೋಲಾಡುತ್ತಿರುವ ಮರಗಳ ಗಾಢ ನೆರಳಿನ ಕೆಳಗೆ, ಉಜ್ವಲ ಸೂರ್ಯನ ಪ್ರಕಾಶ ಬೀಳುತ್ತಿರುವ ತೇಪೆಗಳಿಗೆ ಅಡ್ಡಲಾಗಿ, ಕಡಿದಾದ ಬಂಡೆಗಳಿರುವ ಸ್ಥಳಗಳಲ್ಲಿ, ನಯವಾದ ಪ್ರಶಾಂತವಾಗಿರುವ ಕಾಲುವೆಗಳಲ್ಲಿ, ನೀರು ಬಹಳ ಜಾಗ್ರತೆಯಾಗಿ ತನ್ನಷ್ಟಕ್ಕೆ ತಾನೇ ಒಂದು ಜೀವಚಕ್ರವನ್ನು ಪಡೆಯುತ್ತದೆ. ಜೊಂಡುಗಳಿಂದ, ಹುಲ್ಲಿನಿಂದ, ಮೀನುಗಳಿಂದ, ಕೀಟಗಳಿಂದ ಮತ್ತು ಅವುಗಳನ್ನು ತಿನ್ನುವ ಪಕ್ಷಿಗಳಿಂದ ಈ ಜೀವಚಕ್ರ ಉಂಟಾಗುತ್ತದೆ. ಅಭ್ಯಾಗತರಿಗೆ ನಿಜವಾದ ಸಂತೋಷವೆಂದರೆ ತಮ್ಮ ಪಾದಗಳನ್ನು ತೂಗಾಡಿಸಲಿಕ್ಕೆ ಒಂದು ಸಂದರ್ಭ ದೊರಕುವುದು. ಏನೇ ಆಗಲಿ, ಇದರಿಂದಾಗಿ ಅನೇಕ ಸಮಸ್ಯೆಗಳು ಉದ್ಭವಿಸುತ್ತವೆ; ಆದರೆ ಹೊಳೆಯು ಉದ್ದವಾಗಿದ್ದ ಪಕ್ಷದಲ್ಲಿ, ಪರಿಸರಗಳನ್ನು ಕೆಡಿಸದೆ, ಒಂದು ಸಣ್ಣ ಮರದ ಏರು ಅಥವಾ ಒಡ್ಡನ್ನು ನಿರ್ಮಿಸಲು, ಸೂಕ್ತವಾದ ಸ್ಥಳವನ್ನು ಕಂಡುಹಿಡಿಯಲು ಸಾಧ್ಯವಾಗಬಹುದು.

ಆಳವಿಲ್ಲದ ನೀರಿನಲ್ಲಿ ಕಾಲಾಡಿಸುವುದು ಮತ್ತು ಸಣ್ಣ ಪುಟ್ಟ ಕಾಗದದ ನೌಕೆಗಳನ್ನು ಯಾನ ಮಾಡಿಸುವಂತಹ ಸುಖಾನುಭವಗಳು ದೇಶದಲ್ಲಿನ ಬಡವರಿಗೂ ಬೇಕಾದ ಸಾಧಾರಣ ಸಾರ್ವಜನಿಕ ಸಂತೋಷಗಳು. ಪಟ್ಟಣಗಳಲ್ಲಿ ವಾಸಮಾಡುವ ಅನೇಕರಿಗೆ ಇದು ಲಭ್ಯವಿಲ್ಲ. ಕಾಗದದ ನಾಲೆಗಳನ್ನು ಯಾನ ಮಾಡಿಸಲು ಸೂಕ್ತವಾದ ವ್ಯಾಪಕ ನೀರು ಬೇಕಾದರೆ ಯಾರಿಗಾದರೂ ಅಸಾಧಾರಣ ಅದೃಷ್ಟ ಅಥವಾ ಅಸಾಧಾರಣ ಐಶ್ವರ್ಯವಿರಬೇಕು. ಇಂಥ ಕಳೆದುಹೋದ ಸುಖಾನುಭವಗಳನ್ನು ಒದಗಿಸಲು ನಮ್ಮ ಸಾರ್ವಜನಿಕ ಉದ್ಯಾನಗಳು ಪ್ರಯತ್ನಿಸಬೇಕು.

ತನ್ನ ಉದ್ಯಾನದಲ್ಲಿ ನೀರು ಹೇಗೆ ಹರಿಯಬೇಕೆಂಬುದನ್ನು ನಕ್ಷೆಗಾರನು ತೀರ್ಮಾನಿಸಬೇಕು. ಪ್ರಕೃತಿಯಲ್ಲಿರುವಂತೆ ಆಳವಾದ ನೈಜಿಕ ಕೊಳಗಳನ್ನು ಮತ್ತು ಹೊಳೆಗಳನ್ನು ಅನುಕರಿಸುತ್ತಾನೆಯೆ? ಅಥವಾ ದೊಂಬರಾಟಗಳಂತೆ ನಮ್ಮ ಗಮನವನ್ನು ಸೆಳೆಯುವ ನೀರಿನ ಬುಗ್ಗೆಗಳಂತೆ ನಿರ್ಮಿಸುತ್ತಾನೆಯೆ? ನಾನು ಮೊದಲೆ ಹೇಳಿದಂತೆ ಒಟ್ಟಿನಲ್ಲಿ ಸ್ಥಿರ ನೀರಿಗಿಂತ, ಚಲಿಸುವ ನೀರು ಬಹಳ ಮಹತ್ವವನ್ನು ಹೊಂದಿರುತ್ತದೆ. ಅವುಗಳ ನರ್ತನ ಮತ್ತು ಚಲನೆಯ ಹಾರುವಿಕೆಯಲ್ಲಿ ಒಂದು ತರಹ ಚೈತನ್ಯ ಉಂಟು. ಅವುಗಳ ತಾಣವನ್ನು ಅನುಭವಿಸಲು ಅವುಗಳನ್ನು ಮುಟ್ಟಬೇಕಾಗಿಲ್ಲ.

ಉದ್ಯಾನಗಳಲ್ಲಿ "ನೀರು" ಎಂಬ ವಿಷಯ, ಒಂದು ಪುಸ್ತಕವನ್ನೇ ಬರೆಯುವಷ್ಟು ಪ್ರಾಮುಖ್ಯವಾದುದು. ಇಲ್ಲಿ ನಾವು ಎದುರಿಸಬಹುದಾದ ಮತ್ತು ಪ್ರಾಯಶಃ ಎದುರಿಸಿ ಗೆಲ್ಲಬಲ್ಲ ಕೆಲವು ಸಮಸ್ಯೆಗಳನ್ನು ವಿವರಿಸಲಾಗುವುದು. ಒಂದು ಉದ್ಯಾನದ ವೈಶಿಷ್ಟ್ಯ ಬಹುಮಟ್ಟಿಗೆ ನೀರಿನ ರೂಪ ಲಕ್ಷಣವನ್ನು ಕಟ್ಟು ಮಾಡುತ್ತದೆ. ಒಂದು ನೈಜಿಕವಾದ ಉದ್ಯಾನದಲ್ಲಿ ಬಹಳ ತೊಡಕಿನ ನೀರಿನ ಬುಗ್ಗೆ ಅತೃಪ್ತಿಕರವಾಗಿ ಕಾಣುತ್ತದೆ; ಅದೇ ಕ್ರಮಬದ್ಧ ಉದ್ಯಾನದಲ್ಲಿ ಕಲ್ಲಿನ ಕೊಳ ಸುತ್ತಲೂ

ಜರೀಗಿಡಗಳಿಂದ ಆವೃತವಾಗಿದ್ದು ನೈಜಿಕ ಕೊಳವನ್ನು ಅನುಕರಿಸಿದರೆ, ಅದು ಕೂಡ ಆ ಸ್ಥಳಕ್ಕೆ ಸರಿ ಹೊಂದುವುದಿಲ್ಲ. ಒಂದು ಕೃತಕ ಕೊಳಕ್ಕೆ ಬಹಳ ದುರಸ್ತಿಯ ಅವಶ್ಯಕತೆ ಇದೆ. ಅಂದರೆ ಮರಾಮತ್ತು ಮಾಡುವುದು, ಚೊಕ್ಕಟಗೊಳಿಸುವುದು, ಕಾಲಕಾಲಕ್ಕೆ ನೀರನ್ನು ಬದಲಾಯಿಸುವುದು ಇತ್ಯಾದಿ. ಇಂಥವನ್ನು ವ್ಯವಸ್ಥಿತಗೊಳಿಸದಿದ್ದರೆ, ನೀರನ್ನು ಇನ್ನೂ ಬೇರೆ ರೀತಿಯಲ್ಲಿ ಉಪಯೋಗಿಸುವುದು ಯೋಗ್ಯ. ಅರ್ಧ ತುಂಬಿದ ಅಥವಾ ಹೊಲಸು ತುಂಬಿದ ಮತ್ತು ಕೃತಕವಾಗಿ ಕಾಣುವ ಕೊಳಕ್ಕಿಂತ ಬೇರೆ ಇನ್ನಾವುದೂ ಅಷ್ಟು ನೀಚವಾಗಿ ಕಾಣಲಾರದು. ಅನೇಕ ವಿಷಯಗಳಲ್ಲಿ ನೈಜಿಕ ಕೊಳವನ್ನು ಮನ್ನಿಸಬಹುದು. ಯಾಕೆಂದರೆ ಪ್ರಕೃತಿ ಸುಂದರವಾಗಿದ್ದು ಅಷ್ಟು ಅಚ್ಚುಕಟ್ಟಾಗಿರುವುದಿಲ್ಲ; ಕೊಳ ಅಸಹ್ಯವಾಗಿ ಕಾಣಬಹುದು; ಆದರೆ ಆ ಹೊಲಸು ರಮಣೀಯತೆಯನ್ನು ಹೆಚ್ಚಿಸಬಹುದು. ಇನ್ನೊಂದು ಕಡೆ, ಒಂದು ನೈಜಿಕ ಕೊಳವನ್ನು ಮಾಟದಿಂದ ನಿರೂಪಿಸಿ ಕಟ್ಟುವುದು ಕಷ್ಟವಾದ ಕೆಲಸ. ಕೊಳವು ನೈಜಿಕವಾಗಿ ಕಾಣಲು ಎಷ್ಟೇ ಚಮತ್ಕಾರಗಳನ್ನು ಮಾಡಿದರೂ, ಅದು ಎಡವಟ್ಟಾಗಿ, ಗಡಿಬಿಡಿಯಾಗಿ ಕಾಣುವುದೆಂದು ಸಂದೇಹವಿಲ್ಲದೆ ಹೇಳಬಹುದು. ಅತ್ಯಂತ ಸುಲಭವೆಂದರೆ ಆಡಂಬರದ ಅಮೃತಶಿಲೆಯ ಕೊಳವನ್ನು ಕಟ್ಟುವುದು. ಕಲ್ಲಿನ ಕೊಳವನ್ನು ಕಟ್ಟುವುದರಲ್ಲಿ ನಾನು ಒಂದೇ ಒಂದು ಸಲಹೆಯನ್ನು ಕೊಡಬಲ್ಲೆ, ನೆಲ ಅಥವಾ ಭೂಮಿ ಮತ್ತು ನೀರು ಸಂಧಿಸುವ ಅಂಚು ಒಂದು ಮುಖ್ಯ ನಿರ್ಣಯಾತ್ಮಕ ವಿಷಯ. ಅದರ ಸಂಪೂರ್ಣ ಆಕೃತಿ ಸುಲಭ. ಆದುದರಿಂದ (1) ಅನುಕರಣೆಗೆ ಯೋಗ್ಯವಾದ ಒಂದು ಮೂಲ ಆಕೃತಿಯನ್ನು ಗಮನಿಸಿರಿ – ಯಾವುದಾದರೂ ನೈಜಿಕ ಕೊಳ ನೀವು ಇರುವ ಸ್ಥಳದಲ್ಲಿ ಇದ್ದು ಮತ್ತು ಅನುಕರಣೆ ಮಾಡಬೇಕೆಂಬ ಇಚ್ಛೆ ಇದ್ದರೆ, ಮತ್ತು (2) ಯಾವ ಕ್ಷೇತ್ರ ಬಗೆಗಳ ಬಗ್ಗೆ ಪ್ರಯತ್ನಿಸಬೇಡಿ. ನಾವು ನೋಡತ್ತಿರುವ ಬಂಡೆ ಅಥವಾ ಕಲ್ಲು ಸುಮಾರು ಒಂಬತ್ತು ಭಾಗ ಭೂಮಿಯಲ್ಲಿ ಹುದುಗಿದೆ ಮತ್ತು ಹತ್ತನೆಯ ಭಾಗ ಮಾತ್ರ ಹೊರಗಡೆ ಕಾಣುತ್ತದೆ ಎಂಬುದನ್ನು ಯಾವಾಗಲೂ ಗಮನದಲ್ಲಿಟ್ಟುಕೊಳ್ಳಿ. ನಾವು ಬಹಳ ದೂರದಿಂದ ಕಷ್ಟಪಟ್ಟು ಕಲ್ಲುಗಳನ್ನು ಎಳೆದು ತಂದಿರಬಹುದಾದ್ದರಿಂದ, ಅವುಗಳ ಹೆಚ್ಚಿನ ಭಾಗ ಮುಚ್ಚಲು ಮನಸ್ಸಿರುವುದಿಲ್ಲ; ಮತ್ತು ಅವುಗಳನ್ನು ಬಹಳ ಕೃತಕ ಗುಡ್ಡಗಳಲ್ಲಿ ಸಂಪೂರ್ಣವಾಗಿ ಕಾಣುವಂತೆ ನೆಡುವುದನ್ನು ಇಚ್ಛಿಸುತ್ತೇವೆ. ಅವು ಸಹಜವಾಗಿ ಕಾಣುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಅನೇಕ ಜಲಸಸ್ಯಗಳು, ನಯವಾದ ಕೃತಕ ಕೊಳಗಳಿಗಿಂತ ನೈಜಿಕವಾಗಿ ಕಾಣುವ ಕೊಳಗಳಲ್ಲಿ, ಸ್ವಸ್ಥಾನದಲ್ಲಿ ಇದ್ದಂತೆ ಭಾವಿಸುತ್ತವೆ. ಕೊಳದ ಸುತ್ತಲೂ, ಅಂಚುಗಳಲ್ಲಿ ನೆಡುವುದಕ್ಕೆ ಪರ್ಯಾಲೋಚನೆ ಬೇಕು. ಅಂಚುಗಳು ತೇವವಾಗಿ ಅಥವಾ ಜರುಗು ಭೂಮಿಯಾಗಿರುವುದಿಲ್ಲ. ಆದರೂ ಕೂಡ, ಯಾವುದಾದರೂ ಒಂದು ರೀತಿಯಲ್ಲಿ ಗಿಡಗಳು ನೀರಿನೊಂದಿಗೆ ಕೂಡಿಕೊಂಡಿರಬೇಕೆಂದು ಭಾವಿಸುತ್ತಾರೆ. ತೋಟಗಾರನಿಗೆ, ಅವು ನೀರಿನ ಹತ್ತಿರ ಬೆಳೆಯದಿರುವ ಸಸ್ಯಗಳೆಂದು ತಿಳಿದಿದ್ದರೂ ಕೂಡ, ಅವು

ನೀರಿನ ಬಹಳ ಹತ್ತಿರ ಬೆಳೆಯುವುವೆಂದು ತಿಳಿಯಬೇಕು. ಕೊನೆಗೆ ಅತ್ಯಂತ ದೊಡ್ಡ ಪ್ರಮಾದವೆಂದರೆ, ಕೊಳದ ಹತ್ತಿರ ಮಾಂಸಲಗಳನ್ನು ನೆಡುವುದು. ಇಂಥವನ್ನು ನಾನು ಅನೇಕ ಕಡೆ ನೋಡಿದ್ದೇನೆ.

## ಉದ್ಯಾನ ಮತ್ತು ಜನತೆ

ಸಾರ್ವಜನಿಕ ಉದ್ಯಾನಗಳನ್ನು ಜನತೆಯ ಅಭಿರುಚಿ ಹಾಗೂ ನಡತೆಗಳನ್ನು ಅರಿತು ವಿವಿಧ ರೀತಿಗಳಲ್ಲಿ ಮತ್ತು ಹಂತಗಳಲ್ಲಿ ರೂಪಿಸಲು ಅನುಕೂಲವಾಗುವಂತೆ ಬಳಸಬೇಕು. ಒಂದು ಸಾರ್ವಜನಿಕ ಉದ್ಯಾನ ವಿವಿಧ ಬಣ್ಣಗಳ, ಕಟಕಟೆಗಳ ಬೆಡಗನ್ನು ತೋರಿಸಿದರೆ ಅಂಥ ಕಟಕಟೆಗಳು ಬಹಳ ಅಂದವಾಗಿವೆ ಎಂದು ಭಾವಿಸಿಕೊಳ್ಳುವ ಸಾಧ್ಯತೆ ಇದೆ. ಅವರು ಪಾರ್ಕುಗಳಲ್ಲಿ ಸಿಮೆಂಟಿನಲ್ಲಿ ಮಾಡಿದ ಪ್ರಾಣಿಗಳನ್ನು ಮತ್ತು ಇತರೆ ವಿಕಾರಗಳನ್ನು ನೋಡಿದರೆ, ಇವು ಉದ್ಯಾನದಲ್ಲಿ ಇರಬೇಕಾದ ಅಭಿಲಾಷೆಯ ಅಂಶಗಳಿರಬೇಕೆಂದು ಪರಿಗಣಿಸುವರು. ಆದೇ ಅವರು ಚೆನ್ನಾಗಿ ಕೂಡಿದ ಮರಗಳನ್ನು, ಹೆಸರು ಚೀಟಿ ಅಂಟಿಸಿದ ಗಿಡಗಳನ್ನು ನೋಡಿದಾಗ, ಗಿಡಗಳಲ್ಲಿ, ಸಸ್ಯ ಶಾಸ್ತ್ರದಲ್ಲಿ ಮತ್ತು ತೋಟಗಾರಿಕೆಯಲ್ಲಿ ಅವರ ಆಸಕ್ತಿ ಹೆಚ್ಚಾಗುವುದಿಲ್ಲವೇನು ? ಪ್ರಕೃತಿ ಅಧ್ಯಯನಕ್ಕೆ, ಒಂದು ದೊಡ್ಡ ಸಾರ್ವಜನಿಕ ಉದ್ಯಾನ ಬಹಳಷ್ಟು ಸದಾವಕಾಶಗಳನ್ನು ಒದಗಿಸುತ್ತದೆ; ಗಿಡ, ಪ್ರಾಣಿ ಮತ್ತು ಪಕ್ಷಿಗಳ ಬಗ್ಗೆ ಜೀವನಪರ್ಯಂತ ಆಸಕ್ತಿಯನ್ನು ಹುಟ್ಟಿಸಲು ಇದರಿಂದ ಪ್ರಾರಂಭವಾಗಬಹುದು. ಇದರಿಂದ ನಿಜವಾಗಿಯೂ, ಎಲ್ಲಾ ನೈಜಿಕ ವಸ್ತುಗಳ ಮಹಿಮೆಯನ್ನು ಪ್ರಶಂಸಿಲು ಬೀಜ ಬಿತ್ತಿದಂತಾಗುತ್ತದೆ.

ನೈಜಿಕ ರೂಪಗಳು ಎಷ್ಟು ಸೌಂದರ್ಯಕರವಾಗಿದೆಯೆಂದರೆ ಅದರಿಂದ ಉದ್ಯಾನ ಶಿಲ್ಪಿಗೆ ಯಶಸ್ಸು ಕಟ್ಟಿಟ್ಟಂತೆ. ಆದರೆ ಆತನು ನಿರ್ಜೀವ ವಸ್ತುಗಳನ್ನು ಕನಿಷ್ಟ ಮಟ್ಟದಲ್ಲೂ ಮತ್ತು ಸಜೀವ ವಸ್ತುಗಳನ್ನು ಪರಮಾವಧಿ ಮಟ್ಟದಲ್ಲೂ ಉಪಯೋಗಿಸಬೇಕು. ಸಾರ್ವಜನಿಕ ಉದ್ಯಾನವನ್ನು ರಚಿಸಿದ ಮೇಲೆ, ಅದರ ದುರಸ್ತಿಗೆ ಸತತ ಖರ್ಚಿನ ಪ್ರಯತ್ನಗಳನ್ನು ಮಾಡುತ್ತಿರಬೇಕು. ಪ್ರಾಯಶಃ ಒಬ್ಬ ಅನನುಭವಿ ಭಾವಿಸುವುದಕ್ಕಿಂತ, ಸಾರ್ವಜನಿಕ ಸ್ಥಳಗಳ ಒಳ್ಳೆ ದುರಸ್ತಿ ಬಹಳ ಕಷ್ಟಕರ. ಭಾರತದಲ್ಲಿ ನಗರದ ಅಚ್ಚುಕಟ್ಟು ಅಥವಾ ಸಾರ್ವಜನಿಕ ಆಸ್ತಿಯನ್ನು ಜಾಗರೂಕತೆಯಿಂದ ಉಪಯೋಗಿಸಿ ಪರಿಪಾಲಿಸುತ್ತಾರೆಂಬುದನ್ನು ಸಮ್ಮತಿಸುವಂತಿಲ್ಲ. ಕಾಗದದ ಚೂರು, ಸಿಪ್ಪೆ, ಹೊಲಸನ್ನು ಎಲ್ಲೆಲ್ಲಿಯೂ ಬಿಸಾಡುತ್ತಾರೆ; ಆಸನಗಳು, ಬೆಂಚುಗಳು, ಕುಡಿಯುವ ನೀರಿನ ಬುಗ್ಗೆಗಳನ್ನು ದಯಾದಾಕ್ಷಿಣ್ಯವಿಲ್ಲದೆ ದುರುಪಯೋಗಿಸುತ್ತಾರೆ. ಪಾರ್ಕಿನ ಸಿಬ್ಬಂದಿ ವರ್ಗ, ಪಾರ್ಕನ್ನು ಚೊಕ್ಕಟವಾಗಿಯೂ ಮತ್ತು ಓರಣವಾಗಿ ಇಡುವ ಕೆಲಸದ ಜೊತೆಗೆ, ಅಭ್ಯಾಗತರಿಗೆ ತೋಟದ ವರ್ತನೆಗಳನ್ನು ಕಲಿಸುವುದು. ತಮ್ಮ ಕರ್ತವ್ಯವೆಂದು ಪರಿಗಣಿಸಬೇಕು. ಉದ್ಯಾನಗಳಿಗೆ ಬಹಳ ಕೆಡಕಾಗಿರುವುದು, ಉದ್ದೇಶ ಪೂರಕ ದುರಾಚಾರಗಳಿಂದಲ್ಲ, ಆದರೆ ಶುದ್ಧ ಅವಿವೇಕತನದಿಂದ ಎಂಬುದನ್ನು ನಾನು

ಕಂಡಿದ್ದೇನೆ. ಯುವ ಜನಾಂಗಕ್ಕೆ ಮತ್ತು ಮಕ್ಕಳಿಗೆ, ಪಾರ್ಕಿನ ಸೊಬಗನ್ನು ಆನಂದಿಸುವುದರ ಜೊತೆಗೆ ಅವರ ಜವಾಬ್ದಾರಿಗಳ ಬಗ್ಗೆ ಅರಿತುಕೊಳ್ಳುವಂತೆ ಮಾಡುವುದು ನಮ್ಮ ಕರ್ತವ್ಯ. ಮುಳ್ಳು ತಂತಿಗಳಿಂದ ಒಂದು ಹುಲ್ಲುಹಾಸನ್ನು ಕಾಪಾಡುವುದು ಸೋಲನ್ನು ಒಪ್ಪಿಕೊಂಡಂತೆ; ಅದಕ್ಕೆ ಬದಲಾಗಿ, ಹುಲ್ಲನ್ನು ಮತ್ತು ಗಿಡಗಳನ್ನು ನಷ್ಟಪಡಿಸಬೇಡಿ ಎಂಬ ವಿನಯದ ಬೇಡಿಕೆಗೆ, ಉತ್ಸಾಹಭರಿತ ಪ್ರತಿಕ್ರಿಯೆ ದೊರೆಯುತ್ತದೆ. ಚುರುಕಾದ ಮತ್ತು ಬುದ್ಧಿವಂತನಾದ ಉದ್ಯಾನದ ಮೇಲ್ವಿಚಾರಕ, ನಿಜವಾಗಿಯೂ ಮನಸ್ಸು ಮಾಡಿದರೆ, ಅಭ್ಯಾಗತರ ನಡತೆಯನ್ನು ನಿಗ್ರಹಿಸಬಹುದು. ಅದೇ ವೇಳೆಯಲ್ಲಿ ಅಭ್ಯಾಗತರಲ್ಲಿ ಸಾರ್ವಜನಿಕ ಕ್ಷೇತ್ರಗಳ ಬಗ್ಗೆ ಸ್ವಾಭಿಮಾನವನ್ನು ಮೂಡಿಸಬಹುದು ಮತ್ತು ಕೆಡಕನ್ನು ಉಂಟುಮಾಡದೆ, ಪಾರ್ಕುಗಳನ್ನು ಆನಂದಿಸುವ ಬಗ್ಗೆ ಅವರಲ್ಲಿ ಒಂದು ಹೊಸ ಜವಾಬ್ದಾರಿಯನ್ನು ಬೆಳೆಸಬಹುದು.

ನಮ್ಮ ದೇಶದಲ್ಲಿ, ಬಹಳಷ್ಟು ದೊಡ್ಡ ಪಾರ್ಕುಗಳ ಅವಶ್ಯಕತೆ ಇದೆ. ತಲೆಮಾರುಗಳಿಂದ ಬಂದ, ಅಮೂಲ್ಯವಾದ ಸುಂದರ ಸ್ಮಾರಕಗಳನ್ನು – ದೇವಸ್ಥಾನಗಳು, ಅರಮನೆಗಳು, ಕೋಟೆಗಳು, ಕಲ್ಲಿನಲ್ಲಿ ಕೊರೆದ ಗುಹೆಗಳು ಮತ್ತು ಮಸೀದಿಗಳನ್ನು ಹೊಂದಿರುವ ನಾವು ಬಹಳ ಅದೃಷ್ಟವಂತರು. ಸಂಪೂರ್ಣ ಮಧ್ಯಯುಗದ ಅತಿವೈಭವ ಪಟ್ಟಣಗಳಾದ ಅಂಬರ್, ಫತೆಪುರ್ ಸಿಕ್ರಿ, ಮಾಂಡು, ಹಂಪಿ, ಕುಲ್ದಾಬಾದ್, ಬಿಜಾಪುರ ಮತ್ತು ಅನೇಕ ಚಿಕ್ಕ ಪಟ್ಟಣಗಳನ್ನು ನಾವು ಹೊಂದಿದ್ದೇವೆ. ಇವುಗಳ ಪೈಕಿ ಬಹಳ ಮುಖ್ಯವಾದ ಸ್ಥಳಗಳಲ್ಲಿ ಒಂದಲ್ಲ ಒಂದು ರೀತಿಯ ಉದ್ಯಾನವನ್ನು ಮಾಡಿದ್ದಾರೆ. ಆದರೆ ಇನ್ನೂ ಬಹುಮಟ್ಟಿನ ಶ್ರದ್ಧೆ ಮತ್ತು ಧ್ಯಾನವನ್ನು ವಿಪುಲವಾಗಿ ಕೊಡಬೇಕು. ಉದಾಹರಣೆಗೆ, ತಾಜ್‌ಮಹಲ್ಲಿನ ದ್ವಾರದಲ್ಲಿ ಬೇವಿನ ಮರಗಳಿವೆ. (ಔಷಧಕ್ಕೆ ಉಪಯೋಗಿಸಬಹುದು, ಆದರೆ ಮನೋಹರವಾಗಿಲ್ಲ) ಮತ್ತು ಅವುಗಳ ತಳ ಚಿಕ್ಕ ಶಂಕುವಿನಾಕಾರದ ಕಲ್ಲೊಡ್ಡುಗಳಿಂದ ಅಲಂಕರಿಸಲ್ಪಟ್ಟಿದೆ. ಇದು ಉತ್ಕೃಷ್ಟ ಪ್ರಮಾಣಗಳಿಗಾಗಿ ಮೆಚ್ಚಿಗೆ ಪಡೆದ ಶ್ಲಾಘನೀಯ ತಾಜಮಹಲ್ಲಿಗೆ ಸಂಪೂರ್ಣ ವಿರೋಧವಾಗಿದೆ. ಅಜಂತ ಗುಹೆಗಳ ಸುತ್ತಲಿನ 'ಸೌಂದರ್ಯಗೊಳಿಸುವ ಯೋಜನೆ'ಯಲ್ಲಿ ಏಳು ಬಣ್ಣಗಳನ್ನು ಬಳಿದ ಕಬ್ಬಿಣದ ಕಟಕಟೆಗಳಿವೆ. ಶ್ರೀರಂಗಪಟ್ಟಣದಲ್ಲಿನ ಟಿಪ್ಪೂ ಸುಲ್ತಾನರ ಅರಮನೆ ಇದಕ್ಕೆ ವಿನಾಯತಿಯಂತೆ ಕಾಣುತ್ತದೆ. ಏಕೆಂದರೆ ಅದರ ಸುತ್ತಮುತ್ತಲಿನ ಪ್ರದೇಶಗಳು ಅಂದವಾಗಿ, ಗಂಭೀರವಾಗಿ ಮತ್ತು ಚೆನ್ನಾಗಿ ಇಡಲ್ಪಟ್ಟಿವೆ. ಹಳೇಬೀಡಿನ ದೇವಸ್ಥಾನದ ಸೊಗಸು ಅದರ ಪರಿಸರಗಳಿಂದ ಇನ್ನೂ ವೃದ್ಧಿಗೊಂಡಿದೆ. ಒಂದು ಸುಂದರವಾದ ನದಿಯ ದಡದಲ್ಲಿ ಏರುಪೇರುಗಳಿಂದ ಕೂಡಿದ ಸುತ್ತಲಿನ ಜಮೀನನ್ನು ಇದು ಒಳಗೊಂಡಿದೆ. ಉದ್ಯಾನದಲ್ಲಿ ವಿವೇಕಯುತವಾಗಿ ನಿರ್ಮಿಸಿದ ಹುಲ್ಲು ಹಾಸುಗಳು, ತಗ್ಗಾದ ಹಸಿಬೇಲಿಗಳು ದೇವಸ್ಥಾನದ ಸಮತಲರೇಖೆಗಳನ್ನು ಪುನರಾವರ್ತಿತಗೊಳಿಸುತ್ತಾ ವೀಕ್ಷಣೆಗೆ ಅಡ್ಡಬರದಂತಿವೆ. ಜಾಗರೂಕತೆಯಿಂದ, ಅಲ್ಲಲ್ಲಿ ಇರಿಸಿದ ಕೆಲವು ಬೋಗನ್‌ವಿಲಿಯಾಗಳು ಪ್ರಾಬಲ್ಯದ ಲಘುಬಿಂದುಗಳಾಗಿವೆ. ಎರಡನೆ ದರ್ಜೆಯ ಅನೇಕ ಸ್ಮಾರಕಗಳ ಸುತ್ತಮುತ್ತಲಿನ ಪ್ರದೇಶಗಳು ಬಹಳವಾಗಿ

ನಿರ್ಲಕ್ಷಿಸಲ್ಪಟ್ಟಿವೆ. ಉದ್ಯಾನಗಳಿಗೆ ಹೆಸರುವಾಸಿಯಾದ ಕರ್ನಾಟಕ ಸರಕಾರವು, ಬಿಜಾಪುರದಲ್ಲಿನ ಇಬ್ರಾಹಿಂ ರೋಜ ಸ್ಮಾರಕ ಪ್ರದೇಶಗಳನ್ನು ಕಾರಣವಿಲ್ಲದೇ ಬಹಳ ನಿರ್ಲಕ್ಷಿಸಿದೆ. ಮಹಾರಾಷ್ಟ್ರದಲ್ಲಿರುವ ಔರಂಗಾಬಾದಿನ ಬೀಬಿ–ಕ–ಮಕ್ಬರ್‌ನಲ್ಲಿ ಮೊಗಲರ ಎಲ್ಲ ವೈಶಿಷ್ಟಗಳೂ ಅಚ್ಚಳಿಯದೆ ಇದ್ದಾಗ್ಯೂ ಅದನ್ನು ಒಳ್ಳೆಯ ದುರಸ್ತಿಯ ಸ್ಥಿತಿಯಲ್ಲಿ ಇಟ್ಟಿಲ್ಲ. ಸಂಪೂರ್ಣ ಔರಂಗಾಬಾದ್ ಜಿಲ್ಲೆ, ಉದ್ಯಾನಗಳ ಸಂಬಂಧದಲ್ಲಿ ಅಷ್ಟು ಸಂತೋಷದಾಯಕವಾಗಿಲ್ಲ. ಎಲ್ಲೋರ ಗುಹೆಗಳ ಹತ್ತಿರವಿರುವ, ಮೊಗಲರ ಕೊನೆ ಆಳ್ವಿಕೆಯಲ್ಲಿ ಪೂರ್ಣವಾದ ಒಂದು ಸುಂದರ ಉದ್ಯಾನವನ್ನು ಪೌರಾಡಳಿತ ಉರ್ದುಶಾಲೆಯಾಗಿ ಉಪಯೋಗಿಸುತ್ತಿದ್ದಾರೆ. ಅಭೇದ್ಯವಾಗಿದ್ದ ದೌಲತಾಬಾದ್ ಕೋಟೆ ಇಂದಿಗೂ ಯುದ್ಧಕ್ಕೆ ಯೋಗ್ಯವಾದ ಕೋಟೆ - ಮರವಮಟ್ಟು ಹೆಸರಿಲ್ಲದಂತೆ ಬತ್ತಲೆಯಾಗಿದೆ. ಹೀಗಾಗಿ ಆಹ್ಲಾದಕರವಾದ ಓಡಾಟಕ್ಕೆ ಬದಲು ವಿಹಾರಿಗಳಿಗೆ ಮೇಲೆ ಹೋಗುವುದು ಒಂದು ಸಾಹಸವಾಗಿದೆ.

ದೊಡ್ಡ ನೆರಳು ನೀಡುವ ಮರಗಳು ಮಾತ್ರ ಇಂಥ ಸ್ಥಳಗಳನ್ನು ಮನೋಹರವಾಗಿ ಮತ್ತು ಆಹ್ಲಾದವಾಗಿ ಮಾಡಲು ಬೇಕಾಗಿವೆ. ಹೂಪಾತಿಗಳಂಥ ಇತರೆ ಉದ್ಯಾನ ಘಟಕಾಂಶಗಳು, ಅಂಥ ಸ್ಥಳಗಳನ್ನು ಉತ್ತಮ ಪಡಿಸುವ ಬದಲಾಗಿ, ಒಂದು ತರಹ ಅಸಂಸ್ಕೃತಿಯನ್ನು ಬೀರುತ್ತವೆ. ಇಂತಹ ಅಸಂಸ್ಕೃತಿ ಆಗಿಂದಾಗ್ಗೆ ರಾಷ್ಟ್ರೀಯ ವನಗಳಲ್ಲಿ ಕಾಣುತ್ತದೆ. ಇಲ್ಲಿ ಬಂಗಲೆಗಳ ಸುತ್ತಲಿನ ಪ್ರದೇಶದಲ್ಲಿ ಓರೆಯಾಗಿ ನೆಟ್ಟ ಇಟ್ಟಿಗೆಗಳ ಹಿಂದೆ, ಮೆರಿಗೋಲ್ಡ್, ಕ್ರೋಟನ್ ಮತ್ತು ಕ್ಯಾನಗಳಿಂಗ ನೆಡುತ್ತಾರೆ. ಈ ಸಣ್ಣ ಪುಷ್ಪಗಳು ಅಸಮಂಜಸ ಸ್ಥಳಗಳಲ್ಲಿ ಇರುವುದರಿಂದ, ಭವ್ಯ ಪ್ರಮಾಣದಲ್ಲಿರುವ ಅರಣ್ಯ ಸಸ್ಯ ವರ್ಗವನ್ನು ಪ್ರತ್ಯೇಕಿಸುವುದರಲ್ಲಿ ಯಶಸ್ವಿಯಾಗುತ್ತವೆ. ನೆರಳು ಮತ್ತು ಬಣ್ಣವನ್ನು ಅರಣ್ಯ ಬಂಗಲೆಗಳ ಸುತ್ತಲೂ ಒದಗಿಸಲು, ಕಾಡಿನಿಂದ ಆರಿಸಿದ ಸ್ಥಳೀಯ ಗಿಡಗಳನ್ನೇ ಉಪಯೋಗಿಸಬೇಕು.

ನೀರಿನ ಸಮಸ್ಯೆಗಳು, ಹಣದ ಸಮಸ್ಯೆಗಳು ಮತ್ತು ಇತರೆ ಅನೇಕ ಸಮಸ್ಯೆಗಳು ಸೂಕ್ತ ಉದ್ಯಾನಗಳನ್ನು ರಚಿಸುವಲ್ಲಿ ಇದೆಯೆಂದು ಒಪ್ಪಿಕೊಂಡರೂ ಕೂಡ, ನಮ್ಮ ಚಾರಿತ್ರಿಕ ಸ್ಮಾರಕಗಳ ಹತ್ತಿರ ಮತ್ತು ಸುತ್ತಲೂ ಸೂಕ್ತವಾದ ದೊಡ್ಡ ಮರಗಳನ್ನು ನೆಡಲು ಆರಂಭದಲ್ಲಿನ ಬಂಡವಾಳ ಕೆಲವೇ ರೂಪಾಯಿಗಳು. ಹಲವು ವರ್ಷಗಳಾದ ಮೇಲೆ, ಅದರ ಮೌಲ್ಯ ಎಣಿಕೆ ಮಾಡಲಾಗದಷ್ಟು ಆಗುತ್ತದೆ. ಉದ್ಯಾನದ ಇತರೆ ಭಾಗಗಳನ್ನು ಒಂದೆರೆಡು ಋತುಗಳಲ್ಲಿ ಕಟ್ಟಬಹುದು ಅಥವಾ ಬೀಳಿಸಬಹುದಾದರೂ, ಇಂದಿನವರೆಗೂ ಯಾರೂ ತತ್‌ಕ್ಷಣದ ದೊಡ್ಡ ಮರವನ್ನು ನಿರ್ಮಿಸಿಲ್ಲ. ಮರಗಳು ಒಂದು ಉದ್ಯಾನದ ಹೃದಯ ಮತ್ತು ಸಂಪತ್ತು. ಬಹುಶಃ ಈ ಪುಸ್ತಕದ ನಿಜವಾದ ಸಂಕಲ್ಪ, ವಾಚಕರು ಮರಗಳನ್ನು ನೆಡುವಂತೆ ಪ್ರೇರೇಪಿಸುವುದೇ ಆಗಿದೆ.